# ಚಿಕ್ಕಮಗಳೂರು ಜಿಲ್ಲೆಯ ಪ್ರವಾಸಿ ತಾಣಗಳು

ಮೈಸೂರು ವಿಶ್ವವಿದ್ಯಾನಿಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ


ಸಂಶೋಧಕರು

**ಶ್ವೇತ .ಸಿ**

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಮಾನಸಗಂಗೋತ್ರಿ

ಮೈಸೂರು–570006

ಮಾರ್ಗದರ್ಶಕರು

**ಡಾ.ಕೆ.ಪ್ರಭು** ಎಂ.ಎ., ಪಿಎಚ್.ಡಿ.

ಸಹಾಯಕ ಪ್ರಾಧ್ಯಾಪಕರು ಮತ್ತು ಅಧ್ಯಕ್ಷರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಮಾನಸಗಂಗೋತ್ರಿ

ಮೈಸೂರು–570006



ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಮಾನಸಗಂಗೋತ್ರಿ

ಮೈಸೂರು–570006

**2019**

# ಅಭ್ಯರ್ಥಿಯ ಪ್ರಮಾಣ ಪತ್ರ

**ಶ್ವೇತ ಸಿ** ಎಂಬ ನಾನು ಮೈಸೂರು ವಿಶ್ವವಿದ್ಯಾನಿಲಯದ ಪಿಎಚ್.ಡಿ ಪದವಿಗಾಗಿ ಒಪ್ಪಿಸುತ್ತಿರುವ **"ಚಿಕ್ಕಮಗಳೂರು ಜಿಲ್ಲೆಯ ಪ್ರವಾಸಿ ತಾಣಗಳು"** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವು ನನ್ನ ಸಂಶೋಧನೆಯ ಫಲ, ಇದನ್ನು **ಡಾ.ಕೆ.ಪ್ರಭು,** ಸಹಾಯಕ ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು. ಇವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದೇನೆ. ಈ ಮಹಾಪ್ರಬಂಧವನ್ನು ಈ ಮೊದಲು ಭಾಗಶಃವಾಗಿ ಆಗಲಿ ಅಥವಾ ಪೂರ್ಣವಾಗಿ ಆಗಲಿ, ಬೇರೆ ಯಾವುದೇ ಪದವಿ/ಡಿಪ್ಲೊಮಾಗಳಿಗಾಗಲಿ ಅಥವಾ ಅಂತಹ ಇತರೆ ಯಾವುದೇ ಪದವಿ ಪರೀಕ್ಷೆಗಳಿಗಾಗಲಿ ಒಪ್ಪಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ಸಂಶೋಧಕರ ಸಹಿ**

ದಿನಾಂಕ:

**ಮಾರ್ಗದರ್ಶಕರ ಸಹಿ**

ದಿನಾಂಕ:

**ಮುಖ್ಯಸ್ಥರ ಸಹಿ**
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಮಾನಸಗಂಗೋತ್ರಿ
ಮೈಸೂರು–570006

# ಮಾರ್ಗದರ್ಶಕರ ಪ್ರಮಾಣ ಪತ್ರ

ಮೈಸೂರು ವಿಶ್ವವಿದ್ಯಾನಿಲಯ ಮಾನಸಗಂಗೋತ್ರಿ ಮೈಸೂರು. ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದಲ್ಲಿ ಸಂಶೋಧಕರಾದ **ಶ್ವೇತ ಸಿ** ಅವರು **"ಚಿಕ್ಕಮಗಳೂರು ಜಿಲ್ಲೆಯ ಪ್ರವಾಸಿ ತಾಣಗಳು"** ಎಂಬ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನ ಮತ್ತು ಮೇಲ್ವಿಚಾರಣೆಯಲ್ಲಿ ಸಿದ್ದಪಡಿಸಿದ್ದಾರೆ ಎಂದು ಈ ಮೂಲಕ ನಾನು ದೃಢೀಕರಿಸುತ್ತೇನೆ. ಈ ಮಹಾಪ್ರಬಂಧವು ಈ ಮೊದಲು ಭಾಗಶಃವಾಗಲಿ ಅಥವಾ ಪೂರ್ಣವಾಗಲಿ ಬೇರೆ ಯಾವುದೇ ಡಿಗ್ರಿ, ಡಿಪ್ಲೊಮಾಗಳಿಗಾಗಲಿ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಲ್ಪಟ್ಟಿಲ್ಲ. ನನ್ನ ಅಭಿಪ್ರಾಯದಲ್ಲಿ ಈ ಮಹಾಪ್ರಬಂಧವು ತೃಪ್ತಿಕರವಾಗಿ ರಚಿಸಲ್ಪಟ್ಟಿದೆ ಮತ್ತು ನಿಬಂಧನೆಗಳಿಗನುಸಾರವಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಈ ಮಹಾಪ್ರಬಂಧವನ್ನು ಒಪ್ಪಿಕೊಳ್ಳಬಹುದು.

ಸ್ಥಳ: ಮೈಸೂರು

ದಿನಾಂಕ:

**(ಕೆ.ಪ್ರಭು)**
ಸಹಾಯಕ ಪ್ರಾಧ್ಯಾಪಕರು ಮತ್ತು ಅಧ್ಯಕ್ಷರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಮಾನಸಗಂಗೋತ್ರಿ, ಮೈಸೂರು

# ಕೃತಜ್ಞತೆಗಳು

ಸಂಶೋಧನಾ ವಿದ್ಯಾರ್ಥಿಯಾಗಿ ಕ್ಷೇತ್ರಕಾರ್ಯ ಮಾಡಲು ಹಣದ ಸಹಾಯವನ್ನು ನೀಡಿದಂತಹ UGC-University Grant Commission ಇವರಿಗೆ ನನ್ನ ಅನಂತ ಅನಂತ ಕೃತಜ್ಞತೆಗಳನ್ನು ಮೊದಲನೆಯದಾಗಿ ಸಲ್ಲಿಸುತ್ತೇನೆ.

ಸಂಶೋಧನೆಗೆ ತೊಡಗುವ ಉತ್ಸುಕತೆಯನ್ನು ವ್ಯಕ್ತಪಡಿಸಿದಾಗ ಅನುಮತಿಯನ್ನಿಟ್ಟು ಪ್ರೋತ್ಸಾಹಿಸಿ ಮಾರ್ಗದರ್ಶಕರಾಗಲು ಒಪ್ಪಿ ವಿಷಯವನ್ನು ಆಯ್ಕೆ ಮಾಡಲು ಸೂಚಿಸಿ ಅನುಮತಿಸಿ ನನ್ನೆಲ್ಲ ಅರೆಕೊರೆಗಳನ್ನು ತಿದ್ದಿ ಒಪ್ಪಿಗೊಳಿಸಿ ನನ್ನ ಸಂಶೋಧನಾ ಕಾರ್ಯ ಫಲಪ್ರದವಾಗಲು ಕಾರಣರಾದ ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಸಹಾಯಕ ಪ್ರಾಧ್ಯಾಪಕರು ಮತ್ತು ಅಧ್ಯಕ್ಷರು ಆದ ಡಾ.ಕೆ.ಪ್ರಭು ಇವರಿಗೆ ನಾನು ತುಂಬು ಹೃದಯದಿಂದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ವಿಭಾಗದ ನನ್ನ ನೆಚ್ಚಿನ ಗುರುಗಳಾದ ಹಾಗೂ ನನ್ನ ಸಂಶೋಧನಾ ವಿಷಯಕ್ಕೆ ಸಂಬಂಧಪಟ್ಟಂತೆ ಕೆಲವು ಮಾಹಿತಿಗಳನ್ನು ನೀಡಿದಂತಹ ಸಹ ಪ್ರಾಧ್ಯಾಪಕರಾದ ಡಾ.ಜಿ.ಕರಿಯಪ್ಪ, ಸಹಾಯಕ ಪ್ರಾಧ್ಯಾಪಕರಾದ ಡಾ.ವಿ.ಶೋಭ ರವರಿಗೂ ಹಾಗೂ ನಿವೃತ್ತ ಪ್ರಾಧ್ಯಾಪಕರುಗಳಾದ ಡಾ.ಎನ್.ಎಸ್.ರಂಗರಾಜು, ಡಾ.ಎಂ.ಪಿ.ಮಹದೇವಯ್ಯ, ಡಾ.ಎಂ.ವಿ.ಕೃಷ್ಣಪ್ಪ ರವರಿಗೂ ಹಾಗೂ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಹುಣಸೂರಿನ ಇತಿಹಾಸ ವಿಭಾಗದ ಸಹಾಯಕ ಪ್ರಾಧ್ಯಾಪಕರಾದ ಡಾ.ಬಿ.ಸಿ.ಸುರೇಶ ರವರಿಗೂ ಕ.ರಾ.ಮು.ವಿ.ವಿ.ಯ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಮುಖ್ಯಸ್ಥರಾದ ಡಾ.ಶೆಲ್ವಪಿಳ್ಳೆ ಅಯ್ಯಂಗಾರ್ ರವರು ಪ್ರವಾಸಿತಾಣಗಳ ಕುರಿತು ಸಂಶೋಧನೆ ಕೈಗೊಳ್ಳಲು ಕೆಲವು ಸಲಹೆ ಸೂಚನೆಗಳನ್ನು ಆಕಾರ ಗ್ರಂಥಗಳನ್ನು ನೀಡಿ ಸಹಕರಿಸಿದ್ದಾರೆ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಸಹಾಯಕ ಪ್ರಾಧ್ಯಾಪಕರಾದ ಡಾ.ವಿಜಯಕುಮಾರಿ ಕರಿಕಲ್ ರವರು ಪ್ರವಾಸಿತಾಣಗಳ ಅಭಿವೃದ್ಧಿಯ ಬಗ್ಗೆ ಕೆಲವು ಮಾಹಿತಿಗಳನ್ನು ನೀಡಿದ್ದಾರೆ ಹಾಗೂ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕೆ.ಆರ್.ನಗರದ, ವಾಣಿಜ್ಯ ವಿಭಾಗದ ಸಹಾಯಕ ಪ್ರಾಧ್ಯಾಪಕರಾದ ಡಾ.ಕರುಣೇಶ್‌ಕುಮಾರ್.ಕೆ, ಮೈಸೂರು ರವರು ನನ್ನ ಸಂಶೋಧನಾ ವಿಷಯಕ್ಕೆ ಸಂಬಂಧಪಟ್ಟಂತೆ ಕೆಲವು ಮಾಹಿತಿಗಳನ್ನು ನೀಡಿದ್ದಾರೆ ಇವರೆಲ್ಲರಿಗೂ ಕೂಡ ನಾನು ತುಂಬು ಹೃದಯದಿಂದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನಾನು ಬಿ.ಎ. ಪದವಿ ಮಹಾರಾಜ ಕಾಲೇಜು, ಮೈಸೂರು, ಮಾಡುತ್ತಿರುವಾಗಿನಿಂದಲು ಆಶೀರ್ವಾದದ ಹರಕೆಯನ್ನಿರಿಸಿದ ಮಾನವಶಾಸ್ತ್ರ ವಿಭಾಗದ ನಿವೃತ್ತ ಸಹಾಯಕ ಪ್ರಾಧ್ಯಾಪಕರಾದ ರಾಮಚಂದ್ರಪ್ಪರವರಿಗೆ ತುಂಬು ಹೃದಯದಿಂದ ನಾನು ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ ಹಾಗೂ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ವಿಭಾಗದ ಸಹಾಯಕ ಪ್ರಾಧ್ಯಾಪಕರುಗಳಾದ ಡಾ.ರೋಹಿತ್‌ಈಶ್ವರ್, ಡಾ.ಸಿ.ಇ.ಲೋಕೇಶ, ಡಾ.ಜ್ಞಾನಪ್ರಕಾಶ, ಡಾ.ರೇವಣ್ಣ, ಡಾ.ನೀಲಕಂಠಸ್ವಾಮಿ ರವರಿಗೂ ಇತಿಹಾಸ ವಿಭಾಗದ ಡಾ.ನಿರ್ಮಲ್‌ರಾಜ್ ಡಾ.ವಸಂತಕುಮಾರ್ ರವರಿಗೂ ನಾನು ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನಾನು ಉನ್ನತ ಶಿಕ್ಷಣ ಕೈಗೊಳ್ಳಲು ಸದಾ ಪ್ರೋತ್ಸಾಹ ನೀಡಿ ಸಹಕರಿಸಿದ ತಂದೆಯವರಾದ ದಿವಂಗತ ಎಂ.ಚಿಕ್ಕಶಾಂತಯ್ಯ ತಾಯಿ ಪ್ರಸನ್ನಕುಮಾರಿ, ಸಹೋದರಿ ಶ್ಯಾಮಲ, ಸಹೋದರರಾದ ರಮೇಶ, ನಾಗರಾಜು, ಹಾಗೂ ಸಂಶೋಧನಾ ಕಾರ್ಯದುದ್ದಕ್ಕೂ ಸೂಕ್ತ ಮಾರ್ಗದರ್ಶನ ನೀಡಿ ಅಗತ್ಯ ಆಕಾರ ಗ್ರಂಥಗಳನ್ನು ನೀಡಿ ಸಹಕರಿಸಿದ ಸಹೋದರ ಡಾ.ಸಿ.ಸುರೇಶ್‌ಅಂಬೈ ಇವರೆಲ್ಲರಿಗೂ ನಾನು ತುಂಬು ಹೃದಯದಿಂದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ಕ್ಷೇತ್ರ ಕಾರ್ಯದಲ್ಲಿ ಸಂಶೋಧನೆಗೆ ಸಂಬಂಧಪಟ್ಟಂತೆ ಮಾಹಿತಿಗಳನ್ನು ನೀಡಿದಂತಹ ಚಿಕ್ಕಮಗಳೂರಿನ ಪ್ರವಾಸೋದ್ಯಮ ಇಲಾಖೆಯವರಿಗೂ, ಗ್ರಾಮಗಳ ಮುಖಂಡರಿಗೂ ಹಲವು ಮಾಹಿತಿಗಳನ್ನು ಒದಗಿಸಿ ದೇವಾಲಯಗಳ ಹಾಗೂ ನೈಸರ್ಗಿಕ ಪ್ರವಾಸಿತಾಣಗಳ ಛಾಯಾಚಿತ್ರಗಳನ್ನು ತೆಗೆಯಲು ಅವಕಾಶ ಕಲ್ಪಿಸಿಕೊಟ್ಟಂತಹ ದೇವಾಲಯಗಳ ಅರ್ಚಕರಿಗೂ ಹಾಗೂ ಸಹಕಾರ ನೀಡಿದ ಸಮಸ್ತ ನಾಗರಿಕ ಬಂಧುಗಳಿಗೂ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ನನ್ನ ಸಂಶೋಧನಾ ಕಾರ್ಯಕ್ಕೆ ಗ್ರಂಥಗಳನ್ನು ಒದಗಿಸಿದ ಮೈಸೂರು ವಿಶ್ವವಿದ್ಯಾನಿಲಯದ ಗ್ರಂಥಪಾಲಕರಿಗೂ ಮತ್ತು ಗ್ರಂಥಾಲಯದ ಸಿಬ್ಬಂದಿ ವರ್ಗಕ್ಕೂ ನನ್ನ ಸಂಶೋಧನೆಯ ವಿಷಯಕ್ಕೆ ಸಂಬಂಧಿಸಿದಂತೆ ಕೆಲವು ಮಾಹಿತಿ ನೀಡಿದಂತಹ ಮೈಸೂರು ಪ್ರವಾಸೋದ್ಯಮ ಇಲಾಖೆಯವರಿಗೂ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ನಿರ್ದೇಶನಾಲಯ ಇಲಾಖೆಯ ನಿರ್ದೇಶಕರಾದ ಡಾ.ಆರ್.ಗೋಪಾಲ್ ಮತ್ತು ಗ್ರಂಥಾಲಯದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿರುವ ಪಾಂಡು ಅವರಿಗೂ ನನ್ನ ವಂದನೆಗಳು.

ಪತ್ರಗಾರ ವಿಭಾಗದ ಡಾ.ಗವಿಸಿದ್ದಯ್ಯ ಭಾರತೀಯ ಶಾಸನಶಾಸ್ತ್ರ ಇಲಾಖೆಯ ನಿರ್ದೇಶಕರಿಗೂ ಗ್ರಂಥಾಲಯದ ಗ್ರಂಥಪಾಲಕರಿಗೂ, ಮೈಸೂರು ಸಾರ್ವಜನಿಕ ಗ್ರಂಥಾಲಯ, ಐ.ಸಿ.ಎಚ್.ಆರ್.ಸಿ, ಡಾ.ಅರುಣಿ ಬೆಂಗಳೂರಿನ ಮಿಥಿಕ್ ಸೊಸೈಟಿಯ ಗ್ರಂಥಾಲಯದ ಸಿಬ್ಬಂದಿ ವರ್ಗದವರಿಗೂ, ಹಾಗೂ ಯೋಜನಾ (ಅಭಿವೃದ್ಧಿ ಮಾಸಪತ್ರಿಕೆ) ಬೆಂಗಳೂರು. ಸಂಪಾದಕಿ ಬಿ.ಕೆ.ಕಿರಣ್ಮಯಿ ಇವರಿಗೂ ನನ್ನ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದ ಕೆಲವು ಸ್ಥಳಗಳ ಬಗ್ಗೆ ಮಾಹಿತಿಯನ್ನು ನೀಡಿದ ಮಂಜುನಾಥ್.ಕೆ ಬೆಂಗಳೂರು, ಇವರೆಲ್ಲರಿಗೂ ನಾನು ತುಂಬು ಹೃದಯದಿಂದ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಸಂಶೋಧಕರಾದ ಡಾ.ಬೆಟ್ಟಪ್ಪ, ಡಾ.ಕಾಳಸ್ವಾಮಿ, ಕ್ಯೂರೇಟರ್ ಡಾ.ಶಶಿಕುಮಾರ್ ಹಾಗೂ ವಿಭಾಗದ ಗುಮಾಸ್ತರಾದ ಶ್ರೀಮತಿ ಉಷಾಗಣೇಶ್‌ರವರಿಗೂ ವಿಭಾಗದ ಸಹಾಯಕರಾದ ಶಿವರಾಜು, ಕಪನಯ್ಯರವರಿಗೂ ವಿಭಾಗದ ವಿದ್ಯಾರ್ಥಿಗಳಿಗೂ, ಸಂಶೋಧನಾ ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗೂ ಹಾಗೂ ಮಹಾರಾಜ ಕಾಲೇಜಿನ ನನ್ನ ಎಲ್ಲ ಸ್ನೇಹಿತರು ಸ್ನೇಹಿತೆಯರಿಗೂ ಇತರೆ ನನ್ನ ಎಲ್ಲ ಸ್ನೇಹಿತರುಗಳಿಗೆಲ್ಲರಿಗೂ ಹಾಗೂ ಮಹಾಜನ ಕಾಲೇಜಿನ ಉಷಾರಾಣಿ ಇವರೆಲ್ಲರಿಗೂ ನಾನು ಧನ್ಯವಾದಗಳನ್ನು ಸಲ್ಲಿಸುತ್ತೇನೆ.

ಬರವಣಿಗೆಯುದ್ದಕ್ಕೂ ಅಂದವಾಗಿ ಅಕ್ಷರ ಜೋಡನೆ ಮಾಡಿಕೊಟ್ಟ *ಪಡುವಾರಹಳ್ಳಿಯ ಸ್ನೇಹ ನೆಟ್ ವೇನ ಮಂಜುನಾಥ್, ರಾಜು* ರವರಿಗೂ ನನ್ನ ನುಡಿ ನಮನಗಳು.

ಸ್ಥಳ: ಮೈಸೂರು

ದಿನಾಂಕ: **(ಶ್ವೇತ .ಸಿ)**

# ಚಿಕ್ಕಮಗಳೂರು ಜಿಲ್ಲೆಯ ಪ್ರವಾಸಿ ತಾಣಗಳು

## ಪರಿವಿಡಿ

## ಸಂಕೇತಾಕ್ಷರಗಳು

| | | |
|---|---|---|
| ಎಂ.ಎ.ಆರ್. | – | ಮೈಸೂರು ಆರ್ಕಿಯಾಲಜಿಕಲ್ ರಿಪೋರ್ಟ್ |
| ಎ.ಕ.ಸಂ. | – | ಎಪಿಗ್ರಾಫಿಯಾ ಕರ್ನಾಟಿಕ ಸಂಪುಟ |
| ಎ.ಇ. | – | ಎಪಿಗ್ರಾಫಿಯಾ ಇಂಡಿಕಾ |
| ಇ.ಆ್ಯಂ. | – | ಇಂಡಿಯನ್ ಆ್ಯಂಡಿಕ್ವೆರಿ |
| ಕ.ಶಾ.ಸಾಂ.ಅ | – | ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ |
| ಕ್ವಾ.ಜ.ಎಂ.ಎಸ್ | – | ಕ್ವಾರ್ಟರ್ಲಿ ಜರ್ನ್ಲ್ ಆಫ್ ಮಿಥಿಕ್ ಸೊಸೈಟಿ |
| ಚಿ.ಮ. | – | ಚಿಕ್ಕಮಗಳೂರು |
| ಕ. | – | ಕಡೂರು |
| ತರಿ. | – | ತರೀಕೆರೆ |
| ಶೃ. | – | ಶೃಂಗೇರಿ |
| ನರ. | – | ನರಸಿಂಹರಾಜಪುರ |
| ಕೊ. | – | ಕೊಪ್ಪ |
| ಮೂಡ. | – | ಮೂಡಗೆರೆ |

# ಅಧ್ಯಾಯ – 1

## ಭೌಗೋಳಿಕ ಲಕ್ಷಣಗಳು, ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

## ಇದುವರೆಗೂ ನಡೆದಿರುವ ಅಧ್ಯಯನಗಳ ಸಮೀಕ್ಷೆ, ಅಧ್ಯಯನದ ವಿಧಾನ, ಅಧ್ಯಯನದ ಮಹತ್ವ

**ಪೀಠಿಕೆ:**

ಪ್ರವಾಸ ಎಂಬುದು ಮಾನವನ ಮೂಲಭೂತ ಚಟುವಟಿಕೆಗಳಲ್ಲಿ ಒಂದಾಗಿದೆ. ಮಾತ್ರವಲ್ಲ ಅವನ ಅವಿಭಾಜ್ಯ ಅಂಗವೂ ಆಗಿದೆ. ಕುತೂಹಲ ಅಥವಾ ಅನ್ವೇಷಣಾ ಗುಣ ಮಾನವನಲ್ಲಿ ಎಂದು ಹುಟ್ಟಿಕೊಂಡಿತೋ ಅಂದೇ ಪ್ರವಾಸೋದ್ಯಮ ಹುಟ್ಟಿ ಬೆಳೆಯಿತು. ವಲಸೆ, ಆಹಾರ, ವಸತಿಗಾಗಿ ಆರಂಭವಾದ ಪ್ರವಾಸವು ಧಾರ್ಮಿಕ ದಿಕ್ಕಿನಲ್ಲಿ ಸಾಗಿ ಕೊನೆಗೆ ಮೋಜಿಗಾಗಿ ಪ್ರವಾಸ ಕೈಗೊಳ್ಳುವ ಹಂತ ತಲುಪಿದೆ.

ಪ್ರವಾಸೋದ್ಯಮ ಕೇವಲ ಒಂದು ಉದ್ದಿಮೆಯಲ್ಲ, ಅದೊಂದು ಬೃಹತ್ ಉದ್ದಿಮೆಯಾಗಿ ಬೆಳೆಯುತ್ತಿದೆ. ಇದಕ್ಕೆ ಕಾರಣ ಬದಲಾಗುತ್ತಿರುವ ಮಾನವನ ಅಭಿರುಚಿ. ವಿರಾಮಕ್ಕಾಗಿ, ಮೋಜಿಗಾಗಿ, ಆನಂದಕ್ಕಾಗಿ ಆತ ಎಷ್ಟು ಬೇಕಾದರೂ ಖರ್ಚು ಮಾಡಲು ಸಿದ್ಧವಾಗಿದ್ದಾನೆ. ವಿರಾಮ ವೇಳೆಯನ್ನು ಕಳೆಯಲು ವೇತನ ಸಹಿತ ರಜಾ ಸೌಲಭ್ಯ ಇಂತಹ ಬೆಳವಣಿಗೆಗೆ ಕಾರಣವಾಗಿದೆ. ಜೊತೆಗೆ ಜಾಗತೀಕರಣದ ಪ್ರಭಾವ ಸಾರಿಗೆ ಸಂಪರ್ಕಗಳಲ್ಲಿ ಕ್ರಾಂತಿ, ಮಾಹಿತಿ ತಂತ್ರಜ್ಞಾನದಲ್ಲಾಗುತ್ತಿರುವ ವಿನೂತನ ಕ್ರಾಂತಿ – ಇವು ಜಗತ್ತನ್ನು ತುಂಬಾ ಹತ್ತಿರ ತರುತ್ತಿದೆ.

ಪ್ರವಾಸೋದ್ಯಮವು ಇಂದು ರಾಷ್ಟ್ರಾದಾಯಗಳಿಕೆ, ಉದ್ಯೋಗ ಸೃಷ್ಟಿ, ವಿದೇಶಿ ವಿನಿಮಯ ಗಳಿಕೆ, ಅಂತರರಾಷ್ಟ್ರೀಯ ಸಹಕಾರ ವೃದ್ಧಿಸುವ ಸಾಧನವಾಗಿ ಬಹುಕ್ಷಿಪ್ರಗತಿಯಲ್ಲಿ ಬೆಳವಣಿಗೆ ಸಾಧಿಸುತ್ತಿದೆ. ಕೆಲವು ಶ್ರೀಮಂತ ರಾಷ್ಟ್ರಗಳು ಪ್ರವಾಸೋದ್ಯಮದಿಂದಲ್ಲೇ ಅಪಾರ ಹಣ ಗಳಿಸುತ್ತಿದೆ. ಕೆಲ ಬಡದೇಶಗಳು ಈ ಉದ್ದಿಮೆಯಿಂದಲೇ ಬದುಕುತ್ತಿವೆ. ಹೀಗೆ ಬಹು ಆಯಾಮವುಳ್ಳ ಪ್ರವಾಸೋದ್ಯಮವು ಆರ್ಥಿಕವಲಯದಲ್ಲಿ ತ್ವರಿತಗತಿಯಲ್ಲಿ ಬೆಳವಣಿಗೆ ಸಾಧಿಸುವ ಉದ್ದಿಮೆಯಾಗಿ ಗುರ್ತಿಸಲ್ಪಟ್ಟಿದೆ. ಭಾರತವೂ ಸಹ ಪ್ರವಾಸೋದ್ಯಮದಲ್ಲಿ ಕ್ಷಿಪ್ರ ಪ್ರಗತಿ ಸಾಧಿಸುತ್ತಿರುವ ರಾಷ್ಟ್ರಗಳಲ್ಲಿ ಒಂದಾಗಿದೆ. ಭಾರತವು ಪ್ರಾಕೃತಿಕ ಹಾಗೂ ಸಾಂಸ್ಕೃತಿಕ ಸಂಪತ್ತಿನಿಂದ ಕೂಡಿದ ಶ್ರೀಮಂತಿಕೆಯ ನಾಡಾಗಿದೆ. ಇಲ್ಲಿಯ ಹಿಮಪರ್ವತಗಳು, ಗಿರಿಧಾಮಗಳು, ವನ್ಯಜೀವಿ ಕೇಂದ್ರಗಳು, ನದಿ ಸರೋವರಗಳು, ಅರಣ್ಯಧಾಮಗಳು, ಕಡಲ ತೀರಗಳು ಪ್ರವಾಸಿಗರನ್ನು ಕೈ ಬೀಸಿ ಕರೆಯುತ್ತಿವೆ.

ಎಲ್ಲಕ್ಕಿಂತ ಮಿಗಿಲಾಗಿ ಇಲ್ಲಿನ ಸಾಂಸ್ಕೃತಿಕ ಆಕರ್ಷಣೆ ವಿಶಿಷ್ಠವಾದುದು. ಅಸಂಖ್ಯಾತ ಧಾರ್ಮಿಕ ಕೇಂದ್ರಗಳು, ದೇವಾಲಯಗಳು, ಮೂರ್ತಿ ಶಿಲ್ಪಗಳು, ಗುಡಿ–ಗೋಪುರಗಳು, ಅರಮನೆಗಳು, ಮಸೀದಿಗಳು, ಚರ್ಚುಗಳು, ಚಿತ್ರಕಲೆ, ಸಂಗೀತ ಉತ್ಸವಗಳು ಪ್ರವಾಸಿಗರ ಸ್ವರ್ಗ ತಾಣಗಳಾಗಿವೆ. ಭಾರತವನ್ನು ಭೂತಲ ಸ್ವರ್ಗ; 'ಹಾಲು ಜೇನಿನ ನಾಡು' ಎಂದು ಕರೆಯುತ್ತೇವೆ. ಆದ್ದರಿಂದ ಭಾರತದಲ್ಲಿ ಪ್ರವಾಸೋದ್ಯಮಕ್ಕೆ ವಿಪುಲವಾದ ಅವಕಾಶಗಳಿವೆ. ಇದನ್ನು ಮನಗಂಡ ಭಾರತದ Tourism ಇಲಾಖೆ ಪ್ರವಾಸೋದ್ಯಮವನ್ನು ಒಂದು ಉದ್ದಿಮೆಯಾಗಿ ಘೋಷಿಸಿದೆ.[1]

ಪ್ರವಾಸೋದ್ಯಮ ಒಂದು ಜ್ಞಾನದ ಆಗರ. 'ದೇಶ ಸುತ್ತು ಕೋಶ ಓದು' ಎಂಬ ನಾಣ್ಣುಡಿಯಂತೆ ವ್ಯಕ್ತಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಪ್ರಯಾಣಿಸಿದಾಗ ಅವನ ಜ್ಞಾನ ವಿಸ್ತರಿಸುತ್ತಾ ಹೋಗುತ್ತದೆ. ಪ್ರವಾಸಿ ಸ್ಥಳದ ಜನಜೀವನ, ಸಂಸ್ಕೃತಿ, ಭಾಷೆ ಅರಿಯಲು ಸಹಕಾರಿಯಾಗುತ್ತದೆ. ರಾಷ್ಟ್ರ – ರಾಷ್ಟ್ರಗಳ ನಡುವೆ ಸಾಂಸ್ಕೃತಿಕ ಸಮಾಗಮಕ್ಕೆ ನಾಂದಿಯಾಗುತ್ತದೆ. ಪ್ರಾಂತೀಯತೆ, ಜಾತೀಯತೆ, ಧರ್ಮಾಂದತೆ ತೊಲಗಿ ವಿಶ್ವ ಭ್ರಾತೃತ್ವ ಭಾವನೆ ವೃದ್ಧಿಯಾಗುತ್ತದೆ. ಹಾಗಾಗಿ ಪ್ರವಾಸೋದ್ಯಮ ಒಂದು ಜಾತ್ಯಾತೀತ ಉದ್ಯಮ. ಇದು ಓದುಗರಿಗೆ ಒಂದು ರೊಮ್ಯಾಂಟಿಕ್ ಸಾಹಿತ್ಯವಿದ್ದಂತೆ. ಪ್ರವಾಸಿಗರಿಗೆ ಕುತೂಹಲ ಮೂಡಿಸುವ, ಕ್ರಿಯಾಶೀಲತೆ ಬೆಳೆಸುವ, ವಿದ್ಯಾರ್ಥಿಗಳಿಗೆ ಚೈತನ್ಯ ತುಂಬುವ, ಮೌನಿಯನ್ನು ಮಾತನಾಡಿಸುವ, ಅಪರಿಚಿತ ಸ್ಥಳವನ್ನು ಪರಿಚಿತ ಸ್ಥಳವನ್ನಾಗಿ ಮಾಡುವ ಶಕ್ತಿ ಪ್ರವಾಸೋದ್ಯಮಕ್ಕೆ ಇದೆ. ಪ್ರವಾಸೋಧ್ಯಮವು ಮೂಲತಃ ಸೌಕರ್ಯಗಳಿಂದ ನಡೆಯುವ ಉದ್ದಿಮೆಯಾಗಿದೆ.[2]

ಪ್ರವಾಸೋದ್ಯಮ ಜಗತ್ತಿನಲ್ಲೇ ಅತಿದೊಡ್ಡ ಉದ್ಯಮವಾಗಿದೆ. ಪ್ರಪಂಚದ ಒಟ್ಟು ಉತ್ಪನ್ನದಲ್ಲಿ ಶೇಕಡ ಹನ್ನೊಂದರಷ್ಟು, ಉದ್ಯೋಗಾವಕಾಶದಲ್ಲಿ ಶೇಕಡ ಎಂಟರಷ್ಟು ಹಾಗೂ ಜಗತ್ತಿನಾದ್ಯಂತ ಬಂಡವಾಳ ಹೂಡುವಿಕೆಯಲ್ಲಿ ಶೇಕಡ ಒಂಭತ್ತರಷ್ಟು ಈ ಉದ್ಯಮದ ಕೊಡುಗೆಯಾಗಿದೆ. ಪ್ರಪಂಚದಾದ್ಯಂತ 83 ರಾಷ್ಟ್ರಗಳಲ್ಲಿ ಪ್ರವಾಸೋದ್ಯಮ, ಐದು ಮುಖ್ಯ ಆದಾಯ ಮೂಲಗಳಲ್ಲಿ ಒಂದಾಗಿದೆ.

ಜಗತ್ತಿನ ಪ್ರವಾಸೋದ್ಯಮದ ಒಟ್ಟು ಆದಾಯದಲ್ಲಿ ಭಾರತದ ಪಾಲು ಶೇಕಡ 0.62 ರಿಂದ 0.67 ರಷ್ಟಿತ್ತು. ಈ ಪಾಲು 2003 ರಲ್ಲಿ ಶೇಕಡ 0.69 ರಷ್ಟು ಹೆಚ್ಚಳವಾಯಿತು. ಪ್ರವಾಸಿಗರನ್ನು ಆಕರ್ಷಿಸುವುದರಲ್ಲಿ ಭಾರತವು 53ನೆಯ ಸ್ಥಾನವನ್ನು ಹೊಂದಿದೆ. ಭಾರತಕ್ಕೆ 2003ರಲ್ಲಿ ಬಂದ ಪ್ರವಾಸಿಗರ ಸಂಖ್ಯೆ 27, 28, 214. 2002ರಲ್ಲಿ ಈ ಸಂಖ್ಯೆ 23,84,364 ಆಗಿತ್ತು. ಪ್ರವಾಸೋದ್ಯಮದಿಂದ ಭಾರತಕ್ಕೆ ವಿದೇಶಿ ವಿನಿಮಯ 1991ರಲ್ಲಿ 43,18,000

ರೂಪಾಯಿಗಳಿದ್ದು, 2003ರಲ್ಲಿ 1,64,29000 ರೂಪಾಯಿಗೆ ತಲುಪಿತು.[3] ಅಂದರೆ ನಾಲ್ಕು ಪಟ್ಟು ಹೆಚ್ಚಳ.

ಭಾರತಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಪ್ರವಾಸಿಗರು ಯುನೈಟೆಡ್ ಕಿಂಗ್‌ಡಮ್ ನಿಂದ ಆಗಮಿಸಿದ್ದು 1981ರಲ್ಲಿ ಈ ಸಂಖ್ಯೆ 1,16,684 ಆಗಿದ್ದರೆ 2003ರಲ್ಲಿ ಈ ಸಂಖ್ಯೆ 4,30,913 ಕ್ಕೆ ತಲುಪಿತು. ಎರಡನೆಯ ಕ್ರಮಾಂಕದಲ್ಲಿ ಅಮೇರಿಕಾವಿದ್ದು 2003ರಲ್ಲಿ ಅಲ್ಲಿಂದ ಬಂದ ಪ್ರವಾಸಿಗರ ಸಂಖ್ಯೆ 4,10,803. ಭಾರತಕ್ಕೆ ಬರುವ ಪ್ರವಾಸಿಗರಲ್ಲಿ ಮೂರನೆಯ ಸ್ಥಾನವನ್ನು ಶ್ರೀಲಂಕಾ ಹೊಂದಿದ್ದು, ನಂತರ ಕೆನಡ ಹಾಗೂ ಫ್ರಾನ್ಸ್ ದೇಶಗಳು ಬರುತ್ತವೆ.[4]

ಕರ್ನಾಟಕವು ಚಾರಿತ್ರಿಕ ಪರಂಪರೆಯುಳ್ಳ ದೇವಾಲಯ ಹಾಗೂ ಸ್ಮಾರಕಗಳನ್ನು, ಭವ್ಯವಾದ ಕೋಟೆ ಕೊತ್ತಲುಗಳನ್ನು, ಸಂಮೃದ್ಧವಾದ ವನ್ಯಜೀವರಾಶಿಗಳನ್ನು, ರಮಣೀಯವಾದ ನಿಸರ್ಗ ಸೌಂದರ್ಯವನ್ನು ಅತ್ಯಾಕರ್ಷಕ ಜಲಪಾತಗಳನ್ನು, ಮೈನವಿರೇಳಿಸುವ ಪರ್ವತ ಶ್ರೇಣಿಗಳನ್ನು ಹೀಗೆ ವಿಸ್ಮಯಗೊಳಿಸುವ, ಮನಸ್ಸಿಗೆ ಮುದ ಹಾಗೂ ತೃಪ್ತಿ ನೀಡುವ ನೂರಾರು ಪ್ರೇಕ್ಷಣೀಯ ಸ್ಥಳಗಳನ್ನು ಹೊಂದಿದೆ. ಕರ್ನಾಟಕ ರಾಜ್ಯದ 'ಗಿರಿವನಗಳ ಜಿಲ್ಲೆ' ಎಂದೇ ಹೆಸರಾದ ಚಿಕ್ಕಮಗಳೂರು ಜಿಲ್ಲೆಯು ಪ್ರವಾಸೋದ್ಯಮದ ದೃಷ್ಟಿಯಿಂದ ಪ್ರಾಮುಖ್ಯತೆಗಳಿಸಿದ್ದು ಪ್ರಸ್ತುತ ಕಾಲದ ಐತಿಹಾಸಿಕ ಪ್ರವಾಸೋದ್ಯಮ ವಲಯವಾಗಿ ಚಿಕ್ಕಮಗಳೂರು ಜಿಲ್ಲೆಯು ಹೊಂದುತ್ತಿರುವ ಬೆಳವಣಿಗೆಯನ್ನು ಅರಿಯುವ ದೃಷ್ಟಿಯಿಂದ ಈ ಪ್ರದೇಶಗಳ ಐತಿಹಾಸಿಕ ಮಹತ್ವವನ್ನು ಮತ್ತು ಈ ಪ್ರದೇಶಗಳಲ್ಲಿ ನೆರವೇರಬೇಕಾಗಿರುವ ಪ್ರವಾಸೋದ್ಯಮದ ಬೆಳವಣಿಗೆಯನ್ನು ಕುರಿತು ಸಮಗ್ರ ಅಧ್ಯಯನಾಭಿಲಾಶೆಯಿಂದ "ಚಿಕ್ಕಮಗಳೂರು ಜಿಲ್ಲೆಯ ಪ್ರವಾಸಿ ತಾಣಗಳು" ಎಂಬ ವಿಷಯವನ್ನು ಪ್ರಸ್ತುತ ಪ್ರೌಢ ಪ್ರಬಂಧದ ಅಧ್ಯಯನ ವಿಷಯವಾಗಿ ಆಯ್ಕೆಮಾಡಿಕೊಳ್ಳಲಾಗಿದೆ.

## ಜಿಲ್ಲೆಯ ಭೌಗೋಳಿಕ ಲಕ್ಷಣಗಳು

ಚಿಕ್ಕಮಗಳೂರು ಗಿರಿ-ಶಿಖರಗಳ ಊರು ಹಸಿರಿನ ತವರು, ಕಾಫಿಯ ನಾಡು, ಹೊಯ್ಸಳರ ನೆಲೆವೀಡು, ಕರ್ನಾಟಕದ ಕಿರೀಟ ಮುಳ್ಳಯ್ಯನಗಿರಿ 6317 ಅಡಿ ಎತ್ತರದ, ರಾಜ್ಯದ ಅತ್ಯುನ್ನತ ಗಿರಿಶಿಖರ ಕರ್ನಾಟಕದ ಅತ್ಯಂತ ಹಳೆಯ ಕೆಲವೇ-ಕೆಲವು ಜಿಲ್ಲೆಗಳಲ್ಲಿ ಚಿಕ್ಕಮಗಳೂರು ಜಿಲ್ಲೆಯು ಒಂದು.

ಚಿಕ್ಕಮಗಳೂರು ಜಿಲ್ಲೆ 12.55 ಮತ್ತು 13.54 ಡಿಗ್ರಿಗಳ ಉತ್ತರಅಕ್ಷಾಂಶದ ಮಧ್ಯದಲ್ಲಿಯೂ 75.51 ಡಿಗ್ರಿ ಮತ್ತು 76.22 ಡಿಗ್ರಿಗಳ ಪೂರ್ವ ರೇಖಾಂಶಗಳ ಮಧ್ಯದಲ್ಲಿದೆ. ಈ ಜಿಲ್ಲೆಯ

ಪೂರ್ವಕ್ಕೆ ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳೂ, ದಕ್ಷಿಣಕ್ಕೆ ಹಾಸನ ಜಿಲ್ಲೆಯೂ, ಪಶ್ಚಿಮಕ್ಕೆ ದಕ್ಷಿಣ ಕನ್ನಡ ಜಿಲ್ಲೆ, ಉತ್ತರಕ್ಕೆ ಶಿವಮೊಗ್ಗ ಮತ್ತು ದಾವಣಗೆರೆ ಜಿಲ್ಲೆಗಳು ಇವೆ. ಈ ಜಿಲ್ಲೆಯಲ್ಲಿ 7 ತಾಲೂಕುಗಳಿದ್ದು, ಚಿಕ್ಕಮಗಳೂರು ವಿಸ್ತೀರ್ಣದಲ್ಲಿ ಅತೀದೊಡ್ಡ ತಾಲೂಕಾಗಿದ್ದರೆ. (7.199.ಚ.ಕಿ.ಮೀ) ಶೃಂಗೇರಿ ಅತ್ಯಂತ ಚಿಕ್ಕ ತಾಲೂಕು ಕೇಂದ್ರವಾಗಿದೆ.[5] (433.7)

## ಚಾರಿತ್ರಿಕ ಹಿನ್ನೆಲೆ

ಸಮಗ್ರ ಐತಿಹಾಸಿಕ ಅಧ್ಯಯನದ ದೃಷ್ಠಿಯಿಂದ ತೀರಾ ಕಡೆಗಣಿಸಲ್ಪಟ್ಟಿರುವ ಜಿಲ್ಲೆಗಳಲ್ಲಿ ಚಿಕ್ಕಮಗಳೂರು ಜಿಲ್ಲೆಯು ಒಂದೆಂದು ಅತ್ಯಂತ ವಿಷಾದದಿಂದ ಹೇಳಬೇಕಾಗಿದೆ. ಸುದೀರ್ಘವಾದ ಚಾರಿತ್ರಿಕ ಹಿನ್ನೆಲೆಯು ಈ ಜಿಲ್ಲೆಯ ಸಂಸ್ಕೃತಿಯನ್ನು ಮತ್ತಷ್ಟು ಶ್ರೀಮಂತಗೊಳಿಸಿದೆ ಎನ್ನಬಹುದು. ರಾಮಾಯಣ ಕಾಲದಿಂದ ಬ್ರಿಟಿಷರ ಕಾಲದವರೆಗಿನ ಇತಿಹಾಸವು ಈ ಜಿಲ್ಲೆಯಲ್ಲಿ ಕಂಡುಬರುತ್ತವೆ. ರಾಮಾಯಣ ಕಾಲದಲ್ಲಿ ಚಂದ್ರದ್ರೋಣ ಪರ್ವತವೆಂದು ಹೇಳಲಾಗಿದೆ. ಮೂಡಿಗೆರೆ ತಾಲೂಕಿನಲ್ಲಿರುವ ಹೇರಿಕೆಗೆ ಸಮೀಪದಲ್ಲಿರುವ ಪಾಂಡವರ ಗುಡ್ಡದಲ್ಲಿ ಹಿಂದೆ ಪಾಂಡವರು ವನವಾಸ ಕಾಲದಲ್ಲಿ ಇದ್ದರೆಂಬುದು ಸ್ಥಳಪುರಾಣದಿಂದ ತಿಳಿದು ಬರುತ್ತದೆ. ಈ ಜಿಲ್ಲೆಯಲ್ಲಿ ಲಭ್ಯವಾಗಿರುವ 300 ಕ್ಕೂ ಅಧಿಕ ಶಾಸನಗಳು ಮತ್ತು ಇಲ್ಲಿ ಕಂಡುಬರುವ ದೇವಾಲಯಗಳು, ಬಸದಿ, ಕೋಟೆ ಮೊದಲಾದ ಸ್ಮಾರಕಗಳು ಮಿಗಿಲಾಗಿ ಈ ಪ್ರದೇಶವನ್ನಾಳಿದ ವಿವಿಧ ರಾಜ ಸಂತತಿಗಳು ಜಿಲ್ಲೆಯ ಸಾಂಸ್ಕೃತಿಕ ಹಿರಿಮೆಯನ್ನು ಎತ್ತಿ ಹಿಡಿಯುತ್ತವೆ.

ಸುಮಾರು 4–6ನೆಯ ಶತಮಾನಗಳವರೆಗೆ ಈ ಜಿಲ್ಲೆಯು ಬನವಾಸಿ ಕದಂಬರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳುವುದಕ್ಕೆ ಆಧಾರವಾಗಿ ಕದಂಬರ ಕೆಲವು ಸಾಂಸ್ಕೃತಿಕ ಲಕ್ಷಣಗಳು ಕಂಡುಬರುತ್ತವೆ. 7 ರಿಂದ 9ನೆಯ ಶತಮಾನದವರೆಗೆ ಈ ಜಿಲ್ಲೆಯ ಪಶ್ಚಿಮದ ಕೆಲವು ಭಾಗಗಳು ದಕ್ಷಿಣ ಕನ್ನಡ ಜಿಲ್ಲೆಯ ಆಳುಪರಿಗೆ ಸೇರಿದ್ದವೆಂದು ಇಲ್ಲಿಯ ಎರಡು ಶಾಸನಗಳಿಂದ ತಿಳಿದುಬರುತ್ತದೆ. ಶಿವಮೊಗ್ಗ ಪ್ರದೇಶದ ಹುಂಚದ ಸಾಂತರರ ರಾಜ್ಯ ಚಿಕ್ಕಮಗಳೂರಿನವರೆಗೂ ಹಬ್ಬಿದ್ದು, ಈ ಪ್ರದೇಶದ ಹೆಚ್ಚಿನ ಭಾಗವು ತಲಕಾಡು ಗಂಗರ ಆಳ್ವಿಕೆಗೆ ಒಳಪಟ್ಟಿತ್ತೆಂದು ಒಟ್ಟು ಹನ್ನೊಂದು ಶಾಸನಗಳಿಂದ ಗೊತ್ತಾಗುತ್ತದೆ. ಹೊಯ್ಸಳರಿಗೂ ಚಿಕ್ಕಮಗಳೂರು ಜಿಲ್ಲೆಗೂ ಪರಸ್ಪರ ಅನ್ಯೋನ್ಯತೆಯಿರುವುದು ಸಾಮಾನ್ಯ ಸಂಗತಿಯಾಗಿದೆ. ಹೊಯ್ಸಳರ ಮೂಲಪುರುಷ ಸಳನಿಗೆ ಜನ್ಮ ನೀಡಿದ ಹೆಗ್ಗಳಿಕೆ ಈ ಜಿಲ್ಲೆಗೆ ಸೇರುತ್ತದೆ. ಈ ಸ್ಥಳ ಇದ್ದದ್ದು ಮೂಡಿಗೆರೆಗೆ 12 ಕಿ.ಮೀ ದೂರದಲ್ಲಿರುವ ಸೊಸೆವೂರು ಅಥವಾ ಈಗಿನ **'ಅಂಗಡಿ'**ಗ್ರಾಮದಲ್ಲಿ, ಕ್ರಿ.ಶ. 11 ರಿಂದ 14ನೆಯ

ಶತಮಾನಗಳವರೆಗೆ ಈ ಜಿಲ್ಲೆಯು ಹೊಯ್ಸಳರ ಆಳ್ವಿಕೆಯಲ್ಲಿತ್ತು. ಇದಕ್ಕೆ ಸಂಬಂಧಿಸಿದಂತೆ ಒಟ್ಟು 122 ಶಾಸನಗಳು ಲಭ್ಯವಾಗಿದ್ದು ಅವುಗಳಲ್ಲಿ ಪ್ರಧಾನವಾಗಿ ವಿನಯಾದಿತ್ಯ, ವಿಷ್ಣುವರ್ಧನ 1ನೇ ನರಸಿಂಹ, 2ನೇ ನರಸಿಂಹ, 2ನೇ ಬಲ್ಲಾಳ, 3ನೇ ನರಸಿಂಹ, 3ನೇ ಬಲ್ಲಾಳ ಮೊದಲಾದ ಅರಸರಿಗೆ ಸೇರಿದ ಶಾಸನಗಳು ಹೆಚ್ಚಾಗಿದೆ.[6]

## ಅಧ್ಯಯನದ ಉದ್ದೇಶಗಳು

1. ಚಿಕ್ಕಮಗಳೂರು ಜಿಲ್ಲೆಯ ಐತಿಹಾಸಿಕ ಹಾಗೂ ನೈಸರ್ಗಿಕ ಪ್ರವಾಸಿ ತಾಣಗಳ ಅಧ್ಯಯನವನ್ನು ಮೂಲಾಧಾರಗಳ ಸಹಾಯದಿಂದ, ಸಂಶೋಧನೆಯ ಮೂಲಕ ಒಂದು ಪ್ರೌಢ ಪ್ರಬಂಧವನ್ನು ಹೊರ ತರುವುದೇ ನನ್ನ ಸಂಶೋಧನಾ ಕಾರ್ಯದ ಮೂಲ ಉದ್ದೇಶವಾಗಿದೆ.
2. ಚಿಕ್ಕಮಗಳೂರಿನ ಪ್ರವಾಸಿ ತಾಣಗಳ ಮಹತ್ವದ ವಿವರಣೆ ನೀಡುವುದು. ಇಲ್ಲಿಗೆ ಆಗಮಿಸುವ ಪ್ರವಾಸಿಗರಿಗಿರುವ ಅನುಕೂಲ (ಮೂಲಭೂತ ಸೌಕರ್ಯಗಳು) ಹಾಗೂ ಅನಾನುಕೂಲಗಳ ಬಗ್ಗೆ ಚರ್ಚಿಸಿ ಮಾರ್ಗೋಪಾಯಗಳನ್ನು ಕಂಡುಹಿಡಿಯುವುದು ನನ್ನ ಸಂಶೋಧನೆಯ ಉದ್ದೇಶವಾಗಿದೆ.
3. ಇದುವರೆವಿಗೂ ಬೆಳಕಿಗೆ ಬಾರದ ಪ್ರವಾಸಿ ತಾಣಗಳನ್ನು ಗುರುತಿಸಿ, ಈ ಪ್ರವಾಸಿ ತಾಣಗಳ ಐತಿಹಾಸಿಕ ಮತ್ತು ಭೌಗೋಳಿಕ ಮಹತ್ವವನ್ನು ವಿವರಿಸಿ. ಅವುಗಳನ್ನು ಅಭಿವೃದ್ಧಿಪಡಿಸಿ ಪ್ರವಾಸಿಗರಿಗೆ ಹೇಗೆ ಪರಿಚಯಿಸಬೇಕೆಂಬ ಮಾರ್ಗೋಪಾಯಗಳನ್ನು ಸೂಚಿಸುವುದು ನನ್ನ ಸಂಶೋಧನೆಯ ಪ್ರಮುಖ ಉದ್ದೇಶವಾಗಿದೆ.
4. ಚಿಕ್ಕಮಗಳೂರು ಜಿಲ್ಲೆಯ ಪ್ರವಾಸೋದ್ಯಮದ ಬೆಳವಣಿಗೆಯಲ್ಲಿ ಪ್ರಭಾವ ಬೀರುವ ಭೌಗೋಳಿಕ, ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಂಶಗಳ ಬಗ್ಗೆ ಅಧ್ಯಯನ ಮಾಡುವುದು ಹಾಗೂ ಜಿಲ್ಲೆಯು ಹೊಂದಿರುವ ಪ್ರವಾಸೋದ್ಯಮದ ಸ್ಥಿತಿಗತಿಗಳನ್ನು ಚರ್ಚಿಸುವುದು ನನ್ನ ಸಂಶೋಧನೆಯ ಉದ್ದೇಶವಾಗಿದೆ.
5. ತ್ಯಾಜ್ಯ ವಸ್ತುಗಳಿಂದ ಮುಕ್ತಗೊಳಿಸಿ ಪ್ರವಾಸಿ ತಾಣಗಳ ಸಂರಕ್ಷಣೆಗೆ ಕೈಗೊಳ್ಳಬಹುದಾದ ಕ್ರಮಗಳ ಬಗ್ಗೆ ಅಧ್ಯಯನ ಮಾಡುವುದು ನನ್ನ ಉದ್ದೇಶವಾಗಿದೆ.
6. ಉದ್ಯೋಗ ಸೃಷ್ಟಿಸಿರುವುದರಲ್ಲಿ ಚಿಕ್ಕಮಗಳೂರು ಜಿಲ್ಲೆಯ ಪ್ರವಾಸೋದ್ಯಮದ ಪಾತ್ರ ಮತ್ತು ಮತ್ತಷ್ಟು ಉದ್ಯೋಗಾವಕಾಶಗಳನ್ನು ಸೃಷ್ಟಿಸಲು ಕೈಗೊಳ್ಳಬಹುದಾದ ಮಾರ್ಗೋಪಾಯಗಳನ್ನು ಕಂಡುಹಿಡಿಯುವುದು ನನ್ನ ಸಂಶೋಧನೆಯ ಉದ್ದೇಶವಾಗಿದೆ.

## ಅಧ್ಯಯನದ ವಿಧಾನಗಳು

ಒಂದು ಸಂಶೋಧನಾ ಪ್ರಬಂಧವನ್ನು ರಚಿಸುವಲ್ಲಿ ಪೂರ್ವಯೋಜಿತ ಅಧ್ಯಯನ ಕ್ರಮವನ್ನು ಅನುಸರಿಸುತ್ತಿರುವುದು ಅತಿ ಮುಖ್ಯ. ಇದು ಈ ಅಧ್ಯಯನವನ್ನು ವ್ಯವಸ್ಥಿತವಾಗಿ ಸುಲಭವಾಗಿ ಕಟ್ಟಿಕೊಡುವಲ್ಲಿ ಸಹಾಯಕವಾಗುತ್ತದೆ. ಒಂದೇ ಅರ್ಥದಲ್ಲಿ ಹೇಳುವುದಾದರೆ ಸಂಶೋಧನಾ ಪ್ರಬಂಧಕ್ಕೆ ಪ್ರಥಮ ಹಾಗೂ ಅಂತಿಮ ರೂಪವನ್ನು ಈ ಅಧ್ಯಯನ ಕ್ರಮವೇ ನೀಡುತ್ತದೆ ಎಂದು ಹೇಳಬಹುದು. ಪ್ರಸ್ತುತ ಅಧ್ಯಯನವು "ಚಿಕ್ಕಮಗಳೂರು ಜಿಲ್ಲೆಯ ಪ್ರವಾಸಿ ತಾಣಗಳು" ಎಂಬ ಶೀರ್ಷಿಕೆಯನ್ನು ಹೊಂದಿದ್ದು, ಈ ಜಿಲ್ಲೆಯ ಪ್ರವಾಸೋದ್ಯಮದ ತಾಣಗಳನ್ನು ಮತ್ತು ಅವುಗಳ ಮಹತ್ವವನ್ನು ಅರಿಯಲು 2 ಬಗೆಯ ಅಧ್ಯಯನ ವಿಧಾನವನ್ನು ಅನುಸರಿಸಲಾಗಿದೆ.

ಪ್ರಾಥಮಿಕ ಹಂತದಲ್ಲಿ ಜಿಲ್ಲೆಯ ಭೌಗೋಳಿಕ, ಸಾಂಸ್ಕೃತಿಕ, ಐತಿಹಾಸಿಕ, ಜಾನಪದ ಪರಂಪರೆಯ ಬಗೆಗೆ ದೊರೆಯಲು ಮೂಲ ಮತ್ತು ಅನುಷಂಗೀಕ ಆಕಾರಗಳನ್ನು ಕ್ಷೇತ್ರ ಕಾರ್ಯದ ಮೂಲಕ ಕಲೆ ಹಾಕಿ ಅವುಗಳನ್ನು ಅಭ್ಯಸಿಸಿ ಅನುಷಂಗಿಕ ಮತ್ತು ಪ್ರಾಥಮಿಕ ಆಕಾರಗಳಲ್ಲಿ ಕಂಡುಬರುವ ವಿಷಯಗಳನ್ನು ಕ್ರೋಢೀಕರಿಸಿ ಆನಂತರ ಅಧ್ಯಯನದ ಆಧಾರದ ಮೇಲೆ ಗುರುತಿಸಿದ ಪ್ರವಾಸಿ ತಾಣಗಳಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡು ಅವುಗಳು ಹೊಂದಿರುವ ಐತಿಹಾಸಿಕ ಮತ್ತು ನೈಸರ್ಗಿಕ ಸಂಪತ್ತನ್ನು ಮತ್ತು ಸ್ಮಾರಕಗಳನ್ನು ಅಭ್ಯಸಿಸಿ ಅವುಗಳನ್ನು ಹೇಗೆ ಪ್ರವಾಸೋದ್ಯಮದ ಮಾರ್ಗಗಳಲ್ಲಿ ಮತ್ತು ವೃತ್ತಿಗಳಲ್ಲಿ ಅಡಕ ಮಾಡಬಹುದೆಂಬ ಸಮೀಕ್ಷೆಯನ್ನು ಮಾಡಲಾಯಿತು. ಇದಲ್ಲದೆ ಕೆಲವೊಂದು ಸ್ಥಳಗಳಲ್ಲಿ ಗಣ್ಯರು ಮತ್ತು ಸ್ಥಳೀಯರೊಂದಿಗೆ ಸಂದರ್ಶನವನ್ನು ನಡೆಸಿ ಅವರ ಅಭಿಪ್ರಾಯವನ್ನು ಸಂಗ್ರಹಿಸಲಾಯಿತು. ಒಟ್ಟಾರೆಯಾಗಿ ಈ ಅಧ್ಯಯನದಲ್ಲಿ ಜಿಲ್ಲೆಯ ಇತಿಹಾಸದ ಬಗೆಗಿನ ಪ್ರಾಥಮಿಕ ಆಕಾರಗಳಾದ ಶಾಸನ ಸಂಪುಟಗಳು (ಎಪಿಗ್ರಾಫಿಯ ಕರ್ನಾಟಕ ಸಂಪುಟ–11,12) ಚಿಕ್ಕಮಗಳೂರು ಜಿಲ್ಲೆಯ ಗೆಜೆಟಿಯರ್, ಮೈಸೂರಿನ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ – 2009 ರಲ್ಲಿ ಪ್ರಕಟಿಸಿರುವ "ಚಿಕ್ಕಮಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ" ಕೃತಿ ಮುಂತಾದ ಕೃತಿಗಳನ್ನು ಅನುಷಂಗಿಕ ಆಕಾರಗಳನ್ನು ಬಳಸಿಕೊಂಡು ಪ್ರಸ್ತುತ ಅಧ್ಯಯನವನ್ನು ನಡೆಸಲಾಗಿದೆ.

## ಅಧ್ಯಯನದ ವ್ಯಾಪ್ತಿ

ಅಧ್ಯಯನದ ವ್ಯಾಪ್ತಿಯು ಕರ್ನಾಟಕ ರಾಜ್ಯದ ಚಿಕ್ಕಮಗಳೂರು ಜಿಲ್ಲೆಗೆ ಸೀಮಿತವಾಗಿದ್ದು, ಈ ಜಿಲ್ಲೆಯಲ್ಲಿ ಕಂಡು ಬರುವ ಪ್ರಮುಖ ಐತಿಹಾಸಿಕ ಮತ್ತು ನೈಸರ್ಗಿಕ ಪ್ರವಾಸಿ ತಾಣಗಳ ಕುರಿತು ಅಧ್ಯಯನ ಮಾಡಲಾಗುವುದು.

## ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನವು ಭೌಗೋಳಿಕ ವ್ಯಾಪ್ತಿಯನ್ನು ಅಡಕಮಾಡಿಕೊಂಡು ಅಂದರೆ ಚಿಕ್ಕಮಗಳೂರು ಜಿಲ್ಲೆಗೆ ಸೀಮಿತವಾಗಿ ಜಿಲ್ಲೆಯಲ್ಲಿರುವ ಪ್ರವಾಸಿ ತಾಣಗಳ ಐತಿಹಾಸಿಕ ಪ್ರಾಮುಖ್ಯತೆಯನ್ನು ಅಧ್ಯಯನಮಾಡುವ ಮತ್ತು ಹೊಸ ಪ್ರವಾಸಿ ಮಾರ್ಗಗಳನ್ನು ಮತ್ತು ಪ್ರವಾಸಿ ಅನುಕೂಲತೆಗಳನ್ನು ಒದಗಿಸಿರುವ ಯೋಜನೆಗಳನ್ನು ಸೂಚಿಸುವ ಪ್ರಮುಖ ಉದ್ದೇಶವನ್ನು ತನ್ನದಾಗಿಸಿಕೊಂಡಿದೆ. ಅಲ್ಲದೆ ಉದ್ದೇಶವನ್ನು ಸಾಧಿಸಲು ತನ್ನ ಅಧ್ಯಯನದ ಇತಿಮಿತಿಯಲ್ಲಿ ತನ್ನ ಎಲ್ಲಾ ಶಕ್ತಿ ಸಾಮರ್ಥ್ಯವನ್ನು ಬಳಸುವ ಸದುದ್ದೇಶವನ್ನು ಹೊಂದಿದೆ. ಪ್ರಸ್ತುತ ಪ್ರೌಢ ಪ್ರಬಂಧ "ಚಿಕ್ಕಮಗಳೂರು ಜಿಲ್ಲೆಯ ಪ್ರವಾಸಿ ತಾಣಗಳು"ದ ಸ್ವರೂಪವು 6 ಅಧ್ಯಾಯಗಳನ್ನು ಅಡಕಮಾಡಿಕೊಂಡಿದೆ.

ಮೊದಲ ಅಧ್ಯಾಯವನ್ನು ಪೀಠಿಕೆ ಎಂದು ಹೆಸರಿಸಲಾಗಿದ್ದು, ಈ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶಗಳು, ವ್ಯಾಪ್ತಿ ಮತ್ತು ಸ್ವರೂಪ. ಭೌಗೋಳಿಕ ಲಕ್ಷಣಗಳು, ಚಾರಿತ್ರಿಕ ಹಿನ್ನೆಲೆ, ಅಧ್ಯಯನಗಳ ಸಮೀಕ್ಷೆಯನ್ನು ಹಾಗೂ ಅಧ್ಯಯನದ ಮಹತ್ವವನ್ನು ಒಳಗೊಂಡಿದೆ.

ಎರಡನೆಯ ಅಧ್ಯಾಯವು ಚಿಕ್ಕಮಗಳೂರು ಜಿಲ್ಲೆಯ ರಾಜಕೀಯ ಇತಿಹಾಸ ಮತ್ತು ಮನೆತನಗಳು ಜಿಲ್ಲೆಯ ಇತಿಹಾಸ, ಸಂಸ್ಕೃತಿ ಮತ್ತು ಪರಂಪರೆಯ ಬೆಳವಣಿಗೆಗೆ ನೀಡಿದ ಕೊಡುಗೆಯನ್ನು ಒಳಗೊಂಡಿದೆ.

ಮೂರನೆಯ ಅಧ್ಯಾಯವು ಪ್ರವಾಸೋದ್ಯಮದ ಅರ್ಥ ಮತ್ತು ವಿವರಣೆ. ಪ್ರವಾಸೋದ್ಯಮದ ಹುಟ್ಟು ಮತ್ತು ಬೆಳವಣಿಗೆ. ಭಾರತದಲ್ಲಿ ಪ್ರವಾಸೋದ್ಯಮದ ಬೆಳವಣಿಗೆ. ಕರ್ನಾಟಕದಲ್ಲಿ ಪ್ರವಾಸೋದ್ಯಮ ಹಾಗೂ ಪ್ರಸ್ತುತ ಅಧ್ಯಯನವಾದ ಚಿಕ್ಕಮಗಳೂರು ಜಿಲ್ಲೆಯ ಪ್ರವಾಸಿ ತಾಣಗಳ ಸಮೀಕ್ಷೆಯನ್ನು ಒಳಗೊಂಡಿದೆ.

ನಾಲ್ಕನೆಯ ಅಧ್ಯಾಯವು ಚಿಕ್ಕಮಗಳೂರು ಜಿಲ್ಲೆಯ ನೈಸಗಿಕ ಪ್ರವಾಸಿ ತಾಣಗಳ ಶೀರ್ಷಿಕೆಯನ್ನು ಹೊಂದಿದ್ದು, ಜಿಲ್ಲೆಯ ಎಲ್ಲಾ ನೈಸರ್ಗಿಕ ತಾಣಗಳ ವಿವರಣೆಯನ್ನು ಒಳಗೊಂಡಿದೆ. ಈ ಅಧ್ಯಾಯದಲ್ಲಿ ಮುಳ್ಳಯ್ಯನಗಿರಿ, ಬಾಬಾಬುಡನ್‌ಗಿರಿ, ಮುತ್ತೋಡಿ ಅರಣ್ಯಧಾಮ, ಸಿರಿಮನೆ ಜಲಪಾತ, ಹೆಬ್ಬೆ ಜಲಪಾತ, ಕಲ್ಲತ್ತಗಿರಿ ಜಲಪಾತ, ಕೆಮ್ಮಣ್ಣುಗುಂಡಿ ಮುಂತಾದ ಪ್ರವಾಸಿ ತಾಣಗಳ ವಿವರಗಳನ್ನು ಒಳಗೊಂಡಿದೆ.

ಐದನೆಯ ಅಧ್ಯಾಯವು ಚಿಕ್ಕಮಗಳೂರು ಜಿಲ್ಲೆಯ ಐತಿಹಾಸಿಕ ಪ್ರವಾಸಿ ತಾಣಗಳು ಎಂಬ ಶೀರ್ಷಿಕೆಯನ್ನು ಹೊಂದಿದೆ. ಇದು ಜಿಲ್ಲೆಯಾದ್ಯಂತ ಕಂಡುಬರುವ ಪ್ರಮುಖವಾದ ಮತ್ತು ಅಷ್ಟೇನು ಪ್ರಚಾರದಲ್ಲಿಲ್ಲದ ಐತಿಹಾಸಿಕ ಮಹತ್ವದ ತಾಣಗಳ ವಿವರಗಳನ್ನು ಒಳಗೊಂಡಿದೆ. ಈ ಅಧ್ಯಾಯದಲ್ಲಿ ಅಮೃತಪುರದ ಅಮೃತೇಶ್ವರ ದೇವಾಲಯ, ಕಳಸದ ಶ್ರೀ ಕಳಸೇಶ್ವರ ದೇವಾಲಯ, ಬೆಳವಾಡಿಯ ದೇವಾಲಯಗಳು, ಶೃಂಗೇರಿಯ ದೇವಾಲಯಗಳು, ಹೊರನಾಡು ಶ್ರೀ ಅನ್ನಪೂರ್ಣೇಶ್ವರಿ ದೇವಾಲಯ ಮುಂತಾದ ಐತಿಹಾಸಿಕ ಪ್ರವಾಸಿ ತಾಣಗಳ ವಿವರಗಳನ್ನು ಒಳಗೊಂಡಿದೆ.

ಅಂತಿಮವಾಗಿ ಅಧ್ಯಾಯನದ ಸಾಧನೆಯನ್ನು ಪರಿಶೀಲಿಸುವ ಕಾರ್ಯವನ್ನು ಉಪಸಂಹಾರದಲ್ಲಿ ಕೈಗೊಳ್ಳಲಾಗಿದೆ. ಈ ಅಧ್ಯಾಯದಲ್ಲಿ ಜಿಲ್ಲೆಯ ಕ್ಷೇತ್ರಕಾರ್ಯದಲ್ಲಿ ಕಂಡುಕೊಂಡ ಪ್ರವಾಸೋದ್ಯಮದ ಅಭಿವೃದ್ಧಿಗೆ ಕೈಗೊಳ್ಳಬೇಕಾದ ಮೂಲಭೂತ ಸೌಕರ್ಯಗಳು ಮತ್ತು ಈ ಕ್ಷೇತ್ರಗಳನ್ನು ಪರಿಚಯಿಸಲು ಮತ್ತು ಅಭಿವೃದ್ಧಿಪಡಿಸಲು ಕೈಗೊಳ್ಳಬೇಕಾದ ಮಾರ್ಗೋಪಾಯಗಳನ್ನು ಸೂಚಿಸಲಾಗಿದೆ. ಸಂಶೋಧನಾ ಕೃತಿಗೆ ಪೂರಕವಾಗಿ ಛಾಯಾಚಿತ್ರಗಳು ಹಾಗೂ ಪೂರಕವಾದ ಪರಾಮರ್ಶನ ಗ್ರಂಥಗಳ ಪಟ್ಟಿಗಳನ್ನು ನೀಡಲಾಗಿದೆ.

## ಅಧ್ಯಯನದ ಮಹತ್ವ

ಚಿಕ್ಕಮಗಳೂರು ಜಿಲ್ಲೆಯಾದ್ಯಂತ ಕಂಡುಬರುವ ಪ್ರಮುಖ ಐತಿಹಾಸಿಕ ಪ್ರವಾಸಿ ತಾಣಗಳಾದ ಶೈವ ದೇವಾಲಯಗಳು, ವೈಷ್ಣವ ದೇವಾಲಯಗಳು, ಜೈನ ಬಸದಿಗಳು ಮತ್ತು ಸ್ಮಾರಕಗಳು ಮತ್ತು ನೈಸರ್ಗೀಕ ಪ್ರವಾಸಿ ತಾಣಗಳ ಐತಿಹ್ಯ, ಇತಿಹಾಸ ಮತ್ತು ಸಂಸ್ಕೃತಿಯನ್ನು ಅವುಗಳ ಪ್ರಾಮುಖ್ಯತೆಯನ್ನು ಚಿತ್ರಿಸುವ ಪ್ರಯತ್ನವನ್ನು ಮಾಡಲಾಗಿದೆ.

ಒಟ್ಟಾರೆಯಾಗಿ ಚಿಕ್ಕಮಗಳೂರು ಜಿಲ್ಲೆಯು ಹೊಂದಿರುವ ಇತಿಹಾಸ ಮತ್ತು ಸಂಸ್ಕೃತಿ, ಪ್ರವಾಸಿ ತಾಣಗಳ ಸಂಕ್ಷಿಪ್ತ ಮಾಹಿತಿಯನ್ನು ಸಂಶೋಧನಾತ್ಮಕವಾಗಿ ಕಲೆಹಾಕುವುದು ಅಧ್ಯಯನದ ಮಹತ್ವವಾಗಿದೆ.

**ಪ್ರವಾಸಿ ತಾಣಗಳು**

ಗಿರಿವನಗಳ ಜಿಲ್ಲೆ ಚಿಕ್ಕಮಗಳೂರು, ಕ್ರಿ.ಶ. 1865 ರವರೆಗೆ ಕಡೂರು ಜಿಲ್ಲಾ ಕೇಂದ್ರವಾಗಿತ್ತು. ನಂತರ ಚಿಕ್ಕಮಗಳೂರು ಜಿಲ್ಲಾ ಕೇಂದ್ರವಾಯಿತು. ಭೌಗೋಳಿಕವಾಗಿ ಜಿಲ್ಲೆಯು ಉತ್ತರಕ್ಕೆ ಶಿವಮೊಗ್ಗ ಮತ್ತು ದಾವಣಗೆರೆ ಜಿಲ್ಲೆಗಳು, ಪೂರ್ವಕ್ಕೆ ಚಿತ್ರದುರ್ಗ ಹಾಗೂ ತುಮಕೂರು ಜಿಲ್ಲೆಗಳು ದಕ್ಷಿಣಕ್ಕೆ ಹಾಸನಜಿಲ್ಲೆ, ಪಶ್ಚಿಮಕ್ಕೆ ದಕ್ಷಿಣ ಕನ್ನಡಜಿಲ್ಲೆಗಳಿಂದ ಸುತ್ತುವರಿದಿದ್ದು, ಕಡೂರು, ಚಿಕ್ಕಮಗಳೂರು ಕೊಪ್ಪ, ಮೂಡಿಗೆರೆ ನರಸಿಂಹರಾಜಪುರ, ಶೃಂಗೇರಿ ಮತ್ತು ತರೀಕೆರೆ ತಾಲೂಕುಗಳಿಂದ ಕೂಡಿದ ಜಿಲ್ಲೆಯು 138 ಕಿ.ಮೀ ಉದ್ದ, 88 ಕಿ.ಮೀ ಅಗಲವಿದ್ದು 7.199 ಚ.ಕಿ.ಮೀ ನಿಂದ ಕೂಡಿದ ಭೂ ಪ್ರದೇಶವಾಗಿದೆ.[7]

ವಿಶ್ವದಲ್ಲಿಯೇ ದಕ್ಷಿಣ ಭಾರತದ ಪಶ್ಚಿಮ ಘಟ್ಟಗಳ ಅರಣ್ಯ, ಜೀವ ವೈವಿಧ್ಯಮಯವಾದ ಸ್ಥಳ ಹಾಗೂ ಮಾನವನ ಜೀವನಕ್ಕೆ ಸಂಬಂಧಿಸಿದಂತೆ ಸಾವಿರಾರು ವರ್ಷಗಳ ಕಾಲಾನುಕ್ರಮದ ಇತಿಹಾಸವನ್ನು ತಿಳಿಸುತ್ತದೆ. ಎಂದು **'ಸುಭಾಷ್‌ಚಂದ್ರನ್'** ಅಭಿಪ್ರಾಯಪಟ್ಟಿದ್ದಾರೆ. ಪಶ್ಚಿಮಘಟ್ಟಗಳ ಸೌಂದರ್ಯಕ್ಕೆ ಮಾರುಹೋದ **'ಪೆಟ್ರೋಡೆಲ್ಲಾ ವೆಲ್ಲೆ'** ಎಂಬ ವಿದೇಶಿ ಪ್ರವಾಸಿಗ ಈ ಘಟ್ಟಗಳನ್ನು ನೋಡಿ **'ಇಟಲಿಯ ಅಪನೈನ್ ಪರ್ವತ ಶ್ರೇಣಿ'** ಯನ್ನು ಕಂಡಂತಾಯಿತೆಂದು ಹೇಳಿದ್ದಾನೆ.[8] ಕರ್ನಾಟಕದ ಅರಣ್ಯ ಪ್ರದೇಶವಾದ ಚಿಕ್ಕಮಗಳೂರು ಜಿಲ್ಲೆ ಅತ್ಯಂತ ಎತ್ತರದದಟ್ಟ ಅರಣ್ಯದ ಸಮಕುಸುಮ. ಇದು ಸಮುದ್ರಮಟ್ಟದಿಂದ ಸರಾಸರಿ 5000ಪೂ. ಎತ್ತರದಲ್ಲಿ ಹರಡಿಕೊಂಡಿದೆ. ಕುದುರೆಮುಖ, ಮುಳ್ಳಯ್ಯನಗಿರಿ, ಬಾಬಾಬುಡನಗಿರಿ, ಶಿಖರಗಳು ಅವುಗಳಿಂದ ಕೆಳಭಾಗಕ್ಕೆ ಬರತೊಡಗಿದರೆ, ಹಳ್ಳ–ಕೊಳ್ಳ, ಕಣಿವೆಗಳು, ಹುಲ್ಲಿನ ಬಯಲುಗಳು, ಜುಳು ಜುಳು ಹರಿವ ಝರಿಗಳು ತೊರೆಗಳು ಕಂಗೊಳಿಸುತ್ತವೆ.

**ಚಿಕ್ಕಮಗಳೂರು ಜಿಲ್ಲೆಯ ಐತಿಹಾಸಿಕ ಪ್ರವಾಸಿ ತಾಣಗಳು**

ಬೆಳವಾಡಿಯ ದೇವಾಲಯಗಳು, ಅಮೃತೇಶ್ವರ ದೇವಾಲಯ, ಅಮೃತಪುರ, ಕಳಸದ ಶ್ರೀ ಕಳಶೇಶ್ವರ ದೇವಾಲಯ, ಸೋಮೇಶ್ವರ ದೇವಾಲಯ, ಸೋಮಪುರ, ಶೃಂಗೇರಿಯ,

ದೇವಾಲಯಗಳು, ಹೊರನಾಡು ಶ್ರೀ ಅನ್ನ ಪೂರ್ಣೇಶ್ವರಿ ದೇವಾಲಯ, ಯಗಟಿಪುರದ ಶ್ರೀ ಪ್ರಸನ್ನ ಮಲ್ಲಿಕಾರ್ಜುನ ಸ್ವಾಮಿ ದೇವಾಲಯ, ದೇವವೃಂದ ಹಾಗೂ ಮರಗುಂದದ ದೇವಾಲಯಗಳು, ಬೀರೂರು ಹಾಗೂ ಬಗ್ಗವಳ್ಳಿ ದೇವಾಲಯಗಳು, ಸಿಂಹನ ಗದ್ದೆಯ ಬಸದಿ ಮಠ ಇತ್ಯಾದಿ,

**ಹಾಗೆಯೇ ನೈಸರ್ಗಿಕ ಪ್ರವಾಸಿ ತಾಣಗಳಾಗಿ**

ಮುಳ್ಳಯ್ಯನ ಗಿರಿ, ರತ್ನಗಿರಿ ಬೋರೆ, ಬಾಬಾಬುಡನ್ ಗಿರಿ, ಕೆಮ್ಮಣ್ಣು ಗುಂಡಿಯ ಕೃಷ್ಣರಾಜೇಂದ್ರ ಗಿರಿಧಾಮ ಮತ್ತು ಕಲ್ಲತ್ತಗಿರಿ ಮತ್ತು ಹೆಬ್ಬೆ ಜಲಪಾತಗಳು ಇತ್ಯಾದಿ. ಪ್ರವಾಸಿ ತಾಣಗಳ ವಿವರಣೆ ಪ್ರಸ್ತುತ ಪ್ರಬಂಧದಲ್ಲಿದೆ.

**ಈವರೆಗಿನ ಅಧ್ಯಯನಗಳ ಅವಲೋಕನ**

ಕರ್ನಾಟಕವು ಶ್ರೀಮಂತ ಸಂಸ್ಕೃತಿ ಪರಂಪರೆಯುಳ್ಳ ನಾಡು. ಇದರ ಮಡಿಲಲ್ಲಿ ಅಸಂಖ್ಯಾತ ದೇವಾಲಯಗಳು, ಅರಮನೆಗಳು, ಕೋಟೆ ಕೊತ್ತಲುಗಳು, ಗಿರಿಧಾಮಗಳು, ಜಲಪಾತಗಳು, ಮಸೀದಿಗಳು, ಚರ್ಚ್‌ಗಳು, ಮ್ಯೂಸಿಯಂಗಳು ಇದ್ದು ಪ್ರವಾಸಿಗರನ್ನು ಸೆಳೆಯುತ್ತಿದೆ. ಇವೆಲ್ಲ ಇತಿಹಾಸದಿಂದಾದ ಪ್ರವಾಸ ಉತ್ಪನ್ನಗಳಾಗಿವೆ. ಅವುಗಳಿಂದಲೇ ಕರ್ನಾಟಕಕ್ಕೆ ಪ್ರವಾಸಿಗರು ಬರುತ್ತಿದ್ದಾರೆ. ಈ ನಿಟ್ಟಿನಲ್ಲಿ ನಾನು **'ಚಿಕ್ಕಮಗಳೂರು ಜಿಲ್ಲೆಯ ಪ್ರವಾಸಿ ತಾಣಗಳು'** ಶೀರ್ಷಿಕೆಯಡಿ ಸಂಶೋಧನೆ ಕೈಗೊಂಡಿದ್ದೇನೆ.

ನಮ್ಮ ಅಧ್ಯಯನಕ್ಕೆ ಅನುವಾಗುವಂತಹ ಕೆಲವು ಬಿಡಿ ಲೇಖನಗಳು ಈ ಸಮಯದಲ್ಲಿ ಉಲ್ಲೇಖಾರ್ಹವಾಗಿದೆ. ಮೈಸೂರಿನ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ 2009 ರಲ್ಲಿ ಪ್ರಕಟಿಸಿರುವ **"ಚಿಕ್ಕಮಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ"** ಎಂಬ ಡಾ.ಆರ್.ಗೋಪಾಲ್ ಅವರ ಸಂಪಾದಕತ್ವದ ಕೃತಿ. ಈ ಕೃತಿಯಲ್ಲಿ ಡಾ.ಚನ್ನಕ್ಕ ಪಾವಟೆ ಅವರು **'ಚಿಕ್ಕಮಗಳೂರು ಜಿಲ್ಲೆಯ ಗಿರಿಶೃಂಗಗಳ ವೈಶಿಷ್ಟ್ಯ'** ಎಂಬ ಸಂಶೋಧನಾ ಲೇಖನದಲ್ಲಿ ಚಿಕ್ಕಮಗಳೂರು ಹೆಸರು ಬಂದ ಬಗೆ ಮತ್ತು ಇತಿಹಾಸ ಪ್ರಸಿದ್ದ ಕ್ಷೇತ್ರ ಶೃಂಗೇರಿಯ ಹೆಸರು ಬಂದ ಬಗೆಗಳ ಬಗ್ಗೆ ಸವಿವರವಾಗಿ ಮಾಹಿತಿ ನೀಡಿದ್ದಾರೆ. ಮಹದೇವ ಅವರ **'ಕಿಗ್ಗದ ಋಷ್ಯ ಶೃಂಗೇಶ್ವರ ದೇವಾಲಯ'** ಎಂಬ ಸಂಶೋಧನಾ ಲೇಖನವು ಶೃಂಗೇರಿ ತಾಲ್ಲೂಕಿನ ಯಾತ್ರಾ ಸ್ಥಳವಾದ ಕಿಗ್ಗದ ಋಷ್ಯ ಶೃಂಗೇಶ್ವರ ದೇವಾಲಯ ವಾಸ್ತು ವಿವರಣೆ ಮತ್ತು ಪುರಾಣೇತಿಹಾಸವನ್ನು ತಿಳಿಸುತ್ತದೆ.

ಕೌಂಡಿತ್ಯ ಅವರು **"ಕರ್ನಾಟಕದ ಪುಣ್ಯಕ್ಷೇತ್ರಗಳು"** ಎಂಬ ಕೃತಿಯಲ್ಲಿ ಚಿಕ್ಕಮಗಳೂರು ಜಿಲ್ಲೆಯ ಪ್ರವಾಸಿ ತಾಣಗಳಾದ ಶೃಂಗೇರಿಯ ವಿದ್ಯಾಶಂಕರ ದೇವಾಲಯ, ಹೊರನಾಡಿನ ಶ್ರೀ ಅನ್ನಪೂರ್ಣೇಶ್ವರಿ ದೇವಾಲಯ ಮತ್ತು ಬಾಬಾಬುಡನ್‌ಗಿರಿ ಕ್ಷೇತ್ರಗಳ ಬಗ್ಗೆ ಬಸ್ಸಿನ ಮಾರ್ಗಸೂಚಿ, ವಸತಿ ವ್ಯವಸ್ಥೆಗಳ ಬಗ್ಗೆ ಮಾಹಿತಿ ನೀಡಿದ್ದಾರೆ. ಇದು ಪ್ರವಾಸಿಗರಿಗೆ ತುಂಬಾ ಉಪಯುಕ್ತ ಮಾಹಿತಿಯಾಗಿದ್ದು, ನಾನು ಈ ಪ್ರದೇಶಗಳಿಗೆ ಕ್ಷೇತ್ರಕಾರ್ಯಕ್ಕೆ ಹೋಗಲು ನೆರವಾಗಿದೆ.

ಪ್ರೊ.ಕೆ.ಎಸ್.ನಾಗಪತಿ ಅವರ **'ಪ್ರವಾಸೋದ್ಯಮ ಅಭಿವೃದ್ಧಿ ಒಂದು ಹೊಸ ಆಯಾಮ'**[9] ಎಂಬ ಕೃತಿಯು ಪ್ರಯಾಣ ಮಾಡುವಾಗ ತೆಗೆದುಕೊಳ್ಳಬೇಕಾದ ಮುನ್ನೆಚ್ಚರಿಕೆ ಕ್ರಮಗಳು ಮತ್ತು ಪೂರ್ವ ಸಿದ್ಧತೆಗಳ ಬಗ್ಗೆ ಸವಿವರವಾಗಿ ತಿಳಿಸಿದ್ದಾರೆ.

- ವಿದ್ಯಾಭಾರತಿ ಪ್ರೆಸ್ ಪ್ರಕಟಿಸಿರುವ **'ಪವಿತ್ರ ಕ್ಷೇತ್ರ ಶೃಂಗೇರಿ'** ಎಂಬ ಕೃತಿಯಲ್ಲಿ ಶೃಂಗೇರಿಯಲ್ಲಿ ಕಂಡುಬರುವ ಎಲ್ಲಾ ದೇವಾಲಯಗಳು ಮತ್ತು ಯಾತ್ರಿಕರಿಗೆ ಇರುವ ಸೌಕರ್ಯಗಳ ಬಗ್ಗೆ ಮಾಹಿತಿ ಇದೆ.
- ಬಿ.ಸಿ. ಸುರೇಶ ಅವರ **"ಚಿಕ್ಕಮಗಳೂರು ಜಿಲ್ಲೆಯ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ ಒಂದು ವಿವರಣಾತ್ಮಕ ಅಧ್ಯಾಯನ"** ಎಂಬ ಅಪ್ರಕಟಿತ ಪಿಎಚ್.ಡಿ. ಪ್ರೌಢ ಪ್ರಬಂಧದಲ್ಲಿ ಚಿಕ್ಕಮಗಳೂರು ಜಿಲ್ಲೆಯ ಐತಿಹಾಸಿಕ ಪ್ರವಾಸಿ ತಾಣಗಳಾದ ಶೃಂಗೇರಿಯ ವಿದ್ಯಾಶಂಕರ ದೇವಾಲಯ, ಬೆಳವಾಡಿಯ ವೀರನಾರಾಯಣ ದೇವಾಲಯ, ಆಸಂದಿಯ ಗಂಗೇಶ್ವರ & ಬ್ರಹ್ಮೇಶ್ವರ ದೇವಾಲಯ, ಅಮೃತಾಪುರದ ಅಮೃತೇಶ್ವರ ದೇವಾಲಯಗಳ ನಿರ್ಮಾಣ ಮತ್ತು ವಾಸ್ತುಶಿಲ್ಪದ ಬಗ್ಗೆ ವಿವರಣೆ ನೀಡಿದ್ದಾರೆ.
- ಕೆಂಗೇರಿ ಚಕ್ರಪಾಣಿ ಅವರ **"ದೇಗುಲಗಳ ದಾರಿ"**[10] ಎಂಬ ಕೃತಿಯಲ್ಲಿ ಚಿಕ್ಕ ಮಗಳೂರು ಜಿಲ್ಲೆಯ ಐತಿಹಾಸಿಕ ಪ್ರವಾಸಿ ತಾಣಗಳಾದ ಆಸಂದಿ, ಅಮೃತಾಪುರ, ಯಳಂಬಳಸೆ, ಬ್ರಹ್ಮಸಮುದ್ರ ಸ್ಥಳಗಳಿಗೆ ಹೋಗುವ ಬಸ್ಸಿನ ಮಾರ್ಗ ಚಿಕ್ಕಮಗಳೂರು ತಾಲ್ಲೂಕು ಕೇಂದ್ರದಿಂದ ಇರುವ ಅಂತರವನ್ನು ತಿಳಿಸಿದ್ದಾರೆ.
- ಡಾ.ಎಚ್.ವಿ. ನರಸಿಂಹಮೂರ್ತಿ ಅವರ **"ಶೃಂಗೇರಿ ಶ್ರೀ ಶಾರದಾಪೀಠ"** ಎಂಬ ಕೃತಿಯು ಧಾರ್ಮಿಕ, ಶೈಕ್ಷಣಿಕ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ಶೃಂಗೇರಿ ಶ್ರೀ ಶಾರದಾಪೀಠದ ಕೊಡುಗೆಗಳ ಬಗ್ಗೆ ವಿವರಣೆ ಇದೆ.

ಪರೇಶ್‌ನಾಥ್ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿರುವ **'ಗೃಹಶೋಭಾ'** ಮಾಸಿಕದ ಏಪ್ರಿಲ್ 2015ರ ಪ್ರವಾಸ ವಿಶೇಷಾಂಕದ ಪುಟ ಸಂಖ್ಯೆ 77ರಲ್ಲಿ ಡಾ. ಮಲ್ಲಿಕಾರ್ಜುನ ಕುಂಬಾರ ಅವರ **'ಸಿರಿಮನೆ ಜಲಪಾತ'** ಲೇಖನ ಇದೆ. ಇದು ಶೃಂಗೇರಿಯಿಂದ ಸುಮಾರು 17 ಕಿ.ಮೀ. ದೂರದಲ್ಲಿರುವ ಸಿರಿಮನೆ ಜಲಪಾತದ ಬಗ್ಗೆ ಪೂರ್ಣ ವಿವರಣೆ ಹೊಂದಿದೆ.

ಡಾ.ಡಿ.ಆರ್.ಪಾಂಡುರಂಗ ಅವರ **'ಕರ್ನಾಟಕದ ದೇವಾಲಯಗಳು ಮತ್ತು ಪ್ರೇಕ್ಷಣೀಯ ಸ್ಥಳಗಳು'**[11] ಎಂಬ ಕೃತಿಯಲ್ಲಿ ಚಿಕ್ಕಮಗಳೂರು ಜಿಲ್ಲೆಯ ಪ್ರವಾಸಿ ತಾಣಗಳಾದ ಅಮೃತಪುರ, ಆಸಂದಿ, ಕಳಸೇಶ್ವರ, ಕುದುರೆಮುಖ, ಬಾಬಾಬುಡನ್‌ಗಿರಿ, ಮೂಡಿಗೆರೆ, ಅಂಬಳೆ ಬೆಳವಾಡಿ ಸ್ಥಳಗಳ ಬಗ್ಗೆ ಮಾಹಿತಿ ನೀಡಿದ್ದಾರೆ.

ಕೆ.ಎನ್.ಅಶ್ವತ್ಥಪ್ಪ ಅವರ **"ಭಾರತದಲ್ಲಿ ಪ್ರವಾಸೋದ್ಯಮ ಇತಿಹಾಸ"**[12] ಕೃತಿಯು ಪ್ರವಾಸೋದ್ಯಮದ ಅಧ್ಯಯನ ಮತ್ತು ಪ್ರವಾಸೋದ್ಯಮದ ಅಭಿವೃದ್ಧಿಯ ಬಗ್ಗೆ ವಿವರಣೆ ನೀಡುತ್ತದೆ. ನನ್ನ ಸಂಶೋಧನೆಗೆ ಈ ಕೃತಿಯು ಬಹು ಉಪಯುಕ್ತವಾಗಿದೆ.

ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಅಧ್ಯಯನ ಸಂಸ್ಥೆ 1974ರಲ್ಲಿ ಡಾ.ಹಾ.ಮಾ.ನಾಯಕ ಅವರ ಪ್ರಧಾನ ಸಂಪಾದಕತ್ವದಲ್ಲಿ ಕನ್ನಡ ವಿಶ್ವಕೋಶ ಸಂಪುಟ–7 ಪ್ರಕಟಿಸಿದೆ. ಈ ಗ್ರಂಥದ ಪುಟ ಸಂಖ್ಯೆ 354 ರಿಂದ 362 ರಲ್ಲಿ ಚಿಕ್ಕಮಗಳೂರು ಜಿಲ್ಲೆಯ ಭೌಗೋಳಿಕ ಲಕ್ಷಣಗಳು, ಸಾರಿಗೆ ಸಂಪರ್ಕ ಮತ್ತು ಇತಿಹಾಸದ ಬಗ್ಗೆ ಮಾಹಿತಿ ಇದೆ.

ಎಂ.ಎ.ಆರ್. 1931 ಪುಟಸಂಖ್ಯೆ 16–17 ರಲ್ಲಿ ಕ್ರಿ.ಶ.14ನೇ ಶತಮಾನದ ವಿಜಯನಗರ ಕಾಲದ ಕಿಗ್ಗದ ಋಷ್ಯ ಶೃಂಗೇಶ್ವರ ದೇವಾಲಯದ ವಾಸ್ತು ವಿವರಣೆ ಇದೆ.

ಎಪಿಗ್ರಾಫಿಯ ಕರ್ನಾಟಕದ ಸಂಪುಟ 11ರ ಶಾಸನ ಸಂಖ್ಯೆ 55–59 ಋಷ್ಯ ಶೃಂಗೇಶ್ವರ ದೇವಾಲಯಕ್ಕೆ ಸಂಬಂಧಿಸಿದ ಮಾಹಿತಿಗಳನ್ನು ಉಲ್ಲೇಖಿಸುತ್ತದೆ. ಎಪಿಗ್ರಾಫಿಯ ಕರ್ನಾಟಕದ ಸಂಪುಟ 11ರ ಶಾಸನ ಸಂಖ್ಯೆ 21 ಮತ್ತಾವರ ಪಾರ್ಶ್ವನಾಥ ಬಸದಿಯ (ಜೈನ ಕೇಂದ್ರ) ನಿರ್ಮಾಣದ ಬಗ್ಗೆ ಉಲ್ಲೇಖವಿದೆ.

ಎಂ.ಎ.ಆರ್.1916 ಪುಟ ಸಂಖ್ಯೆ 8ರಲ್ಲಿ ನರಸಿಂಹರಾಜಪುರದ ಚಂದ್ರನಾಥ ಬಸದಿಯ ಬಗ್ಗೆ ಉಲ್ಲೇಖವಿದೆ.

ಎಪಿಗ್ರಾಫಿಯ ಕರ್ನಾಟಕ ಸಂಪುಟ 11 ಶಾಸನ ಸಂಖ್ಯೆ 211 ರಲ್ಲಿ ಚಿಕ್ಕಮಗಳೂರಿನಿಂದ ಪೂರ್ವಕ್ಕೆ ಸುಮಾರು 32 ಕಿ.ಮೀ.ದೂರದಲ್ಲಿರುವ ಸಿಂದಗೆರೆಯ ಪಾರ್ಶ್ವನಾಥ ಬಸದಿಯ ನಿರ್ಮಾಣ ಮತ್ತು ಬಸದಿಗೆ ಸಂಬಂಧಿಸಿದ ಉಲ್ಲೇಖಗಳಿವೆ.

ಶ್ರೀ ಎಸ್.ಜಿ. ಹರ್ಲಾಪುರರವರು **"ವಾಸ್ತುಶಾಸ್ತ್ರ ಹಾಗೂ ಗೃಹನಿರ್ಮಾಣ"**[13] ಕೃತಿಯಲ್ಲಿ ದೇವಾಲಯಗಳ ಅಷ್ಟದಿಕ್ಕುಗಳು ಮತ್ತು ವಾಸ್ತುಶಾಸ್ತ್ರದ ಬಗ್ಗೆ ಚರ್ಚಿಸಿದ್ದಾರೆ.

ಸ್ವಾಮಿ ಹರ್ಷಾನಂದರವರು **"ನಮ್ಮ ದೇವಾಲಯಗಳು"**[14] ಎಂಬ ಕಿರು ಹೊತ್ತಿಗೆಯಲ್ಲಿ ದೇವಾಲಯ ನಿರ್ಮಾಣ ಸಾಗಿ ಬಂದ ದಾರಿ ಮತ್ತು ನಿರ್ಮಾಣದ ಹಂತಗಳ ಬಗ್ಗೆ ವಿವರಿಸಿದ್ದಾರೆ.

ಕೂ.ಸ. ಅಪರ್ಣರವರು **"ದೇವಾಲಯದ ವಾಸ್ತುಶಿಲ್ಪ ಪರಿಚಯ"**[15] ಎಂಬ ಕೃತಿಯು ಚಿಕ್ಕಮಗಳೂರು ಜಿಲ್ಲೆಯ ದೇವಾಲಯಗಳ ಭುವನೇಶ್ವರಿಗಳು ಮತ್ತು ದೇವಾಲಯಗಳ ವಾಸ್ತುಶೈಲಿ ಗುರುತಿಸುವಲ್ಲಿ ನೆರವಾಗಿದೆ.

ಎನ್.ಸರಸ್ವತಿಯವರು **"ಹೊಯ್ಸಳರ ಇತಿಹಾಸ"**[16] ಕೃತಿಯಲ್ಲಿ ಚಿಕ್ಕಮಗಳೂರು ಪ್ರದೇಶದಲ್ಲಿನ ಹೊಯ್ಸಳರ ರಾಜಕೀಯ ಇತಿಹಾಸವನ್ನು ರಚಿಸುವಲ್ಲಿ ನೆರವಾಗಿದೆ.

ಶ್ರೀಕಂಠಶಾಸ್ತ್ರಿ ಎಸ್. ಅವರ **"ಹೊಯ್ಸಳ ವಾಸ್ತುಶಿಲ್ಪ"**[17] ಎಂಬ ಕೃತಿಯು ಹೊಯ್ಸಳ ವಾಸ್ತುಶಿಲ್ಪವನ್ನು ತಿಳಿಯುವಲ್ಲಿ ಪ್ರಮುಖವಾದ ಕೃತಿಯಾಗಿದೆ.

ಇಷ್ಟೆಲ್ಲಾ ಪ್ರಯತ್ನಗಳು ನಡೆದಿದ್ದರೂ ಯಾವುವೂ ಚಿಕ್ಕಮಗಳೂರು ಜಿಲ್ಲೆಯ ಪ್ರವಾಸಿ ತಾಣಗಳನ್ನು ಸಂಪೂರ್ಣವಾಗಿ ಅಧ್ಯಯನಕ್ಕೆ ಒಳಪಡಿಸದ ಕಾರಣ ಈ ಜಿಲ್ಲೆಯ ಪ್ರವಾಸಿ ತಾಣಗಳ ಸಮಗ್ರ ಚಿತ್ರಣವನ್ನು ಕಟ್ಟಿಕೊಡಲಾರವು. ಹಾಗಾಗಿ ಈ ಜಿಲ್ಲೆಗೆ ಕೇಂದ್ರೀಕೃತವಾದ ಅಧ್ಯಯನವೊಂದರ ಅವಶ್ಯಕತೆಯಿದ್ದು, ಆ ಕೊರತೆಯನ್ನು ನೀಗಿಸುವ ಪ್ರಯತ್ನ ಇದಾಗಿದೆ.

**ಅಡಿ ಟಿಪ್ಪಣಿಗಳು:**

1. ಅಶ್ವತ್ಥಪ್ಪ, ಕೆ. ಎನ್. ಪ್ರವಾಸೋದ್ಯಮದ ಮೂಲತತ್ವಗಳು – ಸಪ್ನ ಬುಕ್ ಹೌಸ್– ಬೆಂಗಳೂರು 2016 ಪುಟ ಸಂಖ್ಯೆ. 02
2. ಅಶ್ವತ್ಥಪ್ಪ ಕೆ.ಎನ್. – ಪ್ರವಾಸೋದ್ಯಮದ ಸಂಘಟನೆ ಮತ್ತು ಬೆಳವಣಿಗೆ, ಸ್ವಪ್ನ ಬುಕ್ ಹೌಸ್, ಬೆಂಗಳೂರು, 2016. ಪುಟ ಸಂ. 1.
3. ಶ್ರೀನಿವಾಸ, ಎಸ್. ಲೇಖನ: ಪ್ರವಾಸೋದ್ಯಮ, ಅಭಿವೃದ್ಧಿ ಪಥ – ಸುವರ್ಣ ಕರ್ನಾಟಕ. ಸಂಪುಟ –1 ಪುಟ ಸಂ. 608
4. ಅದೇ
5. ಗೋಪಾಲ, ಆರ್. (ಸಂ): ಚಿಕ್ಕಮಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು – 2009, ಪುಟ ಸಂಖ್ಯೆ: 111
6. ಅದೇ ಪುಟ ಸಂ. 318
7. ಅದೇ ಪುಟ ಸಂ. 347
8. ಅದೇ ಪುಟ ಸಂ. 347
9. ನಾಗಪತಿ, ಕೆ. ಎಸ್. – 'ಪ್ರವಾಸೋದ್ಯಮ ಅಭಿವೃದ್ಧಿ ಒಂದು ಹೊಸ ಆಯಾಮ' – ಅನನ್ಯ ಪ್ರಕಾಶನ, ಮೈಸೂರು, 2012.
10. ಕೆಂಗೇರಿ ಚಕ್ರಪಾಣಿ – 'ದೇಗುಲಗಳ ದಾರಿ' – ಭಾರತಿ ಪ್ರಕಾಶನ – ಮೈಸೂರು 2014
11. ಪಾಂಡುರಂಗ, ಡಿ. ಆರ್. – 'ಕರ್ನಾಟಕದ ದೇವಾಲಯಗಳು ಮತ್ತು ಪ್ರೇಕ್ಷಣೀಯ ಸ್ಥಳಗಳು – ಐಬಿಹೆಚ್ ಪ್ರಕಾಶನ, ಬೆಂಗಳೂರು – 2013
12. ಅಶ್ವತ್ಥಪ್ಪ, ಕೆ. ಎನ್. – ಭಾರತದಲ್ಲಿ ಪ್ರವಾಸೋದ್ಯಮ ಇತಿಹಾಸ – ಸುಭಾಷ್ ಸ್ಟೋರ್ಸ್ ಬುಕ್ಸ್ ಕಾರ್ನರ್ ಬೆಂಗಳೂರು – 2012

13. ಹರ್ಲಾಪುರ, ಎಸ್.ಜಿ. – 'ವಾಸ್ತುಶಾಸ್ತ್ರ ಹಾಗೂ ಗೃಹನಿರ್ಮಾಣ' ಪಾರು ಪ್ರಕಾಶನ, ಗದಗ, 2001

14. ಸ್ವಾಮಿ ಹರ್ಷಾನಂದ – 'ನಮ್ಮ ದೇವಾಲಯಗಳು' ರಾಮಕೃಷ್ಣ ಆಶ್ರಮ, ಮೈಸೂರು 2010

15. ಅಪರ್ಣ, ಕೂ. ಸ. – 'ದೇವಾಲಯದ ವಾಸ್ತುಶಿಲ್ಪ ಪರಿಚಯ' – ಹಂಪಿ 1999

16. ಸರಸ್ವತಿ, ಎನ್ – 'ಹೊಯ್ಸಳರ ಇತಿಹಾಸ' – ವಾಚಸ್ಪತಿ ಪ್ರಕಾಶನ, ಮೈಸೂರು – 2009

17. ಶ್ರೀಕಂಠಶಾಸ್ತ್ರಿ, ಎಸ್. – 'ಹೊಯ್ಸಳ ವಾಸ್ತುಶಿಲ್ಪ' – ಮೈಸೂರು – 1965

# ಅಧ್ಯಾಯ – 2

## ರಾಜಕೀಯ ಇತಿಹಾಸ

### ಪ್ರಾಗಿತಿಹಾಸ ಮತ್ತು ಇತಿಹಾಸ ಆರಂಭಕಾಲ

ಜಿಲ್ಲೆಯ ಪ್ರಾಚೀನ ಇತಿಹಾಸವನ್ನು ಇಂದಿನ ಪ್ರಾದೇಶಿಕ ದೃಷ್ಟಿಯಿಂದ ಚಿತ್ರಿಸುವುದು ಸಮಗ್ರ ಎನಿಸುವುದಿಲ್ಲ. ಪ್ರತಿಯೊಂದು ಪ್ರದೇಶಕ್ಕೂ ತನ್ನದೇ ಆದ ವೈಶಿಷ್ಟ್ಯವಿರುವುದರಿಂದ ಚಿಕ್ಕಮಗಳೂರು ಜಿಲ್ಲೆಯು ಕರ್ನಾಟಕ ಇತಿಹಾಸ ಪರಂಪರೆಗೆ ನೀಡಿರುವ ಕಾಣಿಕೆಯ ಹೆಜ್ಜೆ ಗುರುತುಗಳು ಕೂಡಾ ವಿಶಿಷ್ಟವೆನಿಸುತ್ತದೆ. ಕಡೂರಿನ ಸಮೀಪದ ನಿಡಘಟ್ಟ ಮತ್ತು ಲಿಂಗದಹಳ್ಳಿಗಳಲ್ಲಿ ಹಳೆಯ ಶಿಲಾಯುಗದ ಅವಶೇಷಗಳು ದೊರೆತಿದೆ. ತರೀಕೆರೆ ತಾಲೂಕಿನ ಕಲ್ಲು ದುರ್ಗದಲ್ಲಿ ಕೈಗೊಡಲಿಗಳು, ಚಕ್ರಗಳು ಮತ್ತಿತರ ಕಲ್ಲಿನ ಉಪಕರಣಗಳು ಕಂಡುಬಂದಿವೆ.

ಮೂಡಿಗೆರೆ ತಾಲೂಕಿನ ಹೇರಿಕೆಗೆ ಸಮೀಪದ ಪಾಂಡವರ ಗುಡ್ಡದಲ್ಲಿ ಅನೇಕ ಶಿಲಾ ಉಪಕರಣಗಳಿವೆ. ಚಿಕ್ಕಮಗಳೂರು ಬಳಿಯ ಮತ್ತಾವರದಲ್ಲಿ ಮತ್ತು ಕಡೂರು ತಾಲೂಕಿನ ಸಖರಾಯ ಪಟ್ಟಣದಲ್ಲಿ, ಶೃಂಗೇರಿ ಬಳಿ ಬೃಹತ್ ಶಿಲಾ ಸಮಾಧಿಗಳು ದೊರೆತಿದೆ. ಮೂಡಿಗೆರೆ ತಾಲೂಕಿನ ಕೊಟ್ಟಿಗೆಹಾರ ಸಮೀಪ ಪ್ರಾಚೀನ ಕಾಲದ ಕಬ್ಬಿಣ ಕರಗಿಸುವ ನಿವೇಶನ ಕಂಡುಬಂದಿದೆ. ಈ ಪುರಾವೆಗಳು ಇತಿಹಾಸ ಪೂರ್ವದಲ್ಲಿ ಜನಜೀವನ ಇಲ್ಲಿ ನಡೆದು ಬಂದಿದೆ ಎಂಬುದಕ್ಕೆ ಸಾಕ್ಷಿ ಒದಗಿಸಿದೆ.

### ಇತಿಹಾಸ ಕಾಲ

ಅಶೋಕನ ಕಾಲಕ್ಕೂ ಮೊದಲೇ, ನಾಗರೀಕತೆ ಮತ್ತು ರಾಜ್ಯ ವ್ಯವಸ್ಥೆಗಳು ಕರ್ನಾಟಕದಲ್ಲಿ ಬೆಳೆದುಬಂದಿದೆ. ನಮಗೆ ಸ್ಪಷ್ಟ ಐತಿಹಾಸಿಕ ದಾಖಲೆಗಳು ದೊರೆಯುವುದು ಅಶೋಕನ ಶಾಸನಗಳಿಂದ. ಈ ಜಿಲ್ಲೆಯ ನೆರೆಯ ಜಿಲ್ಲೆಯಾದ ಚಿತ್ರದುರ್ಗ ಜಿಲ್ಲೆಯಲ್ಲಿ ಅಶೋಕನ ಶಿಲಾಶಾಸನಗಳು ದೊರೆತಿದೆ. ಇದರಿಂದ ಈ ಜಿಲ್ಲೆಯು ಮೌರ್ಯರ ಸಾಮ್ರಾಜ್ಯದ ಭಾಗವಾಗಿತ್ತು ಅಥವಾ ಅವರ ಪರೋಕ್ಷ ಅಧೀನದಲ್ಲಿತ್ತು ಎಂದು ಭಾವಿಸಬಹುದಾಗಿದೆ.

ಮೌರ್ಯರ ನಂತರದ ಶಾತವಾಹನರು ದಖನ್ ಪ್ರದೇಶದಲ್ಲಿ ಸಾಮ್ರಾಜ್ಯವೊಂದನ್ನು ಕಟ್ಟಿದರು. ಅವರ ಶಾಸನಗಳು ಬನವಾಸಿಯಲ್ಲಿ ದೊರೆತಿದೆ. ದಕ್ಷಿಣದ ತಮಿಳುನಾಡಿನಲ್ಲಿ ಆಳುತ್ತಿದ್ದ

ಪಲ್ಲವರು ಶಾತವಾಹನರ ಪತನದ ಮೇಲೆ ಉತ್ತರ ಮತ್ತು ಪಶ್ಚಿಮ ಪ್ರದೇಶಗಳಲ್ಲಿ ತಮ್ಮ ರಾಜ್ಯ ವಿಸ್ತರಿಸಿದರು. ಸಖರಾಯ ಪಟ್ಟಣದಲ್ಲಿ ದೊರೆತ ಪಲ್ಲವನರಸಿಂಹವರ್ಮನ ತಾಮ್ರ ಶಾಸನದಿಂದ ಅವರ ರಾಜ್ಯ ಇಲ್ಲಿಯಿಂದಾಚೆಗೂ ಹಬ್ಬಿತ್ತೆಂದು ಹೇಳಬಹುದು. ಕರ್ನಾಟಕ ಇತಿಹಾಸದಲ್ಲಿ ವೈಭವೋಪೇತವಾಗಿ ಮೇಳೈಸಿದ ಸಾಮ್ರಾಜ್ಯಗಳಲ್ಲಿ **'ಹೊಯ್ಸಳ'** ಸಾಮ್ರಾಜ್ಯ ಮೊದಲನೆಯದು.

ಇಂತಹ ಸಾಮ್ರಾಜ್ಯ ಸ್ಥಾಪನೆಗೆ ಕಾರಣವಾದ **'ಸೊಸೆವೂರು'** (ಈಗಿನ ಅಂಗಡಿ) ಚಿಕ್ಕಮಗಳೂರು ಜಿಲ್ಲೆಯಲ್ಲಿದೆ ಎಂದರೆ ನಿಜಕ್ಕೂ ಅದು ಅಭಿಮಾನದ ಸಂಗತಿ. ಇದೇ ತೆರನಾಗಿ ಕದಂಬರಿಂದ ಹಿಡಿದು, ಮೈಸೂರು ಅರಸರವರೆಗೆ ಅನೇಕ ರಾಜವಂಶಗಳ ಆಳ್ವಿಕೆಗಳು ಚಿಕ್ಕಮಗಳೂರು ಭಾಗದಲ್ಲಿ ನಡೆದಿರುವುದೂ ಕೂಡಾ ಹೆಮ್ಮೆಯ ಸಂಗತಿ. ಕದಂಬರು, ಗಂಗರು, ಹೊಯ್ಸಳರು, ವಿಜಯನಗರದ ಅರಸರು, ಕೆಳದಿನಾಯಕರು, ತರೀಕೆರೆ ಪಾಳೆಗಾರರು, ಐಗೂರು ಪಾಳೆಗಾರರು ಮತ್ತು ಮೈಸೂರು ಒಡೆಯರು. ಈ ಎಲ್ಲಾ ರಾಜವಂಶಗಳ ಆಳ್ವಿಕೆಯಲ್ಲಿ ಜಿಲ್ಲೆಯ ಕೀರ್ತಿ ಉಚ್ಛ್ರಾಯ ಸ್ಥಿತಿಯಲ್ಲಿದ್ದು, ಇತಿಹಾಸದ ಪುಟಗಳಲ್ಲಿ ದಾಖಲಾಗಿರುವುದು ವಿಶೇಷ. ರಾಜಮನೆತನಗಳ ಆಡಳಿತಾವಧಿಯಲ್ಲಿ ಹಾಗೂ ಇವುಗಳ ರಾಜಾಶ್ರಯದಲ್ಲಿ ಕಲೆ, ಸಾಹಿತ್ಯ, ಸಂಗೀತ, ಹುಲುಸಾಗಿ ಬೆಳೆದಿರುವುದು ವಿಶೇಷ. ಅಮೃತಾಪುರ, ಬೆಳವಾಡಿ, ಮರ್ಲೆ, ಅಂಗಡಿ ದೇವಸ್ಥಾನಗಳ ಶಿಲ್ಪಕಲೆ ಇವಕ್ಕೆ ಸಾಕ್ಷಿ ಎಂತಿವೆ.

## ಕದಂಬರು

ಕರ್ನಾಟಕವನ್ನಾಳಿದ ಅತ್ಯಂತ ಪ್ರಾಚೀನ ಕನ್ನಡ ಮನೆತನ ಕದಂಬರದಾಗಿದ್ದು, ಕ್ರಿ.ಶ. 350 ರಲ್ಲಿ ಮಯೂರವರ್ಮನಿಂದ ಅಸ್ತಿತ್ವಕ್ಕೆ ಬಂದಿತು. ಕದಂಬರ ಆಳ್ವಿಕೆಯಲ್ಲಿ ವಿಷ್ಣುವರ್ಧನನ ಕಾಲದಲ್ಲಿ ಮೊದಲ ಬಾರಿಗೆ ಆಸಂದಿ (ಕಡೂರು ತಾ. ಹಿರೇನಲ್ಲೂರು ಹೋಬಳಿಯಲ್ಲಿರುವ ಒಂದು ಗ್ರಾಮ) ಯ ಉಲ್ಲೇಖವು ಕಂಡುಬಂದಿದ್ದು ಈತನ ಆಳ್ವಿಕೆಯ 9ನೇ ವರ್ಷದಲ್ಲಿ ಹೊರಡಿಸಿರುವ ಕ್ರಿ.ಶ. 469ರ ಮೂಡುಗೆರೆಯ ತಾಮ್ರ ಶಾಸನವು ತಿಳಿಸುವುದೇನೆಂದರೆ ಅಶ್ವಮೇದಯಾಗದ ಸಂಪೂರ್ಣತೆಗಾಗಿ ಹಾಗೂ ಕೈಕೇಯ ಕುಟುಂಬದಲ್ಲಿ ರಾಜಕುಮಾರ ಜನಿಸಿದ್ದರಿಂದ ಆಸಂದಿ ಆಲೂರಿನ ಅರಹಟದ ದೇವಾಲಯದ ಪೂಜೆ ಪುರಷ್ಕಾರಗಳಿಗಾಗಿ ಸೇಂದ್ರಕ ವಿಷಯಕ್ಕೆ ಸೇರಿದ ಆಸಂದಿ ಕೆರೆಯ ಉತ್ತರದ ಗಡಿಯಲ್ಲಿ 6 ನಿವರ್ತನ ಭೂಮಿಯನ್ನು ಶ್ರಾವಣ ಮಾಸದ ಹುಣ್ಣಿಮೆಯ ದಿನದೆಂದು ರಾಜನು ಸ್ವಯೋಭಿವೃದ್ಧಿ ಹಾಗೂ ಕುಟುಂಬದವರ ಕ್ಷೇಮೋಭಿವೃದ್ಧಿಗೆಂದು ದಾನ ನೀಡಿರುತ್ತಾನೆ.

ಶಾತವಾಹನರ ಅನಂತರ ಕರ್ನಾಟಕದಲ್ಲಿ ರಾಜ್ಯಭಾರ ನಡೆಸಿದ ರಾಜಮನೆತನಗಳಲ್ಲಿ ಬನವಾಸಿ ಕದಂಬರು ಒಬ್ಬರು. ಇವರು ಕ್ರಿ.ಶ. 3ನೆಯ ಶತಮಾನದ ಪೂರ್ವಾರ್ಧದಿಂದ ಕ್ರಿ.ಶ. 6ನೆಯ ಶತಮಾನದ ಕೊನೆಯವರೆಗೆ ಬನವಾಸಿಯಲ್ಲಿ ಆಳಿದರು. ಕರ್ನಾಟಕದ ಪಶ್ಚಿಮದಲ್ಲಿ ಕದಂಬರು ಆಳಿದರು ಗಂಗರು ಪೂರ್ವದಲ್ಲಿ ಆಳಿದರು. ಕದಂಬರಿಗೆ ಬನವಾಸಿಯು ರಾಜಧಾನಿಯಾದರೆ ಗಂಗರಿಗೆ ತಲಕಾಡು ರಾಜಧಾನಿಯಾಗಿತ್ತು. ಕ್ರಿ.ಶ. 4ನೆಯ ಶತಮಾನದಲ್ಲಿ ಆಳ್ವಿಕೆ ಪ್ರಾರಂಭಿಸಿದ ಕದಂಬರಾಜ ಮಯೂರಶರ್ಮ, ಕಾಕುಸ್ಥವರ್ಮನ ತಾಳಗುಂದ ಶಾಸನದಲ್ಲಿ.[1] ಕದಂಬರ ಇತಿಹಾಸವನ್ನು ತಿಳಿಯಬಹುದು. ಕದಂಬರು ಕ್ರಿ.ಶ. 11 ಮತ್ತು 12ನೆಯ ಶತಮಾನಗಳಲ್ಲಿ ಕಲ್ಯಾಣಿಚಾಲುಕ್ಯರ ಸಾಮಂತರಾಗಿ ಆಳ್ವಿಕೆ ನಡೆಸಿದರು. ಇವರ ಸಮಕಾಲೀನರಾಗಿ ಹಾಗೂ ಮಾಂಡಳಿಕರಾಗಿ ಕನ್ನಡನಾಡಿನಲ್ಲಿ ಹಲವು ಸಣ್ಣಪುಟ್ಟ ರಾಜರಿದ್ದರೆಂದು ತಿಳಿದುಬರುತ್ತದೆ.[2] ಇವರು ಶಿವಮೊಗ್ಗ ಪ್ರಾಂತ್ಯದವರೆಗೂ ಸಾಮಂತರಾಜರಾಗಿ ಆಡಳಿತ ನಡೆಸಿದರು. ಈ ಜಿಲ್ಲೆಯಲ್ಲಿ ಅಧಿಕೃತವಾಗಿ ಎರಡು ಕದಂಬ ಶಾಸನಗಳು ದೊರೆತಿವೆ. ಇವುಗಳಲ್ಲಿ ಮೊದಲನೆಯದು ಕಡೂರಿನ 162ನೆಯ (ಕ್ರಿ.ಶ. ಸು 450) ತಾಮ್ರಶಾಸನ.[3] ಕ್ರಿ.ಶ. 4ನೆಯ ಶತಮಾನದ ಪ್ರಾರಂಭದಲ್ಲಿ ಮಯೂರವರ್ಮ ಪಲ್ಲವರ ವಿರುದ್ಧ ಹೊರಾಡಿ ರಾಜ್ಯವನ್ನು ಸ್ಥಾಪಿಸಿದ ಬನವಾಸಿ ಕದಂಬರ ರಾಜಧಾನಿಯಾಗಿತ್ತು. ದಕ್ಷಿಣದಲ್ಲಿ ಕಾವೇರಿಯವರೆಗಿನ ಪ್ರದೇಶ ಇವರ ಆಡಳಿತಕ್ಕೆ ಒಳಪಟ್ಟಿತ್ತು. ಮಯೂರವರ್ಮ ಅಥವಾ ಮಯೂರಶರ್ಮ ಈ ವಂಶದ ಸ್ಥಾಪಕ. ಕಂಗವರ್ಮ, ಭಗೀರಥವರ್ಮ, ರಘುವರ್ಮ ಮತ್ತು ಕಾಕುಸ್ಥವರ್ಮ ಮುಂತಾದವರು ಅನಂತರ ಆಡಳಿತ ನಡೆಸಿದರು ಇವರೆಲ್ಲ ತಮ್ಮನ್ನು **'ಧರ್ಮಮಹಾರಾಜ'** ಎಂದು ಕರೆದುಕೊಂಡಿದ್ದಾರೆ. ಶಾಂತಿವರ್ಮನ ತಮ್ಮ ಕೃಷ್ಣವರ್ಮನ ಹಿರಿಯ ಮಗನಾದ ವಿಷ್ಣುವರ್ಮನು ಕತಟ್ಟಾಕ ಎಂಬ ಗ್ರಾಮವನ್ನು ದಾನವಾಗಿ ಕೊಟ್ಟಿರುವ ಉಲ್ಲೇಖವಿರುವ ಶಾಸನ ಕಡೂರು ತಾಲೂಕಿನ ಬಿರೂರಿನಲ್ಲಿ ದೊರೆತಿದೆ.[4] ಕೃಷ್ಣವರ್ಮನು ಕರ್ನಾಟಕವನ್ನು ಅಲ್ಲದೆ ದಕ್ಷಿಣ ಭಾರತವನ್ನು ಆಳಿದನೆಂದು ಇವನನ್ನು **'ದಕ್ಷಿಣಾಪಥವಸುಮತಿ** ಎಂದೂ **'ಅಶ್ವಮೇಧಯಾಜಿ'** ಎಂದೂ ಶಾಸನದಲ್ಲಿ ಉಲ್ಲೇಖಿಸಿದೆ.[5] ಕಾಕುಸ್ಥವರ್ಮ ವೃದ್ಧಾಪ್ಯದಲ್ಲಿ ತನ್ನ ಅಧಿಕಾರವನ್ನು ಮಗ ಶಾಂತಿವರ್ಮನಿಗೆ ವಹಿಸಿಕೊಟ್ಟ ಆದರೆ ಶಾಂತಿವರ್ಮ ತಂದೆಗಿಂತ ಮೊದಲೇ ನಿಧನವಾದುದರಿಂದ ಕಾಕುಸ್ಥವರ್ಮನೇ ಪುನಃ ಅಧಿಕಾರದ ಚುಕ್ಕಾಣಿ ಹಿಡಿದ ಸ್ವಲ್ಪಕಾಲದ ಅನಂತರ ಮೊಮ್ಮಗ ಮೃಗೇಶವರ್ಮನಿಗೆ ಅಧಿಕಾರ ನೀಡಲಾಯಿತು ಆದರೆ ಈ ವ್ಯವಸ್ಥೆಯನ್ನು ಒಪ್ಪದ ಕಾಕುಸ್ಥವರ್ಮನ ಇತರ ಮಕ್ಕಳು ಮೃಗೇಶವರ್ಮನ ವಿರುದ್ಧ ದಂಗೆಯೆದ್ದರು. ಇದರ ಪರಿಣಾಮವಾಗಿ ಸಾಮ್ರಾಜ್ಯ ಮೂರು ಭಾಗವಾಯಿತು. ಮೃಗೇಶವರ್ಮನು ಬನವಾಸಿಯಲ್ಲೂ

ಕಾಕುಸ್ಥವರ್ಮನ ಮಕ್ಕಳಾದ ಕೃಷ್ಣವರ್ಮನು ಶ್ರೀ ಪರ್ವತದಿಂದ ದಕ್ಷಿಣ ಭಾಗವನ್ನು ಕುಮಾರವರ್ಮನು ಉಚ್ಛಂಗಿಯಿಂದ ಪೂರ್ವ ಭಾಗಗಳನ್ನೂ ಸ್ವತಂತ್ರವಾಗಿ ಆಳಿದರು. ಕೃಷ್ಣವರ್ಮನ ಅನಂತರ ಅವನ ಮಗ ವಿಷ್ಣುವರ್ಮ ಅಧಿಕಾರಕ್ಕೆ ಬಂದನು. ಇವನು ಆಸಂದಿನಾಡನ್ನು ಆಳಿದನೆಂದು ತಿಳಿದುಬರುತ್ತದೆ. ಒಂದನೆಯ ಕೃಷ್ಣವರ್ಮನಿಗೆ ವಿಷ್ಣುವರ್ಮ ಹಾಗೂ ದೇವವರ್ಮ ಎಂಬ ಇಬ್ಬರು ಮಕ್ಕಳಿದ್ದರು. ದೇವವರ್ಮ ಯುವರಾಜನಾಗಿದ್ದರೂ ಆಳ್ವಿಕೆ ನಡೆಸಲಿಲ್ಲ. ಆತ ಶ್ರೀಪರ್ವತದ ಜಿನನಿಗೆ ದಾನವನ್ನು ಕೊಟ್ಟಿದ್ದ.[6] ಇವನ ಅನಂತರ ಇವನ ಮಗನಾದ ಸಿಂಹವರ್ಮ ಪ್ರಾಂತ್ಯಾಡಳಿತವನ್ನು ನಡೆಸಿದ.

## ಗಂಗರು

ಕರ್ನಾಟಕವನ್ನು ಅತೀ ದೀರ್ಘಕಾಲ ಆಳಿದಂತಹ ಗಂಗ ಮನೆತನದವರು ದಿಡಿಗ ಹಾಗೂ ಮಾಧವರೆಂಬ ಸಹೋದರರಿಂದ ಸ್ಥಾಪಿಸಲ್ಪಟ್ಟು ಸುಮಾರು 8 ಶತಮಾನಗಳ ಕಾಲ ಅಸ್ತಿತ್ವದಲ್ಲಿತ್ತು.

ಮೈಸೂರು ಜಿಲ್ಲೆಯ ತಲಕಾಡಿನಲ್ಲಿ ಆಳುತ್ತಿದ್ದ ಗಂಗರು ಕದಂಬರ ಸಮಕಾಲೀನರು. ಇವರು ಕ್ರಿ.ಶ. 350–550ರವರೆಗೆ ಸುಮಾರು 200 ವರ್ಷಗಳ ಕಾಲ ಸ್ವತಂತ್ರರಾಗಿ ಆಳಿದರು. ಆನಂತರ ಚಾಳುಕ್ಯ ಮತ್ತು ರಾಷ್ಟ್ರಕೂಟರ ಸಾಮಂತರಾಗಿ 10ನೆಯ ಶತಮಾನದವರೆಗೂ ಆಳಿದರು. ಇವರು ಕದಂಬರು, ಚಾಳುಕ್ಯರು ಮತ್ತು ರಾಷ್ಟ್ರಕೂಟರೊಂದಿಗೆ ನಿಕಟವಾದ ಸಂಬಂಧವನ್ನು ಹೊಂದಿದ್ದರು .ದಕ್ಷಿಣಭಾರತದ ಕೆಲವು ಪ್ರದೇಶಗಳಲ್ಲಿ ಇಕ್ಷ್ವಾಕುವಂಶದ ರಾಜರು ರಾಜ್ಯಭಾರ ಮಾಡುತ್ತಿದ್ದರು, ಇವರು ಚಾಳುಕ್ಯರೊಂದಿಗೆ ವಿವಾಹ ಸಂಬಂಧವನ್ನು ಬೆಳೆಸಲು ಪ್ರಸ್ತಾಪ ಮಾಡಲು ಉತ್ಸುಕರಾಗಿದ್ದು, ಇದು ಇಕ್ಷ್ವಾಕು ರಾಜರ ಪರಂಪರೆ ಮತ್ತು ಖ್ಯಾತಿಗೆ ನಿದರ್ಶನವಾಗಿದೆ.[7] ಇವರ ಮೊದಲ ರಾಜಧಾನಿ ಕುವಲಾಲ ಅಥವಾ ಕೋಲಾರ, ಎರಡನೆಯ ರಾಜಧಾನಿ ತಳವನಪುರ ಅಥವಾ ತಲಕಾಡು ಅನಂತರದಲ್ಲಿ ಚೆನ್ನಪಟ್ಟಣದ ಹತ್ತಿರದ ಮಾನಕುಂದ ಅಥವಾ ಮಣ್ಣೆಯಿಂದ ರಾಜ್ಯವನ್ನು ಆಳಿದರು ಮತ್ತು ಮದಗಜ ಇವರ ರಾಜಲಾಂಛನವಾಗಿತ್ತು. ಇವರು ಆಳಿದ ಪ್ರದೇಶ **'ಗಂಗವಾಡಿ'** ಎಂದೇ ಪ್ರಸಿದ್ಧಿಯಾಯಿತು. ಶಾಸನಗಳಲ್ಲಿ ಇದನ್ನು **'ಗಂಗವಾಡಿ 96 ಸಾವಿರ'** ವೆಂದು[8] ಕರೆಯಲಾಗಿದ್ದು, ಕಾಲ ಸರಿದಂತೆ ಇವರು ತಮ್ಮ ಎಲ್ಲ ಪ್ರದೇಶಗಳನ್ನು ಕಳೆದುಕೊಂಡು ಹೊಯ್ಸಳರ ಸಾಮಂತ ಪ್ರಭುಗಳಾಗಿ ಆಸಂದಿನಾಡಿನಲ್ಲಿ ಆಳುತ್ತಿದ್ದರು.[9] ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲೆಗಳ ಪ್ರದೇಶಗಳಲ್ಲಿ ಗಂಗ

ಕದಂಬರಿಬ್ಬರೂ ಮೇಲುಗೈಯಾಗಿ ಹೋರಾಡಿದರು. ದುರ್ವಿನೀತನ ಕಾಲಕ್ಕೆ ಗಂಗರು ಇಲ್ಲಿ ಸುಸ್ಥಾಪಿತರಾಗಿದ್ದರು ಮತ್ತು ಕಡೂರು ತಾಲೂಕಿನ ಆಸಂದಿಯು ಇವರ ಪ್ರಾಂತೀಯ ಕೇಂದ್ರವಾಗಿತ್ತು. ಇವರ ಕಾಲದಲ್ಲಿ ಈ ಪ್ರಾಂತ್ಯವನ್ನು **'ಆಸಂದಿನಾಡು'** ಎಂದು ಕರೆಯಲಾಗಿದೆ.[10]

ಇವರ ರಾಜಕೀಯ ಇತಿಹಾಸವನ್ನು ಉಲ್ಲೇಖಿಸುವಾಗ ಗಂಗವಂಶಸ್ಥರ ಕೊನೆಯ ಅರಸರನ್ನು ಆಸಂದಿಯ ಗಂಗರು ಎಂದೇ ಹೇಳಲಾಗುತ್ತದೆ. ಈ ವಂಶದ ರಾಜರು **'ಮಹಾರಾಜಾಧಿರಾಜ', 'ಕೊಳಾಲಪುರಾಧೀಶ್ವರ', 'ನಂದಗಿರಿನಾಥ'** ಮುಂತಾದ ಬಿರುದುಗಳನ್ನು ಧರಿಸುತ್ತಿದ್ದರು.[11] ಶೃಂಗೇರಿಯ ಶಾಸನದಲ್ಲಿ ಇವರನ್ನು ಜಾಹ್ನವೇಯ ಕುಲ ಮತ್ತು ಕಾಣ್ವಾಯನ ಗೋತ್ರದವರೆಂದು ಉಲ್ಲೇಖಿಸಿದ್ದು ಅನುಕ್ರಮವಾಗಿ ಕೊಂಗುಣಿವರ್ಮ, ಮಾಧವವರ್ಮ, ಹರಿವರ್ಮ, ವಿಷ್ಣುಗೋಪ, ಇಮ್ಮಡಿ ಮಾಧವವರ್ಮ ಮತ್ತು ಕೊಂಗುಣಿವರ್ಮ (ಅವನೀತ)ರನ್ನು ಹೆಸರಿಸುತ್ತದೆ.[12]

ಕಡೂರಿನ ಒಂದು ತಾಮ್ರ ಶಾಸನ ಗಂಗವಂಶದ ಹೊಸ ದೊರೆಯೊಬ್ಬನನ್ನು ಪರಿಚಯಿಸುತ್ತದೆ. ಅವನ ಹೆಸರು ಅರಸಾಣಿ.[13] ಈತ ಶ್ರೀವಿಕ್ರಮ ಮತ್ತು ಶ್ರೀವಲ್ಲಭನ ಅನಂತರದಲ್ಲಿ ಬಂದವನು ಭೂವಿಕ್ರಮನ ಆಳ್ವಿಕೆ ಕೊನೆಗೊಂಡಿದ್ದು ಕ್ರಿ.ಶ. 679ರಲ್ಲಿ ಅನಂತರದ ಸುಮಾರು 9 ವರ್ಷಗಳ ಕಾಲ ಭೂವಿಕ್ರಮನ ಮಗನಾದ ಅರಸಾಣಿ ಮಗನಾದ ಅರಸಾಣಿ ಆಡಳಿತ ನಡೆಸಿರಬೇಕು ಅನಂತರದಲ್ಲಿ ಶಿವಮಾರನು ಇವನನ್ನು ಪದಚ್ಯುತಗೊಳಿಸಿರಬೇಕು ಅವಿನೀತನ ಆಳ್ವಿಕೆಯ ಎರಡನೆಯ ವರ್ಷದಲ್ಲಿ ಈ ಘಟನೆ ನಡೆದ ವಿಚಾರವನ್ನು ಶಾಸನ ತಿಳಿಸುತ್ತದೆ. ಆದುದರಿಂದ ಅವಿನೀತನು ಕ್ರಿ.ಶ. 470ರಲ್ಲಿಯೇ ರಾಜ್ಯವಾಳಲು ಪ್ರಾರಂಭಿಸಿದನು.[14]

ಇವರ ಸಮಕಾಲೀನರಾಗಿ ಮಹಾಮಾಂಡಲೀಕನಾದ ವೈಜರಸು ಆಡಳಿತ ನಡೆಸುತ್ತಿದ್ದ ಮತ್ತು ವೈಜಲದೇವಿ ಇವನ ಹಿರಿಯ ರಾಣಿಯಾಗಿದ್ದಳು. ಚಿಕ್ಕಮಗಳೂರು ಜಿಲ್ಲೆಯ ಅನೇಕ ಭಾಗಗಳಲ್ಲಿ ಗಂಗರ ಶಾಸನಗಳು ದೊರೆತಿವೆ. ಇವರು ತಮ್ಮ ಒಡೆತನವನ್ನು ಕಳೆದುಕೊಂಡು ಹೊಯ್ಸಳರ ಸಾಮಂತ ಪ್ರಭುಗಳಾಗಿ ಆಸಂದಿನಾಡಿನಲ್ಲಿ ಆಳುತ್ತಿದ್ದರು.[15] ವಿನಯಾದಿತ್ಯನು ಚಾಲುಕ್ಯರ ಸಾಮಂತರಸನಾಗಿದ್ದನು. ಇವನನ್ನು ದ್ವಾರಾವತೀಪುರರಾಧೀಶ್ವರ ಎಂಬ ಬಿರುದನ್ನು ಹೊಂದಿದ್ದನು.[16]

ಈ ಜಿಲ್ಲೆಯ ನಗರ ಪ್ರದೇಶದೊಳಗಿರುವ ಕೋಟೆ ಗಂಗರ ಆಡಳಿತದ ಕೇಂದ್ರವಾಗಿತ್ತು. ಹಿರೇಮಗಳೂರು ಇವರ ಕಾಲದಲ್ಲಿ ಅಗ್ರಹಾರವಾಗಿತ್ತು. ಗಂಗ ದೊರೆ ದುರ್ವಿನೀತನ

ಸಹೋದರನು ಕಾಡುವೆಟ್ಟಿಯ ಜನಗಳಿಂದ ಮತ್ತು ಪಲ್ಲವರಿಂದ ಸಿಂಹಾಸನವನ್ನು ಪಡೆದು ಆಡಳಿತ ನಡೆಸಿದನು.[17]

ಈ ಕಾಲದಲ್ಲಿ ಗಂಗರಿಗೂ, ನೊಳಂಬರಿಗೂ ಸಣ್ಣ ಸಣ್ಣ ಘರ್ಷಣೆಗಳು ನಡೆಯುತ್ತಲೇ ಇದ್ದವು. ಗಂಗರ ದೊರೆ ಇಮ್ಮಡಿ ಬೂತುಗ ಮತ್ತು ಮೂರನೆಯ ರಾಚಮಲ್ಲರ ನಡುವೆ ದ್ವೇಷ ಕಾರುತ್ತಿದ್ದಾಗ ನೊಳಂಬ ಅಣ್ಣಿಗನು ಗಂಗ ರಾಜ್ಯದ ಮೇಲೆ ದಂಡೆತ್ತಿಹೋದನು. ಇಂತಹ ಸಂದರ್ಭದಲ್ಲಿ ಅರಕಲ್ಲನ ಮಗ ನನ್ನಿ ಕಂದಪ್ ಮತ್ತು ಮೊಮ್ಮಗ ಪೊಯ್ಸಳ ಮಾರುಗ, ಅಣ್ಣಿಗನ ಮೇಲೆ ಸಿರಿವೂರು ಎಂಬಲ್ಲಿ ನಡೆದ ಕದನದಲ್ಲಿ ಮಡಿದರು. ಇವರೀರ್ವರೂ ಗಂಗರ ಆಶ್ರಯದಲ್ಲಿ ಕಾರ್ಯನಿರ್ವಹಿಸುತ್ತಿದ್ದರು.[18] ಹೀಗೆ ಗಂಗರು ಈ ಪ್ರಾಂತ್ಯದಲ್ಲಿ ಆಡಳಿತ ನಡೆಸಿರುವುದಕ್ಕೆ ಹಲವು ನಿದರ್ಶನಗಳಿವೆ. ಚಿಕ್ಕಮಗಳೂರು, ಹಿರೇಮಗಳೂರು, ಆಸಂದಿ, ಶೃಂಗೇರಿ, ದೇವವೃಂದ, ಬುಕ್ಕಾಂಬುದಿ ಮತ್ತು ಕಿಗ್ಗ ಮೊದಲಾದವುಗಳು ಗಂಗರ ಕಾಲದ ಪ್ರಮುಖ ಸ್ಥಳಗಳಾಗಿವೆ. ಸುಮಾರು 600 ವರ್ಷಗಳ ಕಾಲ ಕರ್ನಾಟಕದ ದಕ್ಷಿಣ ಭಾಗವನ್ನು ಆಳಿದ ಗಂಗರು ಕರ್ನಾಟಕದ ಸಂಸ್ಕೃತಿಗೆ ಬೆಲೆಯುಳ್ಳ ಕಾಣಿಕೆಯನ್ನು ನೀಡಿದ್ದಾರೆ.

## ಹೊಯ್ಸಳರು

ಸಳನಿಂದ ಸ್ಥಾಪಿಸಲ್ಪಟ್ಟು ಮೂರು ಶತಮಾನಗಳಿಗಿಂತಲೂ ಹೆಚ್ಚು ಕಾಲಾವಧಿಗೆ ವಿಸ್ತರಿಸಿರುವ ಹೊಯ್ಸಳ ಆಳ್ವಿಕೆಯು ಮಧ್ಯಕಾಲೀನ ಕರ್ನಾಟಕದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ತುಂಬಾ ಮುಖ್ಯವಾದ ಅಧ್ಯಾಯವಾಗಿದೆ. ಕರ್ನಾಟಕವನ್ನು ಆಳಿದ ರಾಜ ಮನೆತನಗಳಲ್ಲಿ ಬಹಳ ಪ್ರಮುಖರಾದರು. ಕಲ್ಯಾಣ ಚಾಳುಕ್ಯರ ಸಾಮಂತರಾಗಿದ್ದ ಇವರು ಅನತಿಕಾಲದಲ್ಲಿಯೇ ಸ್ವತಂತ್ರರಾಗಿ ಅಳತೊಡಗಿದ್ದರು. ಕ್ರಿ.ಶ. 1000 ದಲ್ಲಿ ಪ್ರಾರಂಭವಾದ ಇವರ ರಾಜಕೀಯ ಆಡಳಿತ ಕ್ರಿ.ಶ. 1336ರ ವರೆಗೆ ಅಂದರೆ ಸುಮಾರು 300 ವರ್ಷಗಳಿಗೂ ಹೆಚ್ಚು ಕಾಲ ಸುಭದ್ರವಾಗಿತ್ತು. ಆದರೆ ಇವರ ಆರಂಭಿಕ ಇತಿಹಾಸದ ಬಗೆಗೆ ಸ್ಪಷ್ಟವಾದ ದಾಖಲೆಗಳಿಲ್ಲ. ಹೊಯ್ಸಳರ ಮೂಲಪುರುಷರಾದ ಸಳ ಅಥವಾ ನೃಪಕಾಮ.[19] ಇವನ ಕಾಲದ ಶಾಸನಗಳಲ್ಲಿ ಸಳನೇ ಇವರ ಮೂಲ ಪುರುಷನೆಂದು ಉಲ್ಲೇಖಿಸಿವೆ. ಇವರು ತಮ್ಮನ್ನು ಯಾದವ ವಂಶಜರೆಂದು ಕರೆದು ಕೊಂಡಿದ್ದಾರೆ ಲೂಯಿ ರೈಸ್ ಇತರ ವಿದ್ವಾಂಸರು ಅಭಿಪ್ರಾಯ ಪಡುವಂತೆ ಮೂಲನೆಲೆ ಶಶಕಪುರ ಅಥವಾ ಸೊಸೆವೂರು. ಇದನ್ನು ಚಿಕ್ಕಮಗಳೂರು ಜಿಲ್ಲೆ ಮೂಡಗೆರೆ ತಾಲೂಕಿನ ಈಗಿನ ಅಂಗಡಿ ಎಂಬ ಸ್ಥಳ ಎಂದು ಗುರುತಿಸಲಾಗಿದೆ. ಪ್ರಾಚೀನ

ಕಾಲದಲ್ಲಿ ಇದೊಂದು ವ್ಯಾಪಾರ ಕೇಂದ್ರವಾಗಿತ್ತು ಮತ್ತು ಸೊಸೆವೂರನ್ನ ಉಲ್ಲೇಖಿಸುವ ಅನೇಕ ಶಾಸನಗಳಿವೆ.[20] ಕ್ರಿ.ಶ. 1060ರ ಶಾಸನವೊಂದು ಸೊಸೆವೂರಿನ ವ್ಯಾಪಾರಸ್ಥರು ಸೇರಿ 'ಲೋಕಜಿತನಿಗೆ'ಸ್ಮಾರಕವನ್ನು ನಿರ್ಮಿಸಿದರೆಂದು ಹೇಳಿದೆ.[21] ಆದುದರಿಂದ ಇದೊಂದು ಜೈನ ಕೇಂದ್ರವಾಗಿತ್ತೆಂದು ತಿಳಿಯುತ್ತದೆ.

ಕ್ರಿ.ಶ. 1040ರ ಒಂದು ಶಾಸನ ಜೈನ ಆಚಾರ್ಯನಾದ ವಜ್ರಪಾಣಿ ಭರತೇಶ್ವರನು ಇಲ್ಲಿಯೇ ಕಾಲವಾದನೆಂದು ಉಲ್ಲೇಖಿಸುತ್ತದೆ.[22] ವಿಜಯನಗರದ ಅರಸ ಅಚ್ಯುತರಾಯನ ಶಾಸನವೊಂದರಲ್ಲಿ ಅಂಗಡಿಯ ಉಲ್ಲೇಖ ಅದರ ಭೌಗೋಳಿಕ ವರ್ಣನೆಯು ಕಂಡು ಬರುತ್ತದೆ ಇದರಿಂದ ಅಂಗಡಿಯೇ ಸೊಸೆವೂರು ಎಂದು ಸ್ಪಷ್ಟಪಡಿಸಲು ಸಾಕಷ್ಟು ಉತ್ತಮ ಆಧಾರಗಳು ದೊರೆಯುತ್ತವೆ. 'ಮಲೆಪರೋಳ್‌ಗಂಡ' ಎಂಬುದು ಇವರಿಗಿದ್ದ ಬಿರುದು. ಇವರ ಶಾಸನಗಳಲ್ಲಿ ಅಂಕಿತವನ್ನು ಕನ್ನಡದಲ್ಲಿಯೇ ಹಾಕಿದ್ದಾರೆ. ಕಾಲಾನುಕ್ರಮದಲ್ಲಿ ಪ್ರಭುತ್ವ ಸ್ಥಾಪಿಸಿ 'ಮಲೆಪರೋಳ್‌ಗಂಡ' ರಾಗಿ ಮಾರ್ಪಟ್ಟರೆಂದು ಹೇಳಲಾಗಿದೆ.[23]

ಹೊಯ್ಸಳ ರಾಜ್ಯ ಸ್ಥಾಪನೆಗೆ ಕಾರಣವಾದ ರೋಚಕ ಘಟನೆಯೊಂದು ಅತ್ಯಂತ ಜನಪ್ರಿಯವಾಗಿ ಅಂದಿನಿಂದ ಇಂದಿನವರೆಗೂ ಜನಮನದಲ್ಲಿ ಸ್ಥಿರವಾಗಿ ಉಳಿದಿದೆ. ಇವರ ಕಾಲದ ಶಾಸನಗಳಲ್ಲಿ 'ಸಳ' ಈ ವಂಶದ ಮೂಲ ಪುರುಷನೆಂದು ಉಲ್ಲೇಖಿಸಿವೆಯಾದರೂ ಈತ ಐತಿಹಾಸಿಕವ್ಯಕ್ತಿಯೇ ಅಥವಾ ಕಾಲ್ಪನಿಕ ವ್ಯಕ್ತಿಯೇ ಎಂಬುದು ಸ್ಪಷ್ಟವಾಗಿಲ್ಲ. ಸಳನು ಸೊಸೆವೂರಿನಲ್ಲಿ ಗುರುಕುಲದ ಸುದತ್ತಾಚಾರ್ಯರೆಂಬ ಜೈನ ಗುರುಗಳ ಹತ್ತಿರ ವ್ಯಾಸಂಗ ಮಾಡುತ್ತಿದ್ದಾಗ ಹುಲಿಯೊಂದು ಗುರುಕುಲದೊಳಗೆ ಪ್ರವೇಶಿಸಿತು. ಆಗ ಸುದತ್ತಾಚಾರ್ಯರು ಸಳನಿಗೆ 'ಪೊಯ್‌ಸಳ' ಎಂದು ಆಜ್ಞೆ ಮಾಡಿದರು. ಗುರುವಿನ ಆಜ್ಞೆಯ ಮೇರೆಗೆ ಸಳನು ಹುಲಿಯನ್ನು ಕೊಂದು ತನ್ನ ಶೌರ್ಯ ಮೆರೆದನು. ಈ ಘಟನೆಯಿಂದಲೆ ಪ್ರಾಯಶಃ ಸಳನು ಹೊಯ್–ಸಳ ಹೊಯ್ಸಳನಾದನು. ಇದೇ ಹೆಸರು ಈ ರಾಜಮನೆತನಕ್ಕೆ ಅನ್ವಯವಾಯಿತು. ಈ ವಿಷಯವು ಚಿಕ್ಕಮಗಳೂರು ಜಿಲ್ಲೆಯಲ್ಲಿ ದೊರೆತಿರುವ ಸುಮಾರು 11 ಶಾಸನಗಳಲ್ಲಿ ಸಳನ ಕಥೆ ಸ್ವಲ್ಪ ವಿಭಿನ್ನವಾಗಿ ನಿರೂಪಿತವಾಗಿದೆ.[24] ಈ ಸಳನ ಮಗ ವಿನಯಾದಿತ್ಯ ಎಂದು ಕಡೂರಿನ ಶಾಸನವೊಂದು ಉಲ್ಲೇಖಿಸಿದೆ.[25]

ಹೊಯ್ಸಳರು ಮೂಲತಃ ಈ ಜಿಲ್ಲೆಯವರೆಂಬ ಹೆಗ್ಗಳಿಕೆ ಇದೆ. ಅಂಗಡಿಯ ವಾಸಂತಿಕಾ ದೇವಾಲಯದ ಪರಿಸರದಲ್ಲಿ ಸಳನು ಹುಲಿಯನ್ನು ಕೊಂದು ಹೊಯ್ಸಳನೆಂಬ ಹೆಸರು ಪಡೆದದ್ದು ಶಾಸನಗಳಲ್ಲಿಯೂ ಉಲ್ಲೇಖವಾಗಿದೆ.[26] ಬಲ್ಲಾಳರಾಯನ ದುರ್ಗ ಇಲ್ಲಿ ಹೊಯ್ಸಳರ ಆಳ್ವಿಕೆಗೆ

ಪ್ರತ್ಯಕ್ಷ ಸಾಕ್ಷಿಯಾಗಿದೆ. ಬೆಟ್ಟದ ಮೇಲೆ ಕೋಟೆ ಕೊತ್ತಲಗಳನ್ನು ಕಟ್ಟಿ ಅಲ್ಲಿ ಸೈನ್ಯವನ್ನು ಇರಿಸಲಾಗಿತ್ತು.[27] ಇಲ್ಲಿನ ವಾಸಂತಿಕ ದೇವಾಲಯ **"ಕೋಟೆ ಹರ"** ಪ್ರದೇಶ ಹಾಗೂ ಅನೇಕ ಪಾಳು ದೇವಾಲಯಗಳು, ಬಸದಿಗಳು, ಶಾಸನಗಳು ಇದಕ್ಕೆ ಸಾಕ್ಷಿಯಾಗಿದೆ. ಹೊಯ್ಸಳರ ಸ್ಪಷ್ಟವಾದ ರಾಜಕೀಯ ಇತಿಹಾಸ ಕ್ರಿ.ಶ. ಸುಮಾರು 1000 ರಿಂದ ಪ್ರಾರಂಭವಾಯಿತು ಎಂದು ಹೇಳಬಹುದು ನೃಪಕಾಮ ಅಥವಾ ಕಮಪೊಯ್ಸಳ (ಕ್ರಿ.ಶ. 1022–1045) ಎಂದು ಶಾಸನಗಳಲ್ಲಿ ಉಲ್ಲೇಖಿತನಾಗಿದ್ದಾನೆ ಇವನನ್ನು ಚಾಳುಕ್ಯ ಮಹಾಮಂಡಳೇಶ್ವರನೆಂದು ಕರೆಯಲಾಗಿದೆ.

ಹೊಯ್ಸಳ ವಿನಯಾದಿತ್ಯ (ಕ್ರಿ.ಶ. ಸು. 1045–1098) ಕಾಲದಲ್ಲಿ ಹೊಯ್ಸಳರ ರಾಜಧಾನಿ ಸೊಸೆವೂರು ಅಥವಾ ಶಶಕಪುರದಿಂದ (ಈಗಿನ ಅಂಗಡಿ) ಬೇಲೂರಿನ ಅನಂತರ ದ್ವಾರಾವತಿಪುರಕ್ಕೆ (ದ್ವಾರಸಮುದ್ರ ಈಗಿನ ಹಳೇಬೀಡು) ವರ್ಗಾವಣೆಯಾಯಿತೆಂದು ನಂಬಲಾಗಿದೆ.[28]

ಹೊಯ್ಸಳರು ದ್ವಾರಾವತೀಪುರದಲ್ಲಿ ರಾಜಧಾನಿ ಸ್ಥಾಪಿಸುವುದಕ್ಕೆ ಮೊದಲಿನ ಇತಿಹಾಸದ ಬಗ್ಗೆ ಇತಿಹಾಸಕಾರರು ಹೆಚ್ಚಿನ ಗಮನಹರಿಸಿದಂತೆ ಕಾಣುವುದಿಲ್ಲ. ಸೊಸೆವೂರಿನ ಸಮೀಪ ಮೂಡಗೆರೆ ಹಾಗೂ ಬೇಲೂರು ಮಾರ್ಗದಲ್ಲಿ 'ಹೊಯಿಸಳಲು' ಎಂಬ ಊರಿದೆ.[29] ಇಲ್ಲಿ ಕೆಲವು ಶಾಸನಗಳು ದೊರೆತಿವೆ. ರಸಬಾವಿ ಎಂದು ಕರೆಯಲಾದ ಒಂದು ಬಾವಿ ಇದೆ ಇಲ್ಲಿ ಅರಮನೆ ಸ್ಥಳವೆಂದು ಹೇಳುವ ನಿವೇಶನವಿದೆ. ನೂರಾರು ವರ್ಷಗಳ ಹಿಂದಿನ ಸಂಪಿಗೆ ಮರದಕಟ್ಟೆ ಇದೆ ಹಾಗೆಯೇ ವಿಷ್ಣುವರ್ಧನನು ದಂಡೆಯಾತ್ರೆ ಕೈಗೊಂಡಿದ್ದಾಗ ಬಂಕಾಪುರದಲ್ಲಿ (ಉತ್ತರಕನ್ನಡ ಜಿಲ್ಲೆಯಲ್ಲಿದೆ) ಸಾವನ್ನಪ್ಪಿದನು ಎಂಬುದು ಐತಿಹಾಸಕ ಸತ್ಯ.[30] ಅವನ ಪಾರ್ಥಿವ ಶರೀರವನ್ನು ಮೂಡಗೆರೆಗೆ ತಂದಿದ್ದು ಇಲ್ಲಿ ಕಾಳಗ ನಡೆದದ್ದರ ಬಗ್ಗೆ ಚಿಕ್ಕಮಗಳೂರಿನ ಕ್ರಿ.ಶ. 1141–42ರ ಶಾಸನ ತಿಳಿಸುತ್ತದೆ.[31]

ಈ ಮಾರ್ಗವಾಗಿ ಪಾರ್ಥಿವ ಶರೀರವನ್ನು ತಂದದ್ದು ಹೊಯ್ಸಳರ ಮೂಲಸ್ಥಾನದ ಬಗ್ಗೆ ಮತ್ತಷ್ಟು ಕುತೂಹಲ ಹುಟ್ಟಿಸುತ್ತದೆ. ಹಾಗೆಯೇ ಹೊಯಿಸಳಲಿನ ಸಮೀಪದ ಜನ್ನಾಪುರದ (ಇದು ಕವಿ ರನ್ನನು ಉಂಬಳಿಯಾಗಿ ಪಡೆದ ಗ್ರಾಮ) ಸಕಲೇಶಪುರ ತಾಲೂಕಿನಲ್ಲಿರುವ ಬೇಲೂರು ಗ್ರಾಮ ಮತ್ತು ಬೆಟ್ಟೇಶ್ವರಗಳ ಬಗ್ಗೆ ಸಂಶೋಧನೆ ನಡೆದರೆ ಹೊಯ್ಸಳರ ಆರಂಭ ಕಾಲದ ಇತಿಹಾಸದ ಬಗ್ಗೆ ಹೊಸ ಸಂಗತಿಗಳು ಬೆಳಕಿಗೆ ಬರುವ ಸಾಧ್ಯತೆಗಳು ಹೆಚ್ಚಾಗಿದೆ.

ಕ್ರಿ.ಶ. 11ನೆಯ ಶತಮಾನದ ಮಧ್ಯಭಾಗದಲ್ಲಿ ಚೋಳರು ಮತ್ತು ಕಲ್ಯಾಣ ಚಾಳುಕ್ಯರ ನಡುವೆ ಆಗಿಂದಾಗ್ಗೆ ನಡೆಯುತ್ತಿದ್ದ ಯುದ್ದ ಕಲಹಗಳ ಸದುಪಯೋಗಪಡಿಸಿಕೊಂಡ ಹೊಯ್ಸಳರು ಗಂಗವಾಡಿ ಪ್ರಾಂತ್ಯ ಮತ್ತು ಅದಕ್ಕೆ ಹೊಂದಿಕೊಂಡಂತಹ ಪಶ್ಚಿಮಘಟ್ಟಗಳ ಮೇಲೆ ತಮ್ಮ ಅಧಿಪತ್ಯವನ್ನು ಸ್ಥಾಪಿಸಿದರು. ಮೊದಲು ನೃಪಕಾಮನು ಕಲಿಯೂರು ಕದನದಲ್ಲಿ ಚೋಳ ದಂಡನಾಯಕನಾದ ಅಪ್ರಮೇಯವನ್ನು ಎದುರಿಸಿದನೆಂಬುದು ಹಲವು ವಿದ್ವಾಂಸರ ಅಭಿಪ್ರಾಯ. ಇವನ ಅನಂತರ ಇವನ ಮಗನಾದ ವಿನಯಾಧಿತ್ಯನು ಕ್ರಿ.ಶ.1045 ರಲ್ಲಿ ಪಟ್ಟಕ್ಕೆ ಬಂದ ಈತ ಸುಮಾರು 50 ವರ್ಷಗಳಷ್ಟು ಕಾಲ ದೀರ್ಘಕಾಲ ರಾಜ್ಯವನ್ನಾಳಿದ. ಇವನ ಕಾಲದಲ್ಲಿಯೂ ಹೊಯ್ಸಳರು ಸಣ್ಣ ಮಾಂಡಲೀಕರಾಗಿಯೇ ಮುಂದುವರೆದರು. ಅನಂತರ ಈತನ ಮಗನಾದ ಎರೆಯಂಗ ಕ್ರಿ.ಶ.1098ರಲ್ಲಿ ಪಟ್ಟಕ್ಕೆ ಬಂದು ಕೇವಲ 2 ವರ್ಷಗಳ ಕಾಲ ಆಳಿದ. ಈತನ ಪತ್ನಿ ಏಚಲದೇವಿ ಇವನಿಗೆ ಒಂದನೆಯ ಬಲ್ಲಾಳ, ವಿಷ್ಣುವರ್ಧನ ಮತ್ತು ಉದಯಾದಿತ್ಯರೆಂಬ ಮೂವರು ಮಕ್ಕಳಿದ್ದರು.

ಎರೆಯಂಗನ ಹಿರಿಯ ಮಗನಾದ ಒಂದನೆಯ ಬಲ್ಲಾಳ ಕ್ರಿ.ಶ. 1100 ರಲ್ಲಿ ಸಿಂಹಾಸನವನ್ನೇರಿದ ಇವನ ಕಾಲದಲ್ಲಿ ಆಡಳಿತ ಪ್ರಾಂತ್ಯ ವಿಸ್ತರಿಸಿತು. ಕೊಂಗುನಾಡು, ಆಳ್ವಖೇಡ, ತಲಕಾಡು ಮುಂತಾದ ಭಾಗಗಳು ಇವನ ಅಧೀನದಲ್ಲಿದ್ದವು. ಬೇಲೂರು ಇವನ ರಾಜಧಾನಿಯಾಯಿತು. ಇವನು ಚೋಳರ ಸಾಮಂತ ದೊರೆಗಳಾದ ಚಂಗಾಳ್ವ ಮತ್ತು ಕೊಂಗಾಳ್ವರನ್ನು ಸೋಲಿಸಿದನು. ಉಚ್ಚಂಗಿಯ ಪಾಂಡ್ಯರನ್ನು ಮತ್ತು ಆಳ್ವಖೇಡವನ್ನು ಮುತ್ತಿದುದ್ದು ಇವನ ಕಾರ್ಯಸಾಧನೆಯಾಗಿದೆ. ಉಚ್ಚಂಗಿಯನ್ನು ಗೆದ್ದನಂತರ ಅವನ ಸೈನಿಕ ಪಡೆಯು ಉಚ್ಚಂಗಿಯನ್ನು ಲೂಟಿ ಮಾಡಿ ಅಪಾರವಾದ ಸಂಪತ್ತನ್ನು ದೋಚಿದನು..[32]

ಅನಂತರದಲ್ಲಿ ಬಲ್ಲಾಳನಿಗೂ ಸೇವುಣ ರಾಜ ಸಂಕಮ್ಮನಿಗೂ ಮಡವಳ್ಳಿ ಎಂಬಲ್ಲಿ ಮಹಕಾಳಗವಾಯಿತು. ಆ ಯುದ್ಧದಲ್ಲಿ ಒಂಟೆಯ ಪಡೆಯ ಮುಖ್ಯಸ್ಥನಾಗಿದ್ದ ಅಚ್ಚಸಾಹಣಿಯು ಸಂಕಮ್ಮನನ್ನು ಸೋಲಿಸಿ ಮಡಿದನು. ಆಗ ಬಲ್ಲಾಳನೇ ತನ್ನ ಸೇವಕನ ಬೆನ್ನ ಮುಟ್ಟಿ ಅವನ ಸ್ವಾಮಿನಿಷ್ಠೆಯನ್ನು ಮೆಚ್ಚಿದನು.[33]

ಇತ್ತ ಚಾಳುಕ್ಯರ ದೊರೆ 6ನೆಯ ವಿಕ್ರಮಾದಿತ್ಯನು ಪರಮಾರರ ಮೇಲೆ ದಂಡೆತ್ತಿ ಹೋಗಲು ಪ್ರೇರೇಪಿಸಿದನು. ಆಗ ಬಲ್ಲಾಳನು ತನ್ನ ತಮ್ಮನಾದ ವಿಷ್ಣುವರ್ಧನನ ಜೊತೆಗೂಡಿ ಪರಮಾರ ರಾಜ ಜಗದೇವನನ್ನು ಸೋಲಿಸಿದನು ಆನಂತರದಲ್ಲಿ ಹೊಯ್ಸಳರ ಪ್ರಾಬಲ್ಯವನ್ನು ತಡೆಯಲು ಚಾಳುಕ್ಯರೇ ಇವರ ಮೇಲೆ ಯುದ್ಧಮಾಡಿ ಬಲ್ಲಾಳನನ್ನು ಸೋಲಿಸಿದರು. ಸೋತ

ಸ್ವಲ್ಪ ಸಮಯದಲ್ಲಿಯೇ ಈತನು ಮರಣ ಹೊಂದಿದನು ಆದರೆ ಇವನ ರಾಜಕೀಯ ಜೀವನ ಅಷ್ಟೊಂದು ಚೆನ್ನಾಗಿರಲಿಲ್ಲವೆಂದು ಹೇಳಬಹುದು. ಚಿಕ್ಕಮಗಳೂರಿನ ಸಿಂಧಗೆರೆ ಶಾಸನವೊಂದರಲ್ಲಿ ಇವನ ವಿವಾಹ ಮಹೋತ್ಸವವನ್ನು ವಿವರಿಸುತ್ತದೆ. ಬಲ್ಲಾಳನ ದಂಡನಾಯಕನಾದ ಮರಿಯಾನೆ ಎಂಬುವವನು ಮೂರು ಜನ ಹೆಣ್ಣು ಮಕ್ಕಳಾದ ಪದ್ಮಲದೇವಿ, ಚಾಮಲದೇವಿ ಮತ್ತು ಬೊಪ್ಪಾದೇವಿಯರನ್ನು ಒಂದೇ ಹಸೆಮಣೆಯಲ್ಲಿ ಬಲ್ಲಾಳನಿಗೆ ವಿವಾಹ ಮಾಡಿದ ವಿಷಯವನ್ನು ತಿಳಿಸುತ್ತದೆ.[34] ಈ ಅಂಶವನ್ನು ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ಶಾಸನವೊಂದರಲ್ಲೂ ಈ ವಿಶಿಷ್ಟ ವಿವಾಹದ ಉಲ್ಲೇಖವಿದೆ.[35]

ವಿಷ್ಣುವರ್ಧನನು ಅಣ್ಣನ ಮರಣಾನಂತರ ಆಡಳಿತ ಸೂತ್ರವನ್ನು ಹಿಡಿದು ತನ್ನ ದಕ್ಷತೆಯಿಂದ ಸಾಮ್ರಾಜ್ಯವನ್ನು ವಿಸ್ತರಿಸಿ ಅದರ ಖ್ಯಾತಿಯನ್ನು ಹೆಚ್ಚಿಸಿ ಸ್ವತಂತ್ರ ಚಕ್ರಾಧಿಪತ್ಯವನ್ನು ಸ್ಥಾಪಿಸಿದ ವಿಷ್ಣುವರ್ಧನನು ರಾಜ್ಯಭಾರ ವಹಿಸಿಕೊಂಡ ಕೂಡಲೇ ಮಾಡಬೇಕಾಗಿದ್ದ ಮುಖ್ಯ ಕರ್ತವ್ಯವೆಂದರೆ ತಲಕಾಡನ್ನು ಚೋಳರಿಂದ ಹಿಂದೆ ಪಡೆಯುವುದೇ ಆಗಿತ್ತು. ವಿಷ್ಣುವರ್ಧನನ ಶಕ್ತ ಸೇನಾನಿ ಗಂಗರಾಜನು ಉತ್ತಮ ಸೈನ್ಯದೊಂದಿಗೆ ತಲಕಾಡಿಗೆ ಮುತ್ತಿಗೆ ಹಾಕಿದನು ಆದರೆ ತಲಕಾಡಿನಲ್ಲಿದ್ದ ಚೋಳಸಾಮಂತ ಅದಿಯಮನನು ಶರಣಾಗತನಾಗಲೂ ಒಪ್ಪಲಿಲ್ಲ. ಇದರಿಂದಾಗಿ ಇಬ್ಬರಿಗೂ ಘೋರಯುದ್ಧವು ನಡೆಯಿತು. ಇದರಲ್ಲಿ ಗಂಗರಾಜನು ಜಯಶಾಲಿಯಾದನು.[36]

ಇವನು ಚೋಳರ ಮೇಲೆ ಯುದ್ಧಮಾಡಿ ಗೆದ್ದು ಅವರನ್ನು ತಲಕಾಡಿನಿಂದಲೂ ಮತ್ತು ನೊಳಂಬವಾಡಿಯಿಂದಲೂ ಓಡಿಸಿದುದರಿಂದ ಇವನಿಗೆ 'ತಲಕಾಡುಗೊಂಡ' ಮತ್ತು 'ನೊಳಂಬವಾಡಿಗೊಂಡ' ಎಂಬ ಬಿರುದುಗಳು ಪ್ರಾಪ್ತವಾದವು.[37,38] ಈತ ಉತ್ತರದಲ್ಲಿ ಉಚ್ಚಾಂಗಿಯ ಪಾಂಡ್ಯರನ್ನು ಸೋಲಿಸಿ ರಾಜ್ಯ ವಿಸ್ತಾರ ಮಾಡಿದ. ಕ್ರಿ.ಶ. 118ರಲ್ಲಿ ಕಣ್ಣೇಗಾಲದಲ್ಲಿ ಚಾಳುಕ್ಯರ ಮೇಲೆ ಯುದ್ಧ ಮಾಡಿ ಜಯಗಳಿಸಿದ ನಂತರದಲ್ಲಿ ಗೋವೆಯ ಕದಂಬರು ಕ್ರಿ.ಶ. 112 ರಲ್ಲಿ ಹಾನಗಲ್ಲಿನ ಕದಂಬರನ್ನು ಸೋಲಿಸಿ ಅವರ ರಾಜ್ಯಗಳನ್ನು ವಶಪಡಿಸಿಕೊಂಡ.[39] ಈ ಯುದ್ಧದಲ್ಲಿ ವಿಷ್ಣುವರ್ಧನನು ಕದಂಬ ಸೇನಾಧಿಪತಿಯಾದ ಮಸಣನನ್ನು ಕೊಂದನು.[40] ಅನಂತರದಲ್ಲಿ ಕ್ರಿ.ಶ. 1136 ರಲ್ಲಿ ಬಯಲುನಾಡಿನ ಹನ್ನೇರಡುಬೀಡು ಎಂಬ ಗ್ರಾಮದ ಮೇಲೆ ಯುದ್ಧ ಮಾಡಿ ಗೆದ್ದನು.[41] 1141ರಲ್ಲಿ ಮತ್ತೇ ಹಾನುಂಗಲ್ ಮತ್ತು ಗೋವ ರಾಜ್ಯಗಳ ಮೇಲೆ ಯುದ್ಧ ಮಾಡಿ ಜಯಶಾಲಿಯಾದನು.[42]

ಈತನು ಸಮರ್ಥ ಆಡಳಿತಗಾರನಾಗಿದ್ದು ಕಲೆ, ಸಾಹಿತ್ಯ ಮತ್ತು ಸಂಸ್ಕೃತಿಯ ಏಳಿಗೆಗೆ ವಿಶೇಷವಾದ ಪ್ರೋತ್ಸಾಹವನ್ನು ಕೊಟ್ಟ ಈತನ ಪಟ್ಟಮಹಿಷಿ ಶಾಂತಲದೇವಿಯ ಪತಿಯ

ಅನುವರ್ತಿಯಾಗಿದ್ದಳು. ಸುಸಂಸ್ಕೃತಳೂ, ನೃತ್ಯ ವಿಶಾರದೆಯೂ ಆಗಿದ್ದ ಇವಳೂ ಸಹ ಸಂಸ್ಕೃತಿಯ ಬೆಳವಣಿಗೆಗೆ ಪ್ರೋತ್ಸಾಹ ನೀಡಿದಳು. ಶ್ರೀವೈಷ್ಣವ ಧರ್ಮದ ಸ್ಥಾಪಕರಾದ ಶ್ರೀ ರಾಮಾನುಜಚಾರ್ಯರು ವಿಷ್ಣುವರ್ಧನನ ಕಾಲದಲ್ಲಿ ತಮಿಳುನಾಡಿನಿಂದ ಕರ್ನಾಟಕಕ್ಕೆ ಆಗಮಿಸಿ ಹೊಯ್ಸಳರ ಆಶ್ರಯ ಪಡೆದರು ವಿಷ್ಣುವರ್ಧನನ ಧರ್ಮಸಹಿಷ್ಣುವಾಗಿದ್ದ ವೈಷ್ಣವಧರ್ಮ, ಶೈವಧರ್ಮ ಮತ್ತು ಜೈನಧರ್ಮಗಳಿಗೆ ಸಮಾನ ಪ್ರೋತ್ಸಾಹ ನೀಡಿ ಪೋಷಿಸಿದ ಈತನ ಕಾಲದಲ್ಲಿ ಅನೇಕ ದೇವಾಲಯಗಳು, ಬಸದಿಗಳು ನಿರ್ಮಾಣವಾದವು ಇವನು ಕ್ರಿ.ಶ. 1142 ರಲ್ಲಿ ಬಂಕಪುರದಲ್ಲಿ ಮರಣ ಹೊಂದಿದನು ಆಗ ಅವನ ಮಂತ್ರಿ ಬೊಪ್ಪದೇವ ದಂಡನಾಯಕನು ವಿಷ್ಣುವರ್ಧನನ ಮೃತದೇಹವನ್ನು ಹೊಯ್ಸಳರ ಹುಟ್ಟೂರಾದ ಅಂಗಡಿಗಳಿಗೆ ತಂದರು.[43]

ಇವನ ತರುವಾಯ ಈತನ ಮಗ ಒಂದನೇಯ ನರಸಿಂಹ ಸಿಂಹಾಸನವನ್ನೇರಿದ ಆಗ ಇವನಿಗೆ ಕೇವಲ 8 ವರ್ಷ ವಯಸ್ಸು ಈತನ ಕಾಲದಲ್ಲಿ ಯಾವುದೇ ಪ್ರಮುಖ ರಾಜಕೀಯ ಘಟನೆಗಳು ನಡೆಯಲಿಲ್ಲ ಈತ ಸುಖಲೋಲುಪನಾಗಿದ್ದರಿಂದ ಆಡಳಿತದ ಬಿಸಿ ಸಡಿಲಗೊಂಡಿತು ಈ ಸಂದರ್ಭವನ್ನು ಬಳಸಿಕೊಂಡು ಅನೇಕ ಶತ್ರುಗಳು ತಲೆಎತ್ತಿದರು ಈ ಸಂದರ್ಭದಲ್ಲಿ ಹೊಯ್ಸಳ ದಂಡನಾಯಕರುಗಳಾದ ಬೊಪ್ಪದೇವ, ಚಾವಿಮಯ್ಯ, ಬೂಚಿಮಯ್ಯ ಮುಂತಾದ ದಂಡನಾಯಕರ ರಾಜ್ಯವು ಶತ್ರುಗಳ ವಶವಾಗದಂತೆ ನೋಡಿಕೊಂಡರು ಆದರೂ ಕ್ರಿ.ಶ. 1143 ರಲ್ಲಿ ಚಾಳುಕ್ಯ ದೊರೆ ಜಗದೇಕಮಲ್ಲ ಹೊಯ್ಸಳರ ಮೇಲೆ ತನ್ನ ಸಾಮ್ರಾಜ್ಯದ ಪ್ರಾಬಲ್ಯವನ್ನು ಬಲತ್ಕಾರವಾಗಿ ಹೇರಿದನು. ಇದರ ಪರಿಣಾಮವಾಗಿ ಈತನು ತನ್ನ ಹೆಸರಿನ ಹಿಂದೆ ಜಗದೇಕಮಲ್ಲ ಎಂದು ಸೇರಿಸಿಕೊಳ್ಳಬೇಕಾಯಿತು.[44]

ಕಲ್ಯಾಣ ಚಾಲುಕ್ಯರ ಸಾಮ್ರಾಜ್ಯದಲ್ಲಿ ಕಳಚೂರಿಗಳ ಪ್ರಭಾವದಿಂದಾಗಿ ಉಂಟಾದ ಪ್ರಕ್ಷೋಭೆ ಏರ್ಪಟ್ಟಿತ್ತು ನರಸಿಂಹನು ಪ್ರಬಲನಾಗಿ ಕ್ರಿ.ಶ. 1173ರವರೆಗೆ ರಾಜ್ಯವನ್ನಾಳಿದನು ಈತನ ಕಾಲದಲ್ಲಿಯೂ ಅನೇಕ ದೇವಾಲಯಗಳು, ಬಸದಿಗಳು ನಿರ್ಮಾಣವಾದವು. ನರಸಿಂಹನ ಮಗನಾದ ಎರಡನೆಯ ಬಲ್ಲಾಳನು ತನ್ನ ತಂದೆಯ ವಿರುದ್ಧವೇ ದಂಗೆ ಎದ್ದು ಕ್ರಿ.ಶ. 1173ರಲ್ಲಿ ಸಿಂಹಾಸನವನ್ನು ಏರಿದನು.[45,46] ಇವನು ತನ್ನ ತಾತನಾದ ವಿಷ್ಣುವರ್ಧನನಂತೆ ಸಮರ್ಥ ಆಡಳಿತಗಾರನಾಗಿದ್ದ ಈತ ಚೆಂಗಾಳ್ವರನ್ನೂ, ಕೊಂಗಾಳ್ವರನ್ನೂ, ಉಚ್ಚಂಗಿಯ ಪಾಂಡ್ಯರನ್ನು ಸೋಲಿಸಿ ಅವರ ರಾಜ್ಯಗಳನ್ನು ತನ್ನ ವಶಕ್ಕೆ ತೆಗೆದುಕೊಂಡು ಅನೇಕ ಯುದ್ಧಗಳನ್ನು ಮಾಡಿ ರಾಜ್ಯದ ಎಲ್ಲೆಯನ್ನು ವಿಸ್ತರಿಸಿದನು. ಬಲ್ಲಾಳನ ರಾಣಿಯರಾದ ಉಮಾಪರಮೇಶ್ವರಿ

(ಉಮಾದೇವಿ) ಎಂಬುವವಳು ಸಹ ಇವನ ಆಡಳಿತದಲ್ಲಿ ಭಾಗಿಯಾಗಿದ್ದಳು.[47] ಇವನಿಗೆ ಮತ್ತೊಬ್ಬ ರಾಣಿಯಿದ್ದಳು ಇವಳ ಹೆಸರು ಕೇತಲದೇವಿ ಈಕೆಯು ಎರಡನೆಯ ಬಲ್ಲಾಳನ ಮಂತ್ರಿಯಾಗಿದ್ದ ಕೇಶವಯ್ಯನ ಮಗಳು.[48]

ಅನಂತರ ಇವನ ಮಗನಾದ ವೀರನರಸಿಂಹನು ಕ್ರಿ.ಶ. 1220ರಲ್ಲಿ ಸಿಂಹಾಸನವನ್ನೇರಿದ, ಯುವರಾಜ ಆಗಿರುವಾಗಲೇ ನರಸಿಂಹನು ತಂದೆಯ ಜೊತೆಗೂಡಿ ಚೋಳ ರಾಜ್ಯದ ಮೇಲೆ ಅನೇಕ ದಂಡೆಯಾತ್ರೆಗಳನ್ನು ಮಾಡಿದ್ದ ಇದರಿಂದ ಇವನಿಗೆ **'ಚೋಳಕುಲೈಕರಕ್ಷಕ'** ಎಂಬ ಬಿರುದು ಬಂದಿತು. ಇವನು ತನ್ನ ತಂದೆಯ ಪರಂಪರೆಯನ್ನು ಮುಂದುವರೆಸಿಕೊಂಡು ಬಂದು ತಮಿಳುನಾಡಿನಲ್ಲಿ ಅನೇಕ ರಾಜರುಗಳ ಮೇಲೆ ಯುದ್ಧಮಾಡಿ ಜಯಶೀಲನಾದ.

ನರಸಿಂಹನ ಅನಂತರ ಇಮ್ಮಡಿನರಸಿಂಹನು ಆಡಳಿತಕ್ಕೆ ಬಂದನು. ಇವನ ಕಾಲದ ವೈಶಿಷ್ಟ್ಯವೆಂದರೆ ತಮಿಳುನಾಡಿನ ಅನೇಕ ಭಾಗಗಳ ಮೇಲೆ ಯಶಸ್ವಿಯಾಗಿ ಸಾರ್ವಭೌಮತ್ವವನ್ನು ಸ್ಥಾಪಿಸಿ ಹಲವು ವರ್ಷಗಳ ಕಾಲ ಆಡಳಿತ ನಡೆಸಿದನು. ಇವನು ದಕ್ಷಿಣದ ಶ್ರೀರಂಗದ ಮೇಲೆ ದಂಡೆತ್ತಿ ಹೋದದನ್ನು ಕ್ರಿ.ಶ. 1222ರ ಶಾಸನವು ಉಲ್ಲೇಖಿಸುತ್ತದೆ.[49] ವಾಸ್ತವವಾಗಿ ಈತನು ಪಾಂಡ್ಯರಾಜನನ್ನು ಸೋಲಿಸಿ ಚೋಳರಾಜನನ್ನು ಪ್ರತಿಷ್ಠಾಪಿಸಿದನು. ಇವನ ಅನಂತರ ಈತನ ಮಗನಾದ ಸೋಮೇಶ್ವರನು ಕ್ರಿ.ಶ. 1235ರಲ್ಲಿ ಪಟ್ಟಕ್ಕೆ ಬಂದನು.[50]

ಈತನ ಕಾಲದಲ್ಲಿ ಹೊಯ್ಸಳ ರಾಜ್ಯ ವೈಭವದ ಪರಮಾವಧಿಯನ್ನು ಮುಟ್ಟಿತು. ಈತ ಹಲವಾರು ಯುದ್ಧಗಳನ್ನು ಮಾಡಿದ ಇವನ ಕಾಲದಲ್ಲಿ ತಮಿಳುನಾಡು ಪ್ರಾಂತ್ಯದ ಕೆಲವು ರಾಜಮನೆತನಗಳ ವಿರೋಧ ಪ್ರಬಲವಾಗಿತ್ತು. ಇವನ ಅನಂತರ ಉತ್ತರದಲ್ಲಿ 3ನೆಯ ನರಸಿಂಹನು ದಕ್ಷಿಣದಲ್ಲಿ ರಾಮನಾಥ ಹೊಯ್ಸಳ ಸಿಂಹಾಸನವನ್ನೇರಿದರು. ಇವರು 40 ವರ್ಷಗಳ ಕಾಲ ಸುದೀರ್ಘವಾಗಿ ರಾಜ್ಯವನ್ನಾಳಿದರೂ ಪರಸ್ಪರ ಕಿತ್ತಾಟದಲ್ಲಿಯೇ ಕಾಲ ಕಳೆದರು. ಇವರ ಅನಂತರದ ಕೆಲವು ವರ್ಷಗಳು ಕಳೆದ ಮೇಲೆ ಮೂರನೆಯ ಬಲ್ಲಾಳನು ರಾಜ್ಯಭಾರ ಮಾಡಿದನು.[51]

ಇವನ ಕಾಲದಲ್ಲಿ ಬಂದೊದಗಿದ ಸಂಕಷ್ಟವೆಂದರೆ ಮುಸಲ್ಮಾನರ ದಾಳಿ ಉತ್ತರದ ಕಡೆಯಿಂದ ಆರಂಭವಾಗಿ ದಕ್ಷಿಣ ರಾಜ್ಯಗಳ ಮೇಲೆ ತೀವ್ರವಾಯಿತು. ಕಡೂರಿನ ವೀರಗಲ್ಲೊಂದು ಮೂರನೆಯ ಬಲ್ಲಾಳ ಮತ್ತು ಮುಸ್ಲಿಂರ ನಡುವೆ ತಿರುಚನಾಪಳ್ಳಿಯಲ್ಲಿ ನಡೆದ ಯುದ್ಧವನ್ನು

ತಿಳಿಸುತ್ತದೆ.[52] ದಕ್ಷಿಣದಲ್ಲಿದ್ದ ರಾಜಕೀಯ ಗೊಂದಲದ ಪೂರ್ಣ ಲಾಭವನ್ನು ಮುಸಲ್ಮಾನ ದಾಳಿಗಳು ಪಡೆದುಕೊಂಡವು. ಅನಂತರದಲ್ಲಿ ಹೊಯ್ಸಳ ರಾಜವಂಶದ ಆಡಳಿತ ಕ್ಷೀಣಿಸಿತು.

ಹೊಯ್ಸಳರ ಅಧಿಕಾರವಧಿಯ ಕೊನೆಯ ಕಾಲದವರೆಗೂ (ಕ್ರಿ.ಶ. 1342) ಚಿಕ್ಕಮಗಳೂರು ಈ ರಾಜ್ಯದ ಅವಿಭಾಜ್ಯ ಅಂಗವಾಗಿತ್ತು. ಇವರು ಜಿಲ್ಲೆಯಲ್ಲಿ ಹಲವಾರು ದೇವಾಲಯಗಳನ್ನು ಬಸದಿಗಳನ್ನು ಕೆರೆ ಕುಂಟೆಗಳನ್ನು ಕಟ್ಟಿಸಿದರು. ಅಯ್ಯನಕೆರೆ ದುರಸ್ಥಿ ಮತ್ತು ಸುವ್ಯವಸ್ಥೆ ಕಾರ್ಯ ಕೈಗೊಂಡಿದ್ದು ಇದು ಈ ಜಿಲ್ಲೆಯ ಅಭಿವೃದ್ಧಿಗೆ ಬುನಾದಿಯಾಯಿತು, ಬಲ್ಲಾಳನ ಹೆಸರಿನಲ್ಲಿ ಬಲ್ಲಾಳರಾಯನದುರ್ಗದಲ್ಲಿ ಒಂದು ಕೋಟೆಯನ್ನು ನಿರ್ಮಿಸಿದರು.[53]

ಹೊಯ್ಸಳ ರಾಜ್ಯ ಸಕಲ ಧರ್ಮಗಳ ಆವಾಸ ಸ್ಥಾನವಾಗಿತ್ತು. ಕಲ್ಯಾಣದಲ್ಲಿ ವೀರಶೈವ ಕ್ರಾಂತಿ ನಡೆದ ಬಳಿಕ ಶರಣರು ಈ ಜಿಲ್ಲೆಯ ಉಳಿವೆಮಲೆಗೆ ಬಂದು ಆಶ್ರಯ ಪಡೆದರು ಭದ್ರಾನದಿ ದಡದಲ್ಲಿರುವ ಸಂಗಮೇಶ್ವರ ಪೇಟೆಯಲ್ಲಿ ಅವರು ತಂಗಿದ್ದರು ಮತ್ತು ಬಾಳೆಹೊನ್ನೂರು ವೀರಶೈವರ ಪಂಚಮಠಗಳಲ್ಲಿ ಒಂದಾಯಿತು. ಧರ್ಮ ಪ್ರವರ್ತಕ 'ಶ್ರೀ ಮಧ್ವಾಚಾರ್ಯರು ಚಿಕ್ಕಮಗಳೂರು ಜಿಲ್ಲೆಯಲ್ಲಿ ಸಂಚರಿಸಿದ್ದರೆಂಬ ಪ್ರತೀತಿ ಇದ್ದು ಅಂಬುತೀರ್ಥದಲ್ಲಿ ಶ್ರೀಮದ್ವಾಚಾರ್ಯರು ಬಂಡೆ' ಎಂದೂ ಕರೆಯುವ ಒಂದು ಬಂಡೆ ಇದೆ ಬಲ್ಲಾಳರಾಯನದುರ್ಗ ಈ ಜಿಲ್ಲೆಯಲ್ಲಿ ಹೊಯ್ಸಳರ ಆಳ್ವಿಕೆಗೆ ಪ್ರತ್ಯಕ್ಷ ಸಾಕ್ಷಿಯಾಗಿದೆ.[54] ಹೊಯ್ಸಳರ ಕಾಲದಲ್ಲಿ ಅಂಗಡಿ, ಅಂಬಳೆ, ಆಸಂದಿ, ಸಕ್ಕರೆಪಟ್ಟಣ, ಅಮೃತಾಪುರ, ಮತ್ತಾವರ, ಮರಳೆ, ಹಿರಿಯೂರು, ತರೀಕೆರೆ, ಬಾಳೆಹೊನ್ನೂರು, ಕಿಗ್ಗ, ಕಳಸ, ಹಿರೇಮಗಳೂರು, ಮೂಡಗೆರೆ, ಗೋಣಿಬೀಡು ಮೊದಲದವು ಮುಖ್ಯ ಧಾರ್ಮಿಕ ಸ್ಥಳಗಳಾಗಿದ್ದವು.

## ವಿಜಯನಗರದ ಅರಸರು

ವಿಜಯನಗರ ಸ್ಥಾಪನೆಯು ಕರ್ನಾಟಕದ ಇತಿಹಾಸದಲ್ಲೇ ಅಲ್ಲದೇ ಭಾರತದ ಇತಿಹಾಸದಲ್ಲೂ ಅತೀ ಮುಖ್ಯವಾದ ಘಟನೆಯಾಗಿದೆ. ಹರಿಹರನು ತನ್ನ ಸಹೋದರರಾದ ಬುಕ್ಕ, ಕಂಪಣ ಮಾರಪ್ಪ ಮತ್ತು ಮುದ್ದಪ್ಪರ ಸಹಾಯದಿಂದ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಈ ಸಾಮ್ರಾಜ್ಯವು ಸುಮಾರು 300 ವರ್ಷಗಳ ಕಾಲ ಆಳ್ವಿಕೆ ನಡೆಸಿತು.

ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯ ಘಟನಾವಳಿಯೊಂದಿಗೆ ಈ ಜಿಲ್ಲೆಯ ಸಂಬಂಧ ಕಲ್ಪಿತವಾಗಿದೆ. ಶೃಂಗೇರಿ ಪೀಠದ ಗುರುಗಳಾಗಿದ್ದ ವಿದ್ಯಾರಣ್ಯರು ವಿಜಯನಗರದ ಸಾಮ್ರಾಜ್ಯ

ಸ್ಥಾಪನೆಗೆ ನೈತಿಕ ಬೆಂಬಲ ನೀಡಿದರೆಂದು ಪ್ರತೀತಿಯಿದೆ. ಕ್ರಿ.ಶ. 1346ರಲ್ಲಿ ಅಂದರೆ ಸಾಮ್ರಾಜ್ಯ ಸ್ಥಾಪನೆಯಾದ ಒಂದು ದಶಕದಲ್ಲಿ ಅಂದರೆ ಹೊಯ್ಸಳ ರಾಜ್ಯ ಅಸ್ತಂಗತವಾದ ಕೆಲವು ವರ್ಷಗಳಲ್ಲಿ ವಿಜಯನಗರ ಸಾಮ್ರಾಟ ಹರಿಹರನು ಶೃಂಗೇರಿಗೆ ಭೇಟಿ ನೀಡಿದ್ದು ಗಮನಾರ್ಹವಾಗಿದೆ.[55] ಇವನು ವಿದ್ಯಾರಣ್ಯ ಶ್ರೀಪಾದರ ಜ್ಞಾಪಕಾರ್ಥವಾಗಿ ವಿದ್ಯಾರಣ್ಯಪುರವೆಂಬ ಅಗ್ರಹಾರವನ್ನು ಸ್ಥಾಪಿಸಿದನು.[56]

ಬುಕ್ಕನ ಮಗ ವಿರೂಪಣ್ಣ ಒಡೆಯನು ಶಿವಮೊಗ್ಗ ಜಿಲ್ಲೆಯ ಆರಗವನ್ನು ಕೇಂದ್ರ ಮಾಡಿಕೊಂಡು ಕಳಸ ಪ್ರಾಂತ್ಯವನ್ನು ಆಳುತ್ತಿದ್ದುದ್ದಾಗಿ ತಿಳಿದುಬರುತ್ತದೆ. ಪ್ರಾರಂಭದಲ್ಲಿ ಚಾಳುಕ್ಯರು, ರಾಷ್ಟ್ರಕೂಟರೂ ಈ ಜಿಲ್ಲೆಯನ್ನು ನೇರವಾಗಿ ಆಳದೆ ಸಾಮಂತರ ಮೂಲಕ ಆಳಿದ್ದೇ ಹೆಚ್ಚು ಆದರೆ ವಿಜಯನಗರದ ಅರಸರು ಇದರ ಕೆಲವು ಭಾಗಗಳನ್ನು ತಮ್ಮ ನೇರ ಆಡಳಿತದಲ್ಲಿ ಸೇರಿಸಿಕೊಂಡಿದ್ದರು. ವಿಜಯನಗರ ಅರಸರ ಅಧೀನದಲ್ಲಿ ಕಳಸದ ಭೈರಅರಸರು, ಬೇಲೂರು ಮತ್ತು ಐಗೂರು ನಾಯಕರು, ಕೆಳದಿ ನಾಯಕರು, ಬಸವಾಪಟ್ಟಣ, ತರೀಕೆರೆ ಪಾಳೆಯಗಾರರು ಈ ಜಿಲ್ಲೆಯ ವಿವಿಧ ಭಾಗಗಳನ್ನು ಆಳಿದರು.

ಕಳಸದ ಆಡಳಿತ ಒಂದನೆಯ ಬುಕ್ಕನ ಮಗ ವಿರೂಪಣ್ಣ ಒಡೆಯರ್ ವಶವಾಗಿತ್ತು. ಮೂಡಿಗೆರೆಯಲ್ಲಿನ ಕ್ರಿ.ಶ. 1493ರ ಶಾಸನದಲ್ಲಿ ಕಳಸವು ವಿಜಯನಗರ ಆಳ್ವಿಕೆಯಲ್ಲಿತ್ತೆಂದು ಭೈರ ಅರಸರು ಕಳಸವನ್ನಾಳುತ್ತಿದ್ದರೆಂದೂ ಉಲ್ಲೇಖವಿದೆ ಹಾಗೂ ಕಳಸವನ್ನು 'ಸಾವಿರ ಸೀಮೆ' ಎಂದು ಕರೆಯಲಾಗುತ್ತಿತ್ತು.[57] ಮೊದಲಿಗೆ ಕಳಸಕ್ಕೆ 'ಮುನ್ನೂರು ಸೀಮೆ' ಎಂದು ಹೆಸರಿತ್ತು. ಹರಿಹರನ ಅನಂತರದಲ್ಲಿ ದೇವರಾಯನು ಕ್ರಿ.ಶ. 1410 ರಿಂದ ಆಡಳಿತ ನಡೆಸಿದನು.[58] ಕ್ರಿ.ಶ. 1410 ರ ಶಾಸನವೊಂದರಲ್ಲಿ ದೇವರಾಯನು ಹರಿಹರನ ಮಗನೆಂದು ತಿಳಿಸುತ್ತದೆ.[59] ಕ್ರಿ.ಶ. 1432 ರಲ್ಲಿ ಎರಡನೆಯ ದೇವರಾಯನು ಆಡಳಿತಕ್ಕೆ ಬಂದನು. ಇವನು ಕಾರ್ಕಳ ಪ್ರಾಂತ್ಯದಲ್ಲಿ ಆಡಳಿತ ನಡೆಸಿದನು.[60]

ಅನಂತರ ಕ್ರಿ.ಶ. 1509 ರಲ್ಲಿ ಕೃಷ್ಣದೇವರಾಯನು ಆಡಳಿತಕ್ಕೆ ಬಂದನು.[61] ಕೃಷ್ಣದೇವರಾಯನ ಅನಂತರ ಅಚ್ಯುತರಾಯ[62] ಸದಾಶಿವರಾಯ[63] ವೆಂಕಟಪ್ಪನಾಯಕ[64], ವೀರಭದ್ರನಾಯಕ, ಶಿವಪ್ಪನಾಯಕ, ಸೋಮಶೇಖರನಾಯಕ, ಎರಡನೇ ಕೃಷ್ಣರಾಜ ಒಡೆಯರ್ ಮತ್ತು ಮೂರನೆಯ ಕೃಷ್ಣರಾಜ ಒಡೆಯರ್ ಅವರು ಆಡಳಿತ ನಡೆಸಿದರು. ವಿಜಯನಗರ ಸಾಮ್ರಾಜ್ಯ ಶಿಥಿಲಗೊಂಡಾಗ ಅದರ ಕೊನೆಯ ರಾಜಮನೆತನವಾದ ಅರವೀಡು ವಂಶದ ಮೂರನೆಯ ಶ್ರೀರಂಗರಾಯ ಗೋಲ್ಕೊಂಡದ ಸುಲ್ತಾನನಿಂದಾಗಿ ನೆಲೆ ತಪ್ಪಿ ಆಶ್ರಯಕ್ಕಾಗಿ

ಅಲೆಯುತ್ತಿದ್ದನು. ಆಗ ಅಂದರೆ ಹದಿನೇಳನೆಯ ಶತಮಾನದ ಮಧ್ಯಭಾಗದಲ್ಲಿ ಬಿದನೂರಿನ ಶಿವಪ್ಪನಾಯಕನು ಸಕ್ಕರೆಪಟ್ಟಣದಲ್ಲಿ ನೆಲೆಗೊಳಿಸಿದ. ಶ್ರೀರಂಗರಾಯನಿಗೆ ಬೇಲೂರು ಪಾಳೆಯಪಟ್ಟಣವನ್ನು ಬಿಡಲಾಗಿತ್ತು. ಹೀಗಾಗಿ ಐತಿಹಾಸಿಕ ವ್ಯಂಗ್ಯವೆಂಬಂತೆ ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಮತ್ತು ಅವಸಾನಗಳೆರಡರಲ್ಲೂ ಈ ಜಿಲ್ಲೆ ಸಂಬಂಧ ಪಡೆಯಿತು.

ಹದಿನೇಳನೆಯ ಶತಮಾನದಲ್ಲಿ ಮೊಗಲ್ ಅಧಿಕಾರಿ ಅಜೀಮ್‌ಖಾನನು ಅಜ್ಜಂಪುರದಲ್ಲಿ ಕೋಟೆಯನ್ನು ಕಟ್ಟಿಸಿದ. ಅವನ ಹೆಸರೇ ಈ ಊರಿಗೆ ಬಂದಿತು ಮತ್ತು ಈ ಕಾಲದಲ್ಲಿ ದೇವನೂರು, ಯಗಟಿ, ಹಂಪಾಪುರ, ಹರಿಹರಪುರ, ಕಡೂರು, ಬುಕ್ಕಾಂಬುದಿ, ಮುತ್ತಿನಪುರ, ವಸ್ತಾರೆ ಮೊದಲಾದ ಸ್ಥಳಗಳು ಪ್ರಾಮುಖ್ಯತೆ ಪಡೆದಿದ್ದವು.

## ಸಾಮಂತ ರಾಜ ಮನೆತನದವರು

### ಸಾಂತರರು

ಸಾಂತರರು ಕ್ರಿ.ಶ. 7ನೆಯ ಶತಮಾನದಲ್ಲಿ ಈಗಿನ ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲೂಕಿನಲ್ಲಿರುವ ಹೊಂಬುಜದಲ್ಲಿ (ಈಗಿನ ಹುಂಚ ಅಥವಾ ಹುಮಚ) ರಾಜ್ಯ ಸ್ಥಾಪಿಸಿದರು. ಇವರ ಆಡಳಿತ ಕೇಂದ್ರ ಸಂಪೂರ್ಣವಾಗಿ ಮಲೆನಾಡಾಗಿತ್ತು ಹಾಗೂ ಮಲೆನಾಡಿನ ರಾಜ್ಯವಾಗಿತ್ತು.[65] ಉತ್ತರ ಕನ್ನಡ ಜಿಲ್ಲೆಯಿಂದ ಹಾಸನದವರೆಗೂ ಹಬ್ಬಿರುವ ಘಟ್ಟ ಪ್ರದೇಶದಲ್ಲಿ ಇವರು ಸುಮಾರು ಸಾವಿರ ವರ್ಷಗಳ ಕಾಲ ಆಳಿದರು ಇದು ಕರ್ನಾಟಕದ ಇತಿಹಾಸದಲ್ಲಿ ಒಂದು ದಾಖಲೆಯಾಗಿರಬಹುದು. ಇವರು ವಿವಿಧ ಸಾಮ್ರಾಜ್ಯಗಳಿಗೆ ಸಾಮಂತರಾಗಿಯೇ ಮುಂದುವರಿದರು. ಕಾಲಕಾಲಕ್ಕೆ ರಾಜಧಾನಿಗಳನ್ನೂ ಬದಲಾಯಿಸಿದರು. ಕ್ರಿ.ಶ. 12ನೆಯ ಶತಮಾನದಲ್ಲಿ ಹೊಂಬುಜದ ಅನಂತರ ಮೂಡಿಗೆರೆ ತಾಲೂಕಿನ ಕಳಸವನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು.[66]

ಇವರು ಕ್ರಿ.ಶ. 1290ರಿಂದ ಕಳಸದ ರಾಜರೆಂದು ಪ್ರಸಿದ್ಧರಾದರು ಹೊಯ್ಸಳರಿಗೆ ನೆರವಾದರು. ಕ್ರಿ.ಶ. 1290ರಲ್ಲಿ ಬಳ್ಳುದೇವ ಸಾಂತರನ ಆಳ್ವಿಕೆಯಲ್ಲಿ ಕಳಸವೇ ರಾಜಧಾನಿಯಾಗಿತ್ತು. ಮತ್ತು ಈ ಮನೆತನದ ಜಾಕಲಮಹಾದೇವಿ, ಕಾಳಲಮಹಾದೇವಿ ಎಂಬ ರಾಣಿಯರೂ ಪ್ರಸಿದ್ಧರಾಗಿದ್ದಾರೆ.[67] ಕಾಳಲದೇವಿಯು ಕಳಸದ ಕಳಸನಾಥನ ಭಕ್ತೆಯಾಗಿದ್ದಳು.[68] ಇವರು ಘಟ್ಟದ ಕೆಳಗಿನ ಸಿಸುಗಲ್ಲಿನಿಂದಲೂ ಆಳಿದರು. ತರುವಾಯ ದಕ್ಷಿಣ ಕನ್ನಡ ಜಿಲ್ಲೆಯ ಕೆರೆವಾಸೆ ಮತ್ತು ಕಾರ್ಕಳಗಳಿಂದ ಆಳಿದರು. ಆಗ ಕಳಸವೇ 'ಸಾವಿರದ ಸೀಮೆ' ಯಾಗಿತ್ತು.

ಈಗಿನ ಶಿವಮೊಗ್ಗ ಜಿಲ್ಲೆಗೆ ಸೇರಿದ ಸಾಗರ, ಸೊರಬ, ತೀರ್ಥಹಳ್ಳಿ ಮತ್ತು ಹೊಸನಗರ ತಾಲೂಕುಗಳ ವ್ಯಾಪ್ತಿಗೆ ಒಳಪಟ್ಟಿದ್ದ ಮತ್ತು ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲೂಕಿನ ಕಳಸದ ನೆರೆಹೊರೆ, ಕಿಗ್ಗದ ನೆರೆಹೊರೆಗೆ ಸೇರಿದ್ದ ಒಟ್ಟು ಪ್ರದೇಶ 'ಸಾಂತಳಿಗೆ ಸಾಯಿರ' ಎಂಬ ಹೆಸರಿನ ಒಂದು ಪುಟ್ಟ ರಾಜ್ಯವಾಗಿತ್ತು. ಇದಕ್ಕೆ ಸಾಂತಳಿಗೆ ಸಾಯಿರನಾಡು ಎಂಬ ಹೆಸರೂ ಇತ್ತು.[69]

ಸಾಂತರರು ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಕಳಕ್ಕೆ ತಮ್ಮ ರಾಜಧಾನಿಯನ್ನು ವರ್ಗಾಯಿಸಿದರೂ ಕೆಲವು ಕಾಲ ಕಳಸದ ಮೇಲೆ ಅವರ ಆಡಳಿತ ಇದ್ದೇ ಇತ್ತು. ಚಾಳುಕ್ಯರು, ರಾಷ್ಟ್ರಕೂಟರು, ಹೊಯ್ಸಳರು ಮತ್ತು ವಿಜಯನಗರದ ಅರಸರ ಅಧೀನದಲ್ಲಿ ಆಳಿದ ಇವರ ಮನೆತನ ಕೆಳದಿ ನಾಯಕರ ಕಾಲದಲ್ಲಿ ಹದಿನೇಳನೆಯ ಶತಮಾನದಲ್ಲಿ ಕೊನೆಗೊಂಡಿತು. ಇವರು ಜೈನ ಧರ್ಮಿಯರಾಗಿದ್ದರೂ ಹಿಂದು ಧರ್ಮದ ಪ್ರವರ್ತಕರಾಗಿ ಈ ಪ್ರದೇಶದ ಧರ್ಮ ಮತ್ತು ಸಂಸ್ಕೃತಿಯಲ್ಲಿ ಸಮನ್ವಯ ಸಾಧಿಸುವಲ್ಲಿ ಪ್ರಮುಖ ಪಾತ್ರವಹಿಸಿದರು. ಈ ಕಾರಣದಿಂದಾಗಿ ಧರ್ಮಸ್ಥಳದಂತಹ ಉಭಯ ಧರ್ಮ ಸಮನ್ವಯ ಕ್ಷೇತ್ರಗಳನ್ನು ಕಾಣಲು ಸಾಧ್ಯವಾಯಿತು. ಸಾಂತರರಂತೆಯೇ ಜೈನರಾಗಿದ್ದ ಕಡೂರಿನ ಸೇನವಾರ ಸಗರ ಮಣಲೆಯರಿಗೂ ಸಿಂಘ ಲಾಂಛನವಾಯಿತು.[70]

ವಾಸ್ತವವಾಗಿ ಸಾಂತರರು ಘಟ್ಟವನ್ನು ಬಿಟ್ಟು ಪೂರ್ತಿಯಾಗಿ ಕೆಳಕ್ಕೆ ಇಳಿದಿದ್ದು ವಿಜಯನಗರದ ಆಳ್ವಿಕೆ ಆರಂಭವಾದಾಗ ಕ್ರಿ.ಶ. 1432 ರಲ್ಲಿ ವೀರ ಪಾಂಡ್ಯ ಕಾರ್ಕಳದಲ್ಲಿ ಗೊಮ್ಮಟಮೂರ್ತಿಯನ್ನು ನಿಲ್ಲಿಸಿದ. ಕ್ರಿ.ಶ. 1516ರ ವೇಳೆಗೆ ಕಳಸ–ಕಾರ್ಕಳವೆಂಬ ಹೆಸರು ರೂಢಿಯಾಗಿತ್ತು.[71] ಕ್ರಿ.ಶ. 1530 ರಿಂದ ಕಾರಕಳ ಎಂಬ ಹೆಸರು ರೂಢಿಗೆ ಬಂತು ವಿಜಯನಗರದ ಕೃಷ್ಣದೇವರಾಯನು ತುಳುನಾಡನ್ನು ಆಕ್ರಮಿಸಿದಾಗ ಭೈರರಸನು ಓಡಿಹೋದ. ವಿಜಯನಗರ ಸೈನ್ಯ ಹಿಂತಿರುಗಿ ತಾನು ಮತ್ತೆ ನೆಮ್ಮದಿಯಿಂದ ನಾಡಿನೊಳಗೆ ಬರುವಂತೆ ಆದರಲ್ಲಿ ಕಳಸದ ದೇವಮಂದಿರವನ್ನು ಜೀರ್ಣೋದ್ಧಾರ ಮಾಡುವುದಾಗಿ ಹರಸಿಕೊಂಡಿದ್ದನಂತೆ ಅವನ ಹಾರೈಕೆಗೆ ಅನುಗುಣವಾಗಿ ಘಟನೆಗಳು ನಡೆದವು.[72] ಕ್ರಿ.ಶ. 1542 ರ ಅವಧಿಯಲ್ಲಿ ಇವರ ನೆಲೆವೀಡು ಕಾರ್ಕಳವನ್ನು ಬಿಟ್ಟು ಹತ್ತಿರದ 'ಕೆರೆವಸೆ' ಆಯಿತು.[73] ಭೈರರಸವೊಡೆಯನ ಕಡೆಯ ಶಾಸನ ಕ್ರಿ.ಶ. 1598ರ ಶಾಸನ.[74] ಅನಂತರ ಭೈರರಸವೊಡೆಯನ ತಮ್ಮ ವೀರಪಾಂಡ್ಯ ಕ್ರಿ.ಶ. 1603 ರಲ್ಲಿ ಯೇಣೂರಿನಲ್ಲಿ (ವೇಣೂರು) ಗೊಮ್ಮಟ ಪ್ರತಿಮೆ ಮಾಡಿಸಿದ.[75]

## ಕೆಳದಿ ನಾಯಕರು

ವಿಜಯನಗರದ ಸಾಮಂತರಾಗಿದ್ದ ಕೆಳದಿ ನಾಯಕರು ಹದಿನೇಳನೆಯ ಶತಮಾನದಲ್ಲಿ ಸ್ವತಂತ್ರರಾದರು. ಇವರು ವೀರಶೈವಧರ್ಮದ ನಿಷ್ಠಾವಂತ ಅನುಯಾಯಿಗಳಾಗಿದ್ದರು. ಈಗಿನ ಶಿವಮೊಗ್ಗ ಜಿಲ್ಲೆಯ ಕೆಳದಿ ತರುವಾಯ ಇಕ್ಕೇರಿ, ಬಿದನೂರುಗಳು ಇವರ ರಾಜಧಾನಿಗಳಾದವು. ಈ ಮನೆತನದ ವೆಂಕಟಪ್ಪನಾಯಕ 'ಶೃಂಗೇರಿ ಮಠದ ಪುನರ್‌ಸ್ಥಾಪಕ' ನೆಂದು ಬಿರುದು ಪಡೆದವನು. ರಾಣಿ ವೀರಮ್ಮಾಜಿ ಕೂಡ ಶೃಂಗೇರಿ ಮಠಕ್ಕೆ ವಿಶೇಷ ಸಹಾಯ ಮಾಡಿದಳು. ಈ ಕಾಲದಲ್ಲಿ ವೀರಶೈವ ಧರ್ಮ ಜನಪ್ರಿಯವಾಯಿತು.[76]

ಬಯಲು ನಾಡಿನಲ್ಲಿ ಜನಸಾಮಾನ್ಯರು ವೀರಶೈವ ಧರ್ಮದ ಅನುಯಾಯಿಗಳಾದರು.ಈ ಮನೆತನದ ರಾಣಿ ಚೆನ್ನಮ್ಮಾಜಿಯು ಕೆಳದಿ ಪ್ರದೇಶವನ್ನು ಆಳುತ್ತಿದ್ದಳು.[77] ಇವಲ್ಲದೆ ಶಾಸನಗಳಲ್ಲಿ ಲಿಂಗಮ್ಮಾಜಿಯ ಪುತ್ರಿ ಸಿದ್ದಮ್ಮಾಜಿ, ರಾಣಿ ಚೆನ್ನಮ್ಮ ಮುಂತಾದವರ ಉಲ್ಲೇಖಗಳಿವೆ.[78] ಕೊನೆಯ ರಾಣಿ ಬಲ್ಲಾಳರಾಯನದುರ್ಗದಲ್ಲಿ ಆಶ್ರಯ ಪಡೆದಿದ್ದಳು. ಕೊನೆಗೆ ಹೈದರ್ ಆಲಿಯ ಸೈನ್ಯ ಈಕೆಯನ್ನು ಸೆರೆಹಿಡಿಯಿತು. ನಿರ್ವಾಣಸ್ವಾಮಿ ಮಠ, ಕಲ್ಲುಮರಡಿ ಮಠ, ರಂಭಾಪುರಿ ಮಠ, ಹುಲಿಗೆರೆ ಮಠ ಮೊದಲಾದವು ಕೆಳದಿ ನಾಯಕರಿಂದ ಹೆಚ್ಚಿನ ಪ್ರೋತ್ಸಾಹ ಪಡೆದವು.

## ಕಾರ್ಕಳ ಪ್ರಭುಗಳು

ಇವರು ಮೂಡಗೆರೆಯ ಕಳಸವನ್ನು ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡು ಆಳಿದರು. ಭದ್ರಾನದಿಯ ದಡದಲ್ಲಿ ಪಂಚತೀರ್ಥಗಳಿವೆ. ಅವುಗಳೆಂದರೆ ಕೋಟಿತೀರ್ಥ, ರುದ್ರತೀರ್ಥ, ಅಂಬುತೀರ್ಥ, ನಾಗತೀರ್ಥ ಮತ್ತು ವಶಿಷ್ಟತೀರ್ಥ. ಚಿಕ್ಕಮಗಳೂರು ತಾಲೂಕಿನ ಖಾಂಡ್ಯ ನರಸಿಂಹರಾಜಪುರ ತಾಲ್ಲೂಕಿನ ಹೆಬ್ಬೆ ತರೀಕೆರೆ ತಾಲೂಕಿನ ಸೋಮಪುರ, ಶಿವಮೊಗ್ಗ ಜಿಲ್ಲೆಯ ಕೊಡ್ಲಿ ಇವುಗಳು ಪಂಚಕ್ಷೇತ್ರಗಳೆಂದು ಹೆಸರಾಗಿವೆ. ಕಳಸ ಸಾವಿರ ಸೀಮೆಯ ಇತಿಹಾಸವನ್ನು ತಿಳಿಸುವ ಸುಮಾರು 53 ಶಾಸನಗಳು ಇದುವರೆವಿಗೂ ಕಂಡುಬಂದಿವೆ. ಇವರು ಚಿಕ್ಕಮಗಳೂರು ಜಿಲ್ಲೆಯ ಪಶ್ಚಿಮ ಭಾಗದಲ್ಲಿ ಚಿಕ್ಕರಾಜ್ಯವನ್ನು ಸ್ಥಾಪಿಸಿ ಕ್ರಿ.ಶ. 1246 ರಿಂದ ಕ್ರಿ.ಶ. 1598ರವರೆಗೆ ಆಡಳಿತ ನಡೆಸಿದರು. ಇವರು ಕಳಸ– ಕಾರ್ಕಳ ಮಾಂಡಲೀಕ ಮನೆತನಕ್ಕೆ ಸೇರಿದವರು.[79]

ಈ ಮನೆತನಕ್ಕೆ ಸೇರಿದ ಮೊದಲ ರಾಜನೆಂದರೆ ವೀರಬಲ್ಲದೇವ.[80] ಇವನ ಅನಂತರ ಮಲ್ಲದೇವ ಮತ್ತು ಮಾರುದೇವ.[81] ಎಂಬುವವರು ಆಡಳಿತ ನಡೆಸಿದರು. ಮಾರುದೇವನ

ಅನಂತರ ಅವನ ರಾಣಿ ಜಾಕಲಮಹಾದೇವಿಯು ಕ್ರಿ.ಶ. 1246–47 ರಲ್ಲಿ ಅಧಿಕಾರಕ್ಕೆ ಬಂದಳು.[82] ಕ್ರಿ.ಶ. 1246–47ರ ಶಾಸನದಲ್ಲಿ ರಾಣಿ ಜಾಕಲಮಹಾದೇವಿಯು ರಾಣಿಯಾಗಿ ರಾಜ್ಯಭಾರ ಮಾಡುತ್ತಿದ್ದಾಗ ಕಳಸದ ಪ್ರಧಾನ ದೇವತೆಯಾದ ಕಳಸೇಶ್ವರನಿಗೆ ದಾನ ಕೊಟ್ಟ ಉಲ್ಲೇಖವನ್ನು ತಿಳಿಸುತ್ತದೆ.[83]

ಈಕೆಯನ್ನು ಕ್ರಿ.ಶ. 1277ರ ಶಾಸನದಲ್ಲಿ ಪಟ್ಟದ ಪಿರಿಯರಸಿ ಎಂದು ಉಲ್ಲೇಖಿಸಲಾಗಿದೆ.[84] ಇವಳ ಕಾಲದ ಶಾಸನಗಳನ್ನು ಗಮನಿಸಿದಾಗ ಈಕೆಯು ಕಳಸ–ಕಾರ್ಕಳ ರಾಜ್ಯವನ್ನು ಕ್ರಿ.ಶ. 1270 ರಿಂದ ಕ್ರಿ.ಶ. 1281ರವರೆಗೆ ಆಳುತ್ತಿದ್ದಳೆಂದು ತಿಳಿದುಬರುತ್ತದೆ.[85] ಇವಳ ಅನಂತರ ಬಾಲದೇವ ಅಥವಾ ಬಲ್ಲಹದೇವನು ಆಡಳಿತ ನಡೆಸಿದನು.[86] ಇವನ ಅನಂತರ ವೀರಪಾಂಡ್ಯದೇವನು ಆಡಳಿತ ನಡೆಸಿದನು. ಇವನೇ ಕಳಸ–ಕಾರ್ಕಳ ವಂಶದ ಕೊನೆಯ ದೊರೆಯಾದನು. ಇವನ ಕಾಲಕ್ಕೆ ಇವರ ರಾಜಕೀಯದ ಮೊದಲ ಹಂತವು ಮುಗಿಯುತ್ತದೆ. ಅನಂತರದಲ್ಲಿ ವಿಜಯನಗರ ಸಾಮ್ರಾಜ್ಯ ದೊರೆಗಳ ಸಾಮಂತರಾಜರುಗಳಾಗಿ ಕಾಣಿಸಿಕೊಳ್ಳುತ್ತಾರೆ. ಈ ವೇಳೆಯಲ್ಲಿ ಭೈರರಸ ಒಡೆಯನು ಮೊದಲ ದೊರೆಯಾಗಿ ಆಡಳಿತ ನಡೆಸಿದ್ದನು.[87]

ಅನಂತರ ವೀರಪಾಂಡ್ಯದೇವರಸ[88] ಅನಂತರ ಇಮ್ಮಡಿ ಭೈರರಸ ಒಡೆಯ[89] ಅನಂತರ ಮದುವರಸನಾಯಕ[90] ವೀರಪಾಂಡ್ಯ ಒಡೆಯ[91] ಮೂರನೆಯ ಭೈರರಸ ಒಡೆಯ[92] ಮುಂತಾದ ರಾಜರು ವಿಜಯನಗರ ಸಾಮಂತರಾಗಿ ಆಡಳಿತ ನಡೆಸಿದರು.

## ತರೀಕೆರೆ ಪಾಳೆಯಗಾರರು

ಇವರು ಪುವ್ವಲಿ ಕುಲದವರು. ಕೆಂಗಪ್ಪನೆಂಬಾತ ಈ ಕುಲದ ಮೂಲಪುರುಷನೆಂದು ತಿಳಿಯಲಾಗಿದೆ. ಶಿವಮೊಗ್ಗ ಜಿಲ್ಲೆಯ ಸಂತೆಬೆನ್ನೂರು ಇವರ ಮೂಲ ಸ್ಥಾನವಾಗಿತ್ತು. ಇವರು ವಿಜಯನಗರದ ಸಾಮಂತರಾಗಿ ಶಿವಮೊಗ್ಗ ಜಿಲ್ಲೆ ಚನ್ನಗಿರಿ ತಾಲೂಕಿನ ಬಸವಾಪಟ್ಟಣದಲ್ಲಿ ಪಾಳೆಯಪಟ್ಟನ್ನು ಕಟ್ಟಿದರು. ತರುವಾಯ ತರೀಕೆರೆಗೆ ತಮ್ಮ ರಾಜಧಾನಿಯನ್ನು ಬದಲಾಯಿಸಿದರು. ಕ್ರಿ.ಶ. 1636 ರಿಂದಲೂ ತರೀಕೆರೆ ತಾಲೂಕು ಪಾಳೆಗಾರರ ಅಧಿನದಲ್ಲಿತ್ತು. ಇವರ ಆಡಳಿತ ಚಿತ್ರದುರ್ಗ ಜಿಲ್ಲೆಯ ಹರಿಹರದಿಂದ ಚಿಕ್ಕಮಗಳೂರು ಜಿಲ್ಲೆ ತರೀಕೆರೆಯವರೆಗೆ ವಿಸ್ತರಿಸಿತ್ತು.[93]

ಶಾಸನಗಳ ಪ್ರಕಾರ ಕೆಂಗಪ್ಪನ ಅನಂತರ ಹಿರಿಯ ಹನುಮಪ್ಪನಾಯಕ, ಇಮ್ಮಡಿ ಹನುಮಪ್ಪನಾಯಕ, ನಿಚ್ಚ ಮದುವಣಿಗ ಹನುಮಪ್ಪನಾಯಕ, ಸರ್ಜಾ ಹನುಮಪ್ಪ ಮತ್ತು

ಸೀತಾರಾಮಪ್ಪ ನಾಯಕ ಕ್ರಮವಾಗಿ ಆಳಿದರು. ಕೆಂಗಪ್ಪನಾಯಕನಿಂದ ಸರ್ಜಾ ಹನುಮಪ್ಪ ನಾಯಕನವರೆಗೆಹತ್ತು ಜನ ಪಾಳೆಯಗಾರರು ಆಡಳಿತ ನಡೆಸಿದರೆಂದು ಅವರ ವಂಶವೃಕ್ಷದಿಂದ ತಿಳಿಯಬಹುದು. ಹನುಮಪ್ಪನಾಯಕನ ಸಹೋದರ ಬಲಗಿರಿನಾಯಕ ಪೆನುಗೊಂಡೆಯ ವಿಜಯನಗರದ ದೊರೆ ವೀರ ವೆಂಕಟಪತಿ ದೇವನ ಬಲಗೈ ಬಂಟನಾಗಿದ್ದ.[94]

ಹೈದರ್‌ಆಲಿಯು ಈ ಮನೆತನವನ್ನು ಕೊನೆಗಾಣಿಸಿದ. ಆದರೆ ಕ್ರಿ.ಶ. 1799ರವರೆಗೂ ಈ ಮನೆತನ ಅತ್ಯಂತ ಪ್ರಭಾವಿಯಾಗಿತ್ತು. ಹೈದರನ್ನು ಇವರಿಗೆ ಮಂಜರಾಬಾದು ಪ್ರದೇಶವನ್ನು ಜಹಗೀರಿಯಾಗಿ ಕೊಟ್ಟಿದ್ದ ಬ್ರಿಟಿಷರ ದಂಡು ಶ್ರೀರಂಗಪಟ್ಟಣದಲ್ಲಿ ಬೀಡುಬಿಟ್ಟಿದ್ದನ್ನು ಪ್ರತಿಭಟಿಸಿ ಈ ವಂಶದ ರಂಗಪ್ಪನಾಯಕ ಮತ್ತು ಅವನ ಮಗ ಸರ್ಜಾ ಹನುಮಪ್ಪನಾಯಕ ಕ್ರಿ.ಶ. 1830ರ ನಗರ ದಂಗೆಯಲ್ಲಿ ಪಾಲ್ಗೊಂಡರು. ಈ ದಂಗೆ ರಂಗನಾಯಕನ ಅಡಾವುಡಿ ಎಂದು ಹೆಸರಾಯಿತು, ಬ್ರಿಟಿಷರು ಈ ದಂಗೆಯನ್ನು ಅಡಗಿಸಿ ಹನುಮಪ್ಪನಾಯಕನನ್ನು ಸೆರೆಹಿಡಿದು ಬೆಂಗಳೂರಿನಲ್ಲಿ ಗಲ್ಲಿಗೇರಿಸಿದರು. ಆಗ ರಂಗಪ್ಪನಾಯಕ ಶತ್ರುಗಳೊಂದಿಗೆ ಹೋರಾಡುತ್ತ ಮಡಿದ ಇದರ ಫಲವಾಗಿ ಮೈಸೂರು ಒಡೆಯರು ಅಧಿಕಾರ ಕಳೆದುಕೊಳ್ಳಬೇಕಾಯಿತು.

## ಐಗೂರು ಪಾಳೆಯಗಾರರು

ಐಗೂರು ಪಾಳೆಯಪಟ್ಟು ವಿಜಯನಗರದ ಆಶ್ರಯದಲ್ಲಿ ಅಸ್ತಿತ್ವಕ್ಕೆ ಬಂದಿತು. ಇದಕ್ಕೆ ಬಲಮ್ ರಾಜ್ಯ ಎಂದೂ ಹೆಸರಿತ್ತು ಹಾಸನ ಜಿಲ್ಲೆಯ ಸಕಲೇಶಪುರ ತಾಲೂಕಿನ ಐಗೂರು ಇವರ ರಾಜಧಾನಿಯಾಗಿತ್ತು. ಈ ಪಾಳೆಯಪಟ್ಟಿಗೆ ಈ ಜಿಲ್ಲೆಯ ಮಲೆನಾಡಿನ ಬಹುಭಾಗ ಸೇರಿತ್ತು. ಕೆಳದಿ ನಾಯಕರೊಂದಿಗೆ ಸೆಣಸುತ್ತ ತನ್ನ ಪ್ರಭಾವ ಉಳಿಸಿಕೊಂಡಿದ್ದ ಈ ರಾಜ್ಯ ಮೈಸೂರು ರಾಜ್ಯದ ವಿಸ್ತರಣೆಯಿಂದ ಬಹಳಷ್ಟು ಕುಗ್ಗಿತ್ತು ಆದರೆ ಕೊನೆಯವರೆಗೂ ಮೂಡಗೆರೆ ತಾಲೂಕು ಇದರ ಭಾಗವಾಗಿತ್ತು. ಕಳಸದ ದೇವಾಲಯಗಳಿಗೆ ಈ ರಾಜರು ಪ್ರೋತ್ಸಾಹ ನೀಡಿದರು.

ಹೈದರ್‌ಆಲಿ ಮತ್ತು ಟಿಪ್ಪುಸುಲ್ತಾನನ ಕಾಲದಲ್ಲಿ ಅವರ ವಿರುದ್ಧ ಹೊರಾಡಿ ಮುತ್ಸದ್ಧಿತನದಿಂದ ಉಳಿದುಬಂದಿದ್ದ ಈ ಮನೆತನ ಬ್ರಿಟಿಷರ ವಿರುದ್ಧವೂ ಹೋರಾಡಿತು. ಕೊನೆಗೆ ಕ್ರಿ.ಶ. 1802 ರಲ್ಲಿ ಈ ಮನೆತನದ ಕೊನೆಯ ನಾಯಕನನ್ನು ಮೂಡಗೆರೆ ತಾಲೂಕಿನ ಬಗ್ಗೇಹಳ್ಳಿಯಲ್ಲಿ ಸೆರೆಹಿಡಿದು ಗಲ್ಲಿಗೇರಿಸಲಾಯಿತು.

**ಸೇನವಾರರು**

ಚಿಕ್ಕಮಗಳೂರು ಮತ್ತು ಕೊಪ್ಪ ತಾಲೂಕುಗಳ ಒಂದು ಸಣ್ಣ ಪ್ರದೇಶದಲ್ಲಿ ಕ್ರಿ.ಶ. 690 ರಿಂದ ಕ್ರಿ.ಶ. 1060ರವರೆಗೂ ಈ ಪ್ರಾಂತ್ಯದಲ್ಲಿ ಆಡಳಿತ ನಡೆಸಿದರು.[95] ಇವರು ಚಾಳುಕ್ಯರ ಕಾಲದ ಸಮಕಾಲೀನರಾಗಿದ್ದರು. ಸೇನವಾರರ ದೊರೆ ಸೇನವರಸ ಎಂಬುವವನು ಮೊದಲಿಗೆ ಆಡಳಿತ ನಡೆಸಿದನು ಹಾಗೂ ಈ ಸಂತತಿಯ ಮತ್ತೊಬ್ಬ ದೊರೆ ಜೀಮೂತ ಸೇನವಾರನು ಆಡಳಿತ ನಡೆಸಿದನು. ಇವನನ್ನು 'ಕಚ್ಚರ ವಂಶದ ಸೂರ್ಯ' ಮತ್ತು ಕೂಡಲೂರ ಪುರಾಧೀಶ್ವರ' ಎಂದು ಕರೆಯಲಾಗಿದೆ.[96] ಈ ಹೆಸರಿನ ಅವರ ರಾಜಧಾನಿ (ಮೂಲಸ್ಥಾನ) ಯಾವುದೆಂದು ಊಹಿಸುವುದು ಕಷ್ಟ. ಇವನ ಅನಂತರ ಮಾರಸಿಂಗ ಸೇನವಾರನು ಆಡಳಿತ ನಡೆಸಿದನು. ಈತನನ್ನು ಪದ್ಮಾವತಿಯ ಪಾದಕಮಲದ ದುಂಬಿ ಎಂದು ಕರೆಯಲಾಗಿದೆ. [97]

ಆದುದರಿಂದ ಇವರ ರಾಜಧಾನಿಯು ವಸ್ತಾರೆಯ ಹತ್ತಿರವಿರುವ ತೂದವಳ್ಳಿಯಾಗಿರಬಹುದು. ಏಕೆಂದರೆ ವಸ್ತಾರೆಯಲ್ಲಿ ಅಂದಿನ ಕಾಲದಲ್ಲಿ ನಿರ್ಮಾಣವಾದ ಪದ್ಮಾವತಿದೇವಿ ದೇವಾಲಯವಿದೆ. ಈ ಸೇನಾವಾರರು ಪದ್ಮಾವತಿಯನ್ನು ಸ್ತುತಿಸುತ್ತಿರುವುದರಿಂದ ಈ ಗ್ರಾಮವೇ ಆಗಿರಬಹುದು. ಅನಂತರದಲ್ಲಿ ಇವರ ಆಡಳಿತ ಇಂದಿನ ಕಡೂರಿನ ಪ್ರಾಂತ್ಯಕ್ಕೆ ವ್ಯಾಪಿಸಿರಬಹುದು. ಜೈನರಾಗಿದ್ದ ಕಡೂರಿನ ಸೇನವಾರರಿಗೂ ಮತ್ತು ಸಗರ ಮಣಲೆಯರಿಗೂ ಸಿಂಘ ಲಾಂಛನವಿತ್ತು.[98] ವಿದ್ಯಾಧರರೆನಿಸಿದ ಶಿಲಾಹಾರರಿಗೂ ಇವರಿಗೂ ಚಾರಿತ್ರಿಕ ಸಂಬಂಧವಿದ್ದಂತೆ ತೋರುತ್ತದೆ ಮತ್ತು ಪಶ್ಚಿಮ ಚಾಳುಕ್ಯ ಅರಸನಾದ 6ನೆಯ ವಿಕ್ರಮಾದಿತ್ಯನ ಆಸ್ಥಾನದಲ್ಲಿ ಸೇನವಾರರು ಸಚಿವರಾಗಿದ್ದರು. ಇವರು ಸಹ ಜೈನರಾಗಿದ್ದರು. [99]

ಚಾಳುಕ್ಯ ವಿಜಯಾದಿತ್ಯ ಸತ್ಯಾಶ್ರಯನ ಮಾಂಡಲೀಕನಾಗಿದ್ದ ರಾಜನೆಂದರೆ ಪೃಥ್ವೀವಲ್ಲಭ ಸೇನವಾರ ಎಂಬುವವನು.[100] ಶಾಸನಗಳಿಂದ ದೊರೆಯುವ ಮಾಹಿತಿಯಿಂದ ಇವರ ಮೂರು ತಲೆಮಾರನ್ನು ಗುರುತಿಸಬಹುದು. ಜೀಮೂತವಾಹನ ಖಚರಕಂದರ್ಪ ಮತ್ತು ಗುಂಡಕಂದರ್ಪ ಎಂದು ಚಿಕ್ಕಮಗಳೂರಿನ ಶಾಸನದಲ್ಲಿ ಜೀವಿತೇಶ್ವರನು ಮಾರಸಿಂಹನ ಅಜ್ಜ ಎಂದು ಹೇಳಿದ.[101]

ಆದರೆ ಅವನ ತಂದೆ ಯಾರೆಂದು ಇಲ್ಲಿ ಹೇಳಿಲ್ಲ. ಈ ಜೀವಿತೇಶ್ವರರು ಒಬ್ಬ ವೈರಿಯಿಂದ ಕೊಲ್ಲಲ್ಪಟ್ಟ ಆದರೆ ಮಾರಸಿಂಹನ ತಂದೆಗೆ ಆ ವೈರಿಯನ್ನು ಶಿಕ್ಷಿಸಲಾಗಲಿಲ್ಲ. ಆದುದರಿಂದ ಮಾರಸಿಂಹನೇ ಆ ಶತ್ರುವನ್ನು ಕೊಂದನು. ಇಲ್ಲಿಯ ಶಾಸನಗಳನ್ನು ಗಮನಿಸಿದಾಗ ಜೀಮೂತವಾಹನನು ಜೀವಿತೇಶ್ವರನ ಮಗನೆಂದೂ ಮಾರಸಿಂಹನು ಜೀಮೂತವಾಹನನ

ಮಗನೆಂದೂ ತಿಳಿಯಬಹುದು. ಇವರು ಆಡಳಿತದಷ್ಟೇ ಮಹತ್ವವನ್ನು ಸಂಸ್ಕೃತಿ ವಿಚಾರಕ್ಕೂ ನೀಡಿದರು. ಇವರ ಕಾಲದಲ್ಲಿ ಜಿಲ್ಲೆಯಲ್ಲಿ ಹಲವಾರು ದೇವಾಲಯಗಳನ್ನು ಕಟ್ಟಿಸಿದರು. ಈ ಜೀವಿತೇಶ್ವರನು ಕ್ರಿ.ಶ. 1020 ರಲ್ಲಿ ಆಡಳಿತವನ್ನು ನಡೆಸುತ್ತಿದ್ದನು.[102]

ಕಲ್ಯಾಣ ಚಾಲುಕ್ಯರು ಈ ಜಿಲ್ಲೆಯಲ್ಲಿ ಆಡಳಿತ ನಡೆಸಿರಬಹುದು. ಇವರಿಗೆ ಸಂಬಂಧಿಸಿದ ಸುಮಾರು 20 ಶಾಸನಗಳು ಇಲ್ಲಿ ದೊರೆತಿವೆ. ಕಲ್ಯಾಣಿ ಚಾಳುಕ್ಯ ದೊರೆ ಇರಿವಬೆಡಂಗ.[103] ಮತ್ತು ವಿಕ್ರಮಾದಿತ್ಯನ ಶಾಸನಗಳಿವೆ.[104] ತನ್ನನ್ನು ಏಳುವರೆ ಲಕ್ಷ ದೇಶಗಳನ್ನು ಆಳುತ್ತಿರುವ 'ಭೂವಲ್ಲಭ ಪೆರ್ಮಾಡಿರಾಯ, ತ್ರಿಭುವನಮಲ್ಲ ಪೆರ್ಮಾಡಿರಾಯ, ಪೆರ್ಮಾಡಿಯ ಎಂದು ಶಾಸನಗಳಲ್ಲಿ ಉಲ್ಲೇಖಿಸಿದೆ. [105] ಸೇನವರರು ಜೈನರಾಗಿದ್ದರೆಂದು ಕೆಲವರ ಅಭಿಪ್ರಾಯ ಆದರೆ ಇವರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳಲ್ಲಿ ಹೆಚ್ಚಿನವು ಶಿವ ದೇವಾಲಯಗಳು.

## ಮೈಸೂರು ಒಡೆಯರು

ಬಿದನೂರು ಶಿವಪ್ಪನಾಯಕನ ಮರಣಾನಂತರ ಮೈಸೂರು ಒಡೆಯರು ಬಿದನೂರು ರಾಜ್ಯವನ್ನು ಆಕ್ರಮಿಸಿಕೊಳ್ಳಲು ಪ್ರಯತ್ನಿಸುತ್ತಲೇ ಇದ್ದರು. ಮೊಗಲರು ದಕ್ಷಿಣ ಭಾರತದತ್ತ ದಂಡೆತ್ತಿ ಬಂದ ಸಂದರ್ಭವನ್ನು ಬಳಸಿಕೊಂಡ ಒಡೆಯರು ಅವರ ಸಖ್ಯ ಬೆಳೆಸಿ ತಮ್ಮ ರಾಜ್ಯದ ವಿಸ್ತರಣೆಯಲ್ಲಿ ತೊಡಗಿದರು. ಕ್ರಿ.ಶ. 1690ರ ಹೊತ್ತಿಗೆ ಈ ಜಿಲ್ಲೆಯ ಬಹು ಭಾಗಗಳು ಅವರ ಕೈ ವಶವಾದವು. ಬಿದನೂರು ನಾಯಕರು ಮತ್ತು ಮೈಸೂರು ಒಡೆಯರ ನಡುವೆ ಆದ ಒಪ್ಪಂದದಂತೆ ಕ್ರಿ.ಶ. 1694 ಚಿಕ್ಕಮಗಳೂರಿನವರೆಗೂ ಮೈಸೂರು ರಾಜ್ಯ ವಿಸ್ತರಿಸಿತು.[106]

ಹೈದರ್‌ಆಲಿಯು ಕ್ರಿ.ಶ.1763ರಲ್ಲಿ ಬಿದನೂರು ರಾಜ್ಯವನ್ನು ಸಂಪೂರ್ಣವಾಗಿ ವಶಪಡಿಸಿಕೊಂಡ. ಆಗ ಈ ಜಿಲ್ಲೆಯನ್ನು ನಗರ ಫೌಜುದಾರಿಗೆ ಸೇರಿಸಲಾಗಿದೆ. ಶೃಂಗೇರಿ ಮಠಕ್ಕೆ ಮೈಸೂರು ಒಡೆಯರು ಹೈದರ್‌ಆಲಿ ಮತ್ತು ಟಿಪ್ಪುಸುಲ್ತಾನರು ಅವಿರತವಾಗಿ ಪ್ರೋತ್ಸಾಹ ನೀಡಿದ್ದು ಸ್ಮರಣೀಯ ಸಂಗತಿ.ಮೈಸೂರು ಒಡೆಯರು ಪುನಃ ಕ್ರಿ.ಶ. 1799ರಲ್ಲಿ ಅಧಿಕಾರಕ್ಕೆ ಬಂದಾಗ ಒಡೆಯರಿಗೆ ಒಪ್ಪಿಸಿದ ರಾಜ್ಯದಲ್ಲಿ ಈ ಜಿಲ್ಲೆಯು ಸೇರಿಕೊಂಡಿತ್ತು ಮತ್ತು ಕಮೀಷನರ ಆಡಳಿತ ಕಾಲದಲ್ಲಿ ಈ ಜಿಲ್ಲೆಯ ಭಾಗಗಳು ನಗರ ವಿಭಾಗಕ್ಕೆ ಸೇರಿಕೊಂಡವು.[107]

ಕ್ರಿ.ಶ. 1863ರಲ್ಲಿ ಕಡೂರು ಜಿಲ್ಲೆಯನ್ನು ರಚಿಸಿ ಕಡೂರನ್ನು ಜಿಲ್ಲೆ ಕೇಂದ್ರವಾಗಿ ಮಾಡಲಾಯಿತು. ಆದರೆ ಆಗಿನ ಪ್ರದೇಶ ವ್ಯಾಪ್ತಿ ಸೀಮಿತವಾಗಿತ್ತು.[108] ಕ್ರಿ.ಶ.1865ರಲ್ಲಿ

ಚಿಕ್ಕಮಗಳೂರನ್ನು ಜಿಲ್ಲಾ ಕೇಂದ್ರವನ್ನಾಗಿ ಮಾಡಲಾಯಿತು. ಆಗ ಬೇಲೂರು ತಾಲೂಕು ಒಳಗೊಂಡಂತೆ ಹಾಸನ ಜಿಲ್ಲೆಯ ಕೆಲವು ಭಾಗಗಳು ಈ ಜಿಲ್ಲೆಗೆ ಸೇರಿದ್ದವು. ಕ್ರಿ.ಶ. 1886ರಲ್ಲಿ ಹಾಸನ ಜಿಲ್ಲೆ ಅಸ್ತಿತ್ವಕ್ಕೆ ಬಂದಾಗ ಚಿಕ್ಕಮಗಳೂರು ಜಿಲ್ಲೆ ಈಗಿನ ಸ್ವರೂಪ ಪಡೆಯಿತು ಮತ್ತು ಕ್ರಿ.ಶ. 1947ರವರೆಗೂ ಈ ಜಿಲ್ಲೆಯನ್ನು ಕಡೂರು ಜಿಲ್ಲೆಯೆಂದು ಕರೆಯಲಾಗುತ್ತಿತ್ತು. ತರುವಾಯ ಚಿಕ್ಕಮಗಳೂರು ಜಿಲ್ಲೆಯಾಯಿತು.[109] ಈ ಜಿಲ್ಲೆಯು ಕರ್ನಾಟಕ ಇತಿಹಾಸ ಪರಂಪರೆಯಲ್ಲಿ ಕ್ರಿಯಾಶೀಲ ಪಾತ್ರವಹಿಸಿತ್ತೆಂಬುದನ್ನು ಸೂಚಿಸುತ್ತದೆ.[110]

## ಅಡಿ ಟಿಪ್ಪಣಿಗಳು

1. ಎ.ಕ.ಸಂ–7, ಶಿಕಾರಿಪುರ–176, ಬಿ.ಎಲ್.ರೈಸ್ ಮತ್ತು ಎ.ಇಂ.ಸಂ–8. ಎಫ್.ಕೀಲ್ಹಾರ್ನ್
2. ದಿವಾಕರ. ಆರ್.ಆರ್–ಕರ್ನಾಟಕದ ಪರಂಪರೆ, ಸಂ–1, ಪು.132
3. ಎ.ಕ.ಸಂ–12, ಶಾಸನ ಸಂಖ್ಯೆ–141, ಪು.150
4. ಅದೇ
5. ಅದೇ
6. ಗೋಪಾಲ್.ಬಿ.ಆರ್–ಕಾರ್ಪಸ್ ಆಫ್ ಕದಂಬ ಇನ್ಸ್ಕ್ರಿಪ್ಷನ್, ಸಂ–1, ಪು.69
7. ದಿವಾಕರ. ಆರ್.ಆರ್–ಕರ್ನಾಟಕದ ಪರಂಪರೆ, ಸಂ–1, ಪು.137
8. ಎ.ಕ.ಸಂ–12, ಶಾಸನ ಸಂಖ್ಯೆ–41, ಪು.372
9. ಎ.ಕ.ಸಂ–12, ಪೀಠಿಕೆ, ಪು.45
10. ಎ.ಕ.ಸಂ–12, ಶಾಸನ ಸಂಖ್ಯೆ–4, ಪು.338
11. ಅದೇ
12. ಎ.ಕ.ಸಂ–12, ಶಾಸನ ಸಂಖ್ಯೆ–41, ಪು.302–306
13. ಎ.ಕ.ಸಂ–12, ಶಾಸನ ಸಂಖ್ಯೆ–23, ಪು.30–31
14. ಎ.ಕ.ಸಂ–11, ಶಾಸನ ಸಂಖ್ಯೆ–41, ಪು.302
15. ಎ.ಕ.ಸಂ–12, ಶಾಸನ ಸಂಖ್ಯೆ–4, ಪು.338
16. ಎ.ಕ.ಸಂ–12, ಶಾಸನ ಸಂಖ್ಯೆ–76, ಪು.100–01
17. ಎ.ಕ.ಸಂ–11, ಶಾಸನ ಸಂಖ್ಯೆ–18, ಪು.12
18. ಎ.ಕ.ಸಂ–11, ಶಾಸನ ಸಂಖ್ಯೆ–102, ಪು.62
19. ಕೃಷ್ಣಸ್ವಾಮಿ ಅಯ್ಯಂಗಾರ್, ಬಿ.ಎನ್–ಆರಿಜನ್ ಆಫ್ ದಿ ಹೊಯ್ಸಳಾಸ್ ಇನ್ ಹೊಯ್ಸಳ ಡೈನಾಸ್ಟಿ, ಪು.38–55
20. ಎ.ಕ.ಸಂ–11, ಶಾಸನ ಸಂಖ್ಯೆ–14,15,16,73, ಪು.10–11,42
21. ಎ.ಕ.ಸಂ–11, ಶಾಸನ ಸಂಖ್ಯೆ–15, ಪು.11
22. ಎ.ಕ.ಸಂ–11, ಶಾಸನ ಸಂಖ್ಯೆ–16, ಪು.11
23. ವಿಲಿಯಂ ಕೋಹಿಲೋ–ಹೊಯ್ಸಳ ವಂಶ. ಪು.257
24. ಎ.ಕ.ಸಂ–12, ಶಾಸನ ಸಂಖ್ಯೆ, ಕ–14,16,28,66,74,106,252 ತರಿ–1,3,9,7

25. ಎ.ಕ.ಸಂ–12, ಶಾಸನ ಸಂಖ್ಯೆ–28, ಪು.45

26. ಎ.ಕ.ಸಂ–12, ಶಾಸನ ಸಂಖ್ಯೆ, ಕ.–14,16,28,66,74,106,252 ತರಿ–1,3,9,7

27. ಹಳೆಕೋಟೆ ರಮೇಶ–ಮೂಡಿಗೆರೆ ತಾಲ್ಲೂಕು ದರ್ಶನ, ಪು.10

28. ವಿಲಿಯಂ ಕೋಹಿಲೋ–ಹೊಯ್ಸಳ ವಂಶ, ಪು.258

29. ಪಾರ್ಥಸಾರಥಿ– ಚಿಕ್ಕಮಗಳೂರು ಜಿಲ್ಲಾದರ್ಶನ, ಪು.30

30. ಅದೇ, ಪು.30

31. ಎ.ಕ.ಸಂ–11, ಶಾಸನ ಸಂಖ್ಯೆ–163, ಪು.101

32. ವಿಲಿಯಂ ಕೋಹಿಲೋ–ದ ಹೊಯ್ಸಳ ವಂಶ, ಪು.259

33. ಎಂ.ಎ.ಆರ್–1937, ಪು.31

34. ಎ.ಕ.ಸಂ–11, ಶಾಸನ ಸಂಖ್ಯೆ–210, ಪು.131–36

35. ಎ.ಕ.ಸಂ–7, ನಾಗಮಂಗಲ–72, ಪು.53–60

36. ಎ.ಕ.ಸಂ–11, ಶಾಸನ ಸಂಖ್ಯೆ–169, ಪು.104

37. ಎ.ಕ.ಸಂ–11, ಶಾಸನ ಸಂಖ್ಯೆ–29, ಪು.168–69

38. ವಿಲಿಯಂ ಕೋಹಿಲೋ–ದ ಹೊಯ್ಸಳ ವಂಶ, ಪು.85

39. ಎ.ಕ.ಸಂ–11, ಶಾಸನ ಸಂಖ್ಯೆ–170, ಪು.104

40. ಎ.ಕ.ಸಂ–11, ಶಾಸನ ಸಂಖ್ಯೆ–168 ಪು.103

41. ಎ.ಕ.ಸಂ–11, ಶಾಸನ ಸಂಖ್ಯೆ–220, ಪು.149

42. ಎ.ಕ.ಸಂ–11, ಶಾಸನ ಸಂಖ್ಯೆ–125 ಪು.78–79

43. ಎ.ಕ.ಸಂ–11, ಶಾಸನ ಸಂಖ್ಯೆ–163, ಪು.101

44. ಎ.ಕ.ಸಂ–11, ಶಾಸನ ಸಂಖ್ಯೆ–39, ಪು.22., ಎ.ಕ.ಸಂ–10.(ಬಿ.ಎಲ್.ರೈಸ್) ಕೋಲಾರ–100,169

45. ಎ.ಕ.ಸಂ–12, ಶಾಸನ ಸಂಖ್ಯೆ–48, ಪು.65–68

46. ಎಂ.ಎ.ಆರ್–1932, ಪು.34

47. ಎ.ಕ.ಸಂ–11, ಶಾಸನ ಸಂಖ್ಯೆ–36, ಪು.21

48. ಎ.ಕ.ಸಂ–11, ಶಾಸನ ಸಂಖ್ಯೆ–201, ಪು.127

49. ಎ.ಕ.ಸಂ–11, ಶಾಸನ ಸಂಖ್ಯೆ–157, ಪು.98

50. ವಿಲಿಯಂ ಕೋಹಿಲೋ–ದ ಹೊಯ್ಸಳ ವಂಶ, ಪು.254–62

51. ಎ.ಕ.ಸಂ–11, ಶಾಸನ ಸಂಖ್ಯೆ–58,59, ಪು.31–32

52. ಎ.ಕ.ಸಂ–12, ಶಾಸನ ಸಂಖ್ಯೆ–137, ಪು.147

53. ರೈಸ್, ಬಿ.ಎಲ್–ಮೈಸೂರು ಎ ಗೆಜಿಟಿಯರ್ ಕಂಪ್ಲೈಡ್, ಪು.390

54. ಹಳೇಕೋಟೆ ರಮೇಶ್–ಮೂಡಿಗೆರೆ ತಾಲ್ಲೂಕು ದರ್ಶನ, ಪು.10

55. ಎ.ಕ.ಸಂ–11, ಶಾಸನ ಸಂಖ್ಯೆ–9 ಪು.251

56. ಎ.ಕ.ಸಂ–11, ಶಾಸನ ಸಂಖ್ಯೆ–32, ಪು.265

57. ಹಳೇಕೋಟೆ ರಮೇಶ್–ಪೂರ್ವೋಕ್ತ, ಪು.10

58. ಎ.ಕ.ಸಂ–11, ಶಾಸನ ಸಂಖ್ಯೆ–79, ಪು.347

59. ಎ.ಕ.ಸಂ–11, ಶಾಸನ ಸಂಖ್ಯೆ–107, ಪು.232

60. ಎ.ಕ.ಸಂ–11, ಶಾಸನ ಸಂಖ್ಯೆ–34, ಪು.273

61. ಎ.ಕ.ಸಂ–11, ಶಾಸನ ಸಂಖ್ಯೆ–104, ಪು.229

62. ಎ.ಕ.ಸಂ–11, ಶಾಸನ ಸಂಖ್ಯೆ–184, ಪು.116

63. ಎ.ಕ.ಸಂ–11, ಶಾಸನ ಸಂಖ್ಯೆ–85, ಪು.47

64. ಎ.ಕ.ಸಂ–11, ಶಾಸನ ಸಂಖ್ಯೆ–183 ಪು.115

65. ಎ.ಕ.ಸಂ–11, ಶಾಸನ ಸಂಖ್ಯೆ–59, ಪು.331

66. ಹಳೇಕೋಟೆ ರಮೇಶ್–ಪೂರ್ವೋಕ್ತ, ಪು.10

67. ಎ.ಕ.ಸಂ–11, ಶಾಸನ ಸಂಖ್ಯೆ–80,82, ಪು.210–11

68. ಮಿರ್ಜಿ ಅಣ್ಣರಾಯ–ಜೈನಧರ್ಮ, ಪು.128

69. ಎ.ಕ.ಸಂ–11, ಶಾಸನ ಸಂಖ್ಯೆ25,26, ಪು.462–64

70. ಹಂಪ ನಾಗರಾಜಯ್ಯ–ಸಾಂತರರು ಒಂದು ಅಧ್ಯಯನ, ಪು.30

71. ಎ.ಕ.ಸಂ–11, ಶಾಸನ ಸಂಖ್ಯೆ–48, ಪು.182

72. ರೈಸ್.ಬಿ.ಎಲ್.1909 : ಪು.141

73. ಎ.ಕ.ಸಂ–11, ಶಾಸನ ಸಂಖ್ಯೆ–46, 67

74. ಎ.ಕ.ಸಂ–12, ಶಾಸನ ಸಂಖ್ಯೆ–6, ಪು.279

75. ಎ.ಇ.ಸಂ–7,110 ಮತ್ತು 112

76. ಎ.ಕ.ಸಂ–11, ಶಾಸನ ಸಂಖ್ಯೆ–5,36,45

77. ಎ.ಕ.ಸಂ–11, ಶಾಸನ ಸಂಖ್ಯೆ–92, ಪು.217

78. ಎ.ಕ.ಸಂ–11, ಶಾಸನ ಸಂಖ್ಯೆ–4,92 ಪು.217 ಮತ್ತು 246

79. ಪಾರ್ಥಸಾರಥಿ–ಚಿಕ್ಕಮಗಳೂರು ಜಿಲ್ಲಾ ದರ್ಶನ – ಪು.16

80. ಎ.ಕ.ಸಂ–11, ಶಾಸನ ಸಂಖ್ಯೆ–71, ಪು.204–05

81. ಎ.ಕ.ಸಂ–11, ಶಾಸನ ಸಂಖ್ಯೆ–43, ಪು.175

82. ಎ.ಕ.ಸಂ–11, ಶಾಸನ ಸಂಖ್ಯೆ–76,80, ಪು.208–10

83. ಎ.ಕ.ಸಂ–11, ಶಾಸನ ಸಂಖ್ಯೆ–76,80, ಪು.208–10

84. ಎ.ಕ.ಸಂ–11, ಶಾಸನ ಸಂಖ್ಯೆ–77, ಪು.208–09

85. ಎ.ಕ.ಸಂ–11, ಶಾಸನ ಸಂಖ್ಯೆ–81, ಪು.211

86. ಎ.ಕ.ಸಂ–11, ಶಾಸನ ಸಂಖ್ಯೆ–78, ಪು.209

87. ಎ.ಕ.ಸಂ–11, ಶಾಸನ ಸಂಖ್ಯೆ–63, ಪು.196

88. ಎ.ಕ.ಸಂ–11, ಶಾಸನ ಸಂಖ್ಯೆ–73 ಪು.206

89. ಎ.ಕ.ಸಂ–11, ಶಾಸನ ಸಂಖ್ಯೆ–48, ಪು.182–84

90. ಎ.ಕ.ಸಂ–11, ಶಾಸನ ಸಂಖ್ಯೆ–50, ಪು.185–86

91. ಎ.ಕ.ಸಂ–11, ಶಾಸನ ಸಂಖ್ಯೆ–47, ಪು.181

92. ಎ.ಕ.ಸಂ–11, ಶಾಸನ ಸಂಖ್ಯೆ–69, ಪು.202

93. ಕೃಷ್ಣತಂತ್ರಿ, ಆರ್ – ತರೀಕೆರೆ ತಾಲ್ಲೂಕಿನ ದರ್ಶನ ಪು.10

94. ಅದೇ, ಪು.11

95. ದಿವಾಕರ, ಆರ್.ಆರ್–ಕರ್ನಾಟಕದ ಪರಂಪರೆ, ಸಂ–1, ಪು.385

96. ಎ.ಕ.ಸಂ–11, ಶಾಸನ ಸಂಖ್ಯೆ–130 ಪು.81

97. ಎ.ಕ.ಸಂ–11, ಶಾಸನ ಸಂಖ್ಯೆ–129 ಪು.

98. ಹಂಪ ನಾಗರಾಜಯ್ಯ – ಸಾಂತರರು ಒಂದು ಅಧ್ಯಯನ, ಪು.30

99. ಮಿರ್ಜಿ ಅಣ್ಣರಾಯ – ಜೈನಧರ್ಮ, ಪು.127

100. ಎ.ಕ.ಸಂ–7 ಶಿಕಾರಿಪುರ–278

101. ಎ.ಕ.ಸಂ–12, ಶಾಸನ ಸಂಖ್ಯೆ–129 ಪು.80–81

102. ಅದೇ.

103. ಎ.ಕ.ಸಂ–11, ಶಾಸನ ಸಂಖ್ಯೆ–23, ಪು.15

104. ಎ.ಕ.ಸಂ–12, ಶಾಸನ ಸಂಖ್ಯೆ–29, ಪು.49

105. ಎ.ಕ.ಸಂ–12, ಶಾಸನ ಸಂಖ್ಯೆ–178,179,197, ಪು.198–202.214

106. ಪಾರ್ಥಸಾರಥಿ–ಚಿಕ್ಕಮಗಳೂರು ಜಿಲ್ಲಾ ದರ್ಶನ– ಪು.34

107. ಅದೇ, ಪು.34

108. ಅದೇ, ಪು.34

109. ಕರ್ನಾಟಕ ಸ್ಟೇಟ್ ಗೆಜಿಟಿಯರ್– ಚಿಕ್ಕಮಗಳೂರು ಜಿಲ್ಲೆ, – ಪು.34

110. ಜಯಪ್ಪಗೌಡ–(ಸಂ) ಭೈರವ ಬಾಗಿನ, ಪು.205

# ಅಧ್ಯಾಯ – 3

# ಪ್ರವಾಸೋದ್ಯಮದ ಉಗಮ ಮತ್ತು ಬೆಳವಣಿಗೆ

**ಪೀಠಿಕೆ:**

ದೇಶ ಸುತ್ತು ಕೋಶ ಓದು ಎನ್ನುವ ಮಾತಿದೆ. ತನು, ಮನದ ಜ್ಞಾನಕ್ಕೆ ನಮ್ಮ ಹಿರೀಕರು ಕಂಡುಕೊಂಡ ಮಾರ್ಗವಿದು. ಅನುಭವ, ತನ್ಮೂಲಕ ಅನುಭಾವಕ್ಕೆ ಬಾರದ ಜ್ಞಾನವನ್ನು ಪುಸ್ತಕದ ಬದನೆಕಾಯಿ ಎಂದೂ ದೂರುವುದಿದೆ. ಒಂದೇ ಒಂದು ಸುತ್ತಾಟ, ಪುಸ್ತಕವೊಂದು ನೀಡುವ ಜ್ಞಾನಕ್ಕಿಂತ ಹೆಚ್ಚಿನ ಜ್ಞಾನ ಮೈಗೂಡಿಸುತ್ತದೆ ಎನ್ನುವುದು ಅನುಭವ ವೇದ್ಯ ಮಾತು. ಇದು 'ವಿಶ್ವ ಪುಸ್ತಕವಿದ್ದಂತೆ, ಸುತ್ತಾಡಲಾರದವ ಯಾವ ಜ್ಞಾವನ್ನು ಗಳಿಸಲಾರ' ಎನ್ನುವ ಸೇಂಟ್ ಆಗಸ್ಟಿನ್ ಹೇಳಿಕೆಯನ್ನು ನೆನಪಿಸುತ್ತದೆ. ತಿರುಗಾಟಕ್ಕೆ ಧನ ಬೇಕು; ಹಾಗೆಯೇ ಅದಕ್ಕಾಗಿ ವೇಳೆ ಮೀಸಲಿಡುವ ಮನಸ್ಸು ಬೇಕು.

ವಿಶ್ವ ಭೂಪಟದತ್ತ ಕಣ್ಣು ಹಾಯಿಸಿದಾಗ ಭಾರತ ನೈಸರ್ಗಿಕವಾಗಿ, ಸಾಂಸ್ಕೃತಿಕವಾಗಿ ಸಂಪನ್ನವಾಗಿರುವುದು ಸುವ್ಯಕ್ತ. ಪ್ರಾಕೃತಿಕ ಸೌಂದರ್ಯ, ಸಾಂಸ್ಕೃತಿಕ ಪರಂಪರೆ, ಐತಿಹಾಸಿಕ ಸ್ಮಾರಕಗಳು, ನಿಬ್ಬೆರಗಾಗಿಸುವ ಕಲಾ ಚಾತುರ್ಯ, ವಿಶಿಷ್ಟ ಸಂಪ್ರದಾಯಗಳು, ಧಾರ್ಮಿಕ ನಂಬಿಕೆಗಳು, ರುಚಿಕರ, ಆರೋಗ್ಯಕರ ಆಹಾರ, ವಿಹಾರ ಎಲ್ಲವೂ ಭಾರತದತ್ತ ಯಾತ್ರಿಕರನ್ನು ಆಕರ್ಷಿಸುವ ಅಂಶಗಳಾಗಿವೆ. ಅಂಕಿ ಅಂಶಗಳ ಪ್ರಕಾರ ಕಳೆದ ದಶಕದಲ್ಲಿ ಜಿಡಿಪಿಯಲ್ಲಿ ಪ್ರವಾಸೋದ್ದಿಮೆಯ ಪಾಲು ಶೇ. 6.6 ಕ್ಕೆ ಏರಿದೆ.[1]

ಪ್ರವಾಸೋದ್ಯಮ, ಎಲ್ಲ ವರ್ಗದ ಉದ್ಯೋಗ ಸೃಷ್ಟಿಸುವ ಬಹುಮುಖ್ಯ ರಂಗ. ವಿದೇಶಿ ವಿನಿಮಯದ ಮೂಲಕ ಆರ್ಥಿಕ ಬೆಳವಣಿಗೆ ತರಬಲ್ಲ ಕ್ಷೇತ್ರ. ಸೇವಾದೃಷ್ಟಿ ವಿಶಿಷ್ಠವಾದ ಸಂಸ್ಕೃತಿ, ಪ್ರಕೃತಿ, ಪರಂಪರೆ ಆತ್ಮೀಯ ಆತಿಥ್ಯದ ಜನರ ಮನೋಭಾವ. ಈ ಎಲ್ಲ ಅಂಶಗಳಿಂದ ಸಂಪನ್ನವಾಗಿರುವ ಭಾರತದಲ್ಲಿ ಎಲ್ಲ ಬಗೆಯ ಪ್ರವಾಸೋದ್ಯಕ್ಕೆ ವಿಪುಲ ಅವಕಾಶಗಳಿವೆ. ಇದನ್ನು ವಾಣಿಜ್ಯಕವಾಗಿ ಕರಗತ ಮಾಡಿಕೊಳ್ಳುವ ಕಲೆ ರೂಢಿಸಿಕೊಳ್ಳಬೇಕಾಗಿದೆ. ಪ್ರವಾಸೋದ್ಯಕ್ಕೆ ಆರ್ಥಿಕ ಆಯಾಮ ತಂದುಕೊಡುವಲ್ಲಿ ಮೂಲಭೂತ ಸೌಕರ್ಯದ ಪಾತ್ರ ಮಹತ್ವವಾಗಿದೆ. ಉತ್ತಮ ವಾಯು–ಭೂ–ಜಲಮಾರ್ಗ, ಸಾರಿಗೆ, ವಾಹನ ಸೌಕರ್ಯ, ವಸತಿ, ಆಹಾರ, ನಿರಾತಂಕ ವಾತಾವರಣ, ಆರೋಗ್ಯಕರ ಆಹ್ಲಾದಕರ ಪರಿಸರ ಪ್ರವಾಸಿಗಳನ್ನು ಆಕರ್ಷಿಸುವ ಅಂಶಗಳಾಗಿವೆ. ಇವೆಲ್ಲ ಸೌಲಭ್ಯ ಕಲ್ಪಿಸುವಲ್ಲಿ ಕೇಂದ್ರ–ರಾಜ್ಯ ಸ್ಥಳೀಯ ಹಂತದ ಆಡಳಿತ ಹಾಗೂ ಜನರು,

ಪ್ರಧಾನ ಪಾತ್ರ ವಹಿಸುತ್ತಾರೆ. ಪ್ರವಾಸೋದ್ಯಮವನ್ನು ಆರ್ಥಿಕ ಊರುಗೋಲಾಗಿ ಬಳಸಿಕೊಂಡ ಅನೇಕ ದೇಶಗಳು ನಮಗೆ ಮಾದರಿಯಾಗಿ ನಿಂತಿವೆ.

ಪ್ರವಾಸೋದ್ದಿಮೆಯನ್ನು ಬೆಳವಣಿಗೆಯ ಚಕ್ರವನ್ನಾಗಿ ಅಳವಡಿಸಿಕೊಳ್ಳಲು ಸರ್ಕಾರ ನೀತಿಗಳನ್ನು ರೂಪಿಸಿದೆ. 2016–17ರ ವೇಳೆಗೆ ಅಂತಾರಾಷ್ಟ್ರೀಯ ಪ್ರವಾಸಿಗರಲ್ಲಿ ಕನಿಷ್ಠ ಒಂದರಷ್ಟು ಯಾತ್ರಿಕರನ್ನಾದರೂ ಆಕರ್ಷಿಸಬೇಕೆನ್ನುವುದೆ ಸರ್ಕಾರದ ಸದ್ಯದ ಗುರಿ. ಈ ನಿಟ್ಟಿನಲ್ಲಿ ಪ್ರವಾಸಿ ಸಂದರ್ಶಕರಿಗೆ ಬರುತ್ತಲೆ ನೀಡುವ ವೀಸಾ ಮುಖ್ಯ ಹೆಜ್ಜೆಯಾಗಿದೆ. ಸದ್ಯ 44 ದೇಶಗಳ ಪ್ರಜೆಗಳಿಗೆ ನೀಡಲಾಗುತ್ತಿರುವ ಈ ಸೌಲಭ್ಯವನ್ನು ಇನ್ನೂ ನೂರಕ್ಕೂ ಹೆಚ್ಚು ದೇಶಗಳ ನಾಗರಿಕರಿಗೆ ವಿಸ್ತರಿಸುವ ಗುರಿ ಇದೆ. ಇತರ ರಂಗಗಳಂತೆ ಪ್ರವಾಸೋದ್ದಿಮೆಯಲ್ಲೂ ವಿದ್ಯುನ್ಮಾನ ನಿರ್ವಹಣೆಗೆ ವ್ಯಾಪಕ ಪಾತ್ರವಿದೆ. ಪ್ರವಾಸಗಳ ಆಯೋಜಕ ಪಟ್ಟಿ. ವಸತಿ ಸೌಕರ್ಯ, ಮಾರ್ಗಗಳ ಮಾರ್ಗದರ್ಶನ ಎಲ್ಲವೂ ಮೊಬೈಲ್ ಆ್ಯಪ್‌ಗಳಲ್ಲಿ ಲಭ್ಯ. ದೇಶೀಯ ಯಾತ್ರಿಕರಿಗೆ ಸ್ವದೇಶ ದರ್ಶನ ಸೌಲಭ್ಯ ಇದೆ. 2016–17ರ ವೇಳೆಗೆ, ಎಲ್ಲ ಧಾರ್ಮಿಕ ನಂಬಿಕೆಗಳ ಯಾತ್ರಾ ಸ್ಥಳಗಳ ನವೀಕರಣ ಪುನರುತ್ಥಾನಕ್ಕೆ ಒತ್ತು ನೀಡಲಾಗಿದೆ. ಈ ಕ್ಷೇತ್ರದಲ್ಲಿ ಉದ್ಯೋಗ ಸೃಷ್ಟಿಗಾಗಿ ಹೊನಾರ್ ಸೆ ರೋಜ್‌ಗಾರ್ ತಕ್ ಮತ್ತು ಹೊನಾರ್ ಜೈಕಾ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದೆ.[2]

ಈ ಮೊದಲೇ ಹೇಳಿದಂತೆ ಪ್ರವಾಸೋದ್ದಿಮೆ ಯಶಸ್ಸು ಇನ್ನೂ ಅನೇಕ ಸೇವಾ ಕ್ಷೇತ್ರಗಳ ಸಾಮರ್ಥ್ಯಗಳೊಂದಿಗೆ ತಳಕು ಹಾಕಿಕೊಂಡಿದೆ. ಸಾರಿಗೆ, ವಸತಿ, ಊಟೋಪಚಾರ, ಮನರಂಜನೆ ಕ್ಷೇತ್ರಗಳಿಗೂ ಒತ್ತು ಅಗತ್ಯ. ಹೊಸ ಹೊಸ ಅಭಿರುಚಿಯ ಪ್ರವಾಸಿ ತಾಣಗಳನ್ನು ಗುರುತಿಸುವ ಬೆಳೆಸುವ ಕಾರ್ಯವೂ ಆಗಬೇಕಿದೆ.

'ಅತಿಥಿ ದೇವೋಭವ' ಭರತೀಯರಿಗೆ ಅತಿಥಿ ಬಗ್ಗೆ ಇರುವ ಗೌರವದ ದ್ಯೋತಕವಾಗಿದೆ. ಈಗ ಆತಿಥ್ಯ ಪ್ರವಾಸೋದ್ದಿಮೆಯನ್ನು ಹೆಚ್ಚು ಉದ್ಯೋಗ ಸೃಷ್ಟಿಯ ದೃಷ್ಟಿಯಿಂದ ನೋಡಬೇಕಾದ ಕಾಲ ಸನ್ನಿಹಿತವಾಗಿದೆ. ಅದನ್ನು ಬಡತನ ನಿವಾರಣೆಯ ಶಸ್ತ್ರವಾಗಿಯೂ ಬಳಸಿಕೊಳ್ಳಬೇಕಾಗಿದೆ. ಪ್ರವಾಸೋದ್ಯಮ, ಜನರಲ್ಲಿ ಆರ್ಥಿಕ ಮಾತ್ರವಲ್ಲ ಸಾಮಾಜಿಕ ಬದಲಾವಣೆಯನ್ನು ತರಬಲ್ಲ ಸಾಮರ್ಥ್ಯ ಹೊಂದಿದೆ. ಪ್ರಖ್ಯಾತ ತತ್ವಜ್ಞಾನಿ ಫಿಲೋಸೊ ಲೊ ತುಜು ಹೇಳುವಂತೆ ಸಾವಿರ ಮೈಲುಗಳ ಪ್ರಯಾಣವೂ ಒಂದು ಹೆಜ್ಜೆಯಿಂದಲೇ ಆರಂಭವಾಗುತ್ತದೆ. ಈ ದಿಸೆಯಲ್ಲಿ ಭಾರತ, ಪ್ರವಾಸೋದ್ಯಮ ಸಾಮರ್ಥ್ಯ ಬಳಕೆಗೆ ಈಗಾಗಲೇ ತನ್ನ ಪದವಿರಿಸಿದೆ.

ಪ್ರವಾಸ ಎಂಬುದು ಮಾನವನ ಮೂಲಭೂತ ಚಟುವಟಿಕೆಗಳಲ್ಲಿ ಒಂದಾಗಿದೆ. ಮಾತ್ರವಲ್ಲ ಅವನ ಅವಿಭಾಜ್ಯ ಅಂಗವೂ ಆಗಿದೆ. ಕುತೂಹಲ ಅಥವಾ ಅನ್ವೇಷಣಾ ಗುಣ

ಮಾನವನಲ್ಲಿ ಎಂದು ಹುಟ್ಟಿಕೊಂಡಿತೋ ಅಂದೇ ಪ್ರವಾಸೋದ್ಯಮ ಹುಟ್ಟಿ ಬೆಳೆಯಿತು. ವಲಸೆ, ಆಹಾರ, ವಸತಿಗಾಗಿ ಆರಂಭವಾದ ಪ್ರವಾಸವು ಧಾರ್ಮಿಕ ದಿಕ್ಕಿನಲ್ಲಿ ಸಾಗಿ ಕೊನೆಗೆ ಮೋಜಿಗಾಗಿ ಪ್ರವಾಸ ಕೈಗೊಳ್ಳುವ ಹಂತ ತಲುಪಿದೆ. ಪ್ರವಾಸೋದ್ಯಮ ಕೇವಲ ಒಂದು ಉದ್ದಿಮೆಯಲ್ಲ. ಅದೊಂದು ಬೃಹತ್ ಉದ್ದಿಮೆಯಾಗಿ ಬೆಳೆಯುತ್ತಿದೆ. ಇದಕ್ಕೆ ಕಾರಣ ಬದಲಾಗುತ್ತಿರುವ ಮಾನವನ ಅಭಿರುಚಿ. ವಿರಾಮಕ್ಕಾಗಿ, ಮೋಜಿಗಾಗಿ, ಆನಂದಕ್ಕಾಗಿ ಆತ ಎಷ್ಟು ಬೇಕಾದರೂ ಖರ್ಚು ಮಾಡಲು ಸಿದ್ಧವಾಗಿದ್ದಾನೆ. ವಿರಾಮ ವೇಳೆಯನ್ನು ಕಳೆಯಲು ವೇತನ ಸಹಿತ ರಜಾ ಸೌಲಭ್ಯ ಇಂತಹ ಬೆಳವಣಿಗೆಗೆ ಕಾರಣವಾಗಿದೆ. ಜೊತೆಗೆ ಜಾಗತೀಕರಣದ ಪ್ರಭಾವ, ಸಾರಿಗೆ ಸಂಪರ್ಕಗಳಲ್ಲಿ ಕ್ರಾಂತಿ, ಮಾಹಿತಿ ತಂತ್ರಜ್ಞಾನದಲ್ಲಾಗುತ್ತಿರುವ ವಿನೂತನ ಕ್ರಾಂತಿ– ಇವು ಜಗತ್ತನ್ನು ತುಂಬಾ ಹತ್ತಿರ ತರುತ್ತಿವೆ. ಪ್ರವಾಸೋದ್ಯಮವು ಇಂದು ರಾಷ್ಟ್ರಾದಾಯ ಗಳಿಕೆ, ಉದ್ಯೋಗ ಸೃಷ್ಠಿ ವಿದೇಶಿ ವಿನಿಮಯ ಗಳಿಕೆ, ಅಂತರರಾಷ್ಟ್ರೀಯ ಸಹಕರ ವೃದ್ಧಿಸುವ ಸಾಧನವಾಗಿ ಬಹು ಕ್ಷಿಪ್ರಗತಿಯಲ್ಲಿ ಬೆಳವಣಿಗೆ ಸಾಧಿಸುತ್ತಿದೆ. ಕೆಲವು ಶ್ರೀಮಂತ ರಾಷ್ಟ್ರಗಳು ಪ್ರವಾಸೋದ್ಯಮದಿಂದಲೇ ಅಪಾರ ಹಣ ಗಳಿಸುತ್ತಿವೆ, ಕೆಲ ಬಡದೇಶಗಳು ಈ ಉದ್ದಿಮೆಯಿಂದಲೇ ಬದುಕುತ್ತಿವೆ. ಹೀಗೆ ಬಹು ಆಯಾಮವುಳ್ಳ ಪ್ರವಾಸೋದ್ಯಮವು ಆರ್ಥಿಕ ವಲಯದಲ್ಲಿ ತ್ವರಿತಗತಿಯಲ್ಲಿ ಬೆಳವಣಿಗೆ ಸಾಧಿಸುವ ಉದ್ದಿಮೆಯಾಗಿ ಗುರ್ತಿಸಲ್ಪಟ್ಟಿದೆ.

ಭಾರತವೂ ಸಹ ಪ್ರವಾಸೋದ್ಯಮದಲ್ಲಿ ಕ್ಷಿಪ್ತ ಪ್ರಗತಿ ಸಾಧಿಸುತ್ತಿರುವ ರಾಷ್ಟ್ರಗಳಲ್ಲಿ ಒಂದಾಗಿದೆ. ಭಾರತವು ಪ್ರಾಕೃತಿಕ ಹಾಗೂ ಸಾಂಸ್ಕೃತಿಕ ಸಂಪತ್ತಿನಿಂದ ಕೂಡಿದ ಶ್ರೀಮಂತಿಕೆಯ ನಾಡಾಗಿದೆ. ಇಲ್ಲಿನ ಹಿಮಪರ್ವತಗಳು, ಗಿರಿಧಾಮಗಳು, ವನ್ಯಜೀವಿ ಕೇಂದ್ರಗಳು, ನದಿ ಸರೋವರಗಳು, ಅರಣ್ಯಧಾಮಗಳು ಕಡಲ ತೀರಗಳು ಪ್ರವಾಸಿಗರನ್ನು ಕೈ ಬೀಸಿ ಕರೆಯುತ್ತವೆ. ಎಲ್ಲಕ್ಕಿಂತ ಮಿಗಿಲಾಗಿ ಇಲ್ಲಿನ ಸಾಂಸ್ಕೃತಿಕ ಆಕರ್ಷಣೆ ವಿಶಿಷ್ಠವಾದುದು. ಅಸಂಖ್ಯಾತ ಧಾರ್ಮಿಕ ಕೇಂದ್ರಗಳು, ದೇವಾಲಯಗಳು, ಮೂರ್ತಿಶಿಲ್ಪಗಳು, ಗುಡಿಗೋಪುರಗಳು, ಅರಮನೆಗಳು, ಮಸೀದಿಗಳು, ಚರ್ಚ್‌ಗಳು, ಚಿತ್ರಕಲೆ, ಸಂಗೀತ ಉತ್ಸವಗಳು ಪ್ರವಾಸಿಗರ ಸ್ವರ್ಗ ತಾಣಗಳಾಗಿವೆ. 'ಭಾರತವನ್ನು ಭೂತಲ ಸ್ವರ್ಗ', 'ಹಾಲು ಜೇನಿನ ನಾಡು' ಎಂದು ಕರೆಯುವುದಿದೆ.[3] ಆದ್ದರಿಂದ ಭಾರತದಲ್ಲಿ ಪ್ರವಾಸೋದ್ಯಮಕ್ಕೆ ವಿಫುಲವಾದ ಅವಕಾಶಗಳಿವೆ. ಇದನ್ನು ಮನಗಂಡ ಭಾರತದ Tourism ಇಲಾಖೆ ಪ್ರವಾಸೋದ್ಯಮವನ್ನು ಒಂದು ಉದ್ದಿಮೆಯಾಗಿ ಘೋಷಿಸಿದೆ.

## ಪ್ರವಾಸೋದ್ಯಮದ ಅರ್ಥ ಮತ್ತು ವ್ಯಾಖ್ಯೆ

ಪ್ರವಾಸಿಗನು (Tourist) ಪ್ರವಾಸೋದ್ಯಮ (Tourism)ದ ಪಾತ್ರಧಾರಿ, Tourist ಮತ್ತು Tourism ಎಂಬ ಇಂಗ್ಲಿಷ್ ಪದಗಳು ಲ್ಯಾಟಿನ್ ಪದವಾದ Tour ಎಂಬ ಪದದಿಂದ ಹುಟ್ಟಿಬಂದಿವೆ. Tour ಎಂಬದು ಅದೇ ಲ್ಯಾಟಿನ್‌ನ ಮೂಲಪದವಾದ ಟೋರ್‌ನಸ್ (Tornos) ಎಂಬ ಪದದಿಂದ ನಿಷ್ಪನ್ನವಾಗಿದೆ.[4] ಟೋರ್‌ನಸ್ ಎಂದರೆ ತಿರುಗುಚಕ್ರದ ಉಪಕರಣ (Tourners Wheel), ಅದು ಸುತ್ತಾಡು, ಪ್ರದಕ್ಷಿಸು, ವೃತ್ತದಂತೆ ತಿರುಗು ಎಂಬರ್ಥ ನೀಡುತ್ತದೆ. ಗ್ರೀಕ್ ಪದ Tour ಎಂದರೆ ದುಂಡಾದ ಆಯುಧ, Tourist ಎಂದರೆ ದುಂಡಾದ ಆಯುಧವುಳ್ಳವ ಎಂದರ್ಥ. 1292ರಲ್ಲಿ ಬಳಕೆಗೆ ಬಂದ Tourist ಎಂಬ ಪದದ ಅರ್ಥ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಪ್ರಯಾಣಿಸುವವನು ಎಂದರ್ಥ ನೀಡುತ್ತದೆ.

19ನೇ ಶತಮಾನದಲ್ಲಿ ವಿನೋದಕ್ಕಾಗಿ ಅಥವಾ ಕುತೂಹಲಕ್ಕಾಗಿ ಪ್ರಯಾಣಿಸುವವರನ್ನು ಪ್ರವಾಸಿಗರು ಎಂದು ಕರೆಯಲಾಗುತ್ತಿತ್ತು. (Tourist means who one makes trip for pleasure or curiosity) ಪ್ರವಾಸಿಗ ಎಂದರೆ ತನ್ನ ವಾಸಸ್ಥಾನದಿಂದ ಕನಿಷ್ಠ 24 ಗಂಟೆಗಳ ಕಾಲ ಹೊರ ಹೋಗಿ ಗಮ್ಯಸ್ಥಾನದಲ್ಲಿ ವಿರಾಮ ವೇಳೆಯನ್ನು ಕಳೆಯುವವನು. 1800ರಲ್ಲಿ Tour ಮತ್ತು Tourist ಪದಗಳು ನಿತ್ಯ ಬಳಕೆಗೆ ಬಂದವು. ಥಾಮಸ್‌ಪೇಜ್ 1800ರಲ್ಲಿ ಟೂರಿಸ್ಟ್ ಎಂಬ ಪದವನ್ನು ಪ್ರವಾಸಿಗ ಎಂಬುದನ್ನು ಸರಿಸಾಟಿಯಾಗಿ ಬಳಸಿದನು. ನಂತರ ಎಲ್ಲಾ ಪ್ರವಾಸಿ ಚಟುವಟಿಕೆಗಳನ್ನು ಕೂಡಿಸಿ ಟೂರಿಸಂ ಎಂಬ ಶಬ್ದ ಬಳಕೆ ಆರಂಭವಾಯಿತು. ಆಕ್ಸ್‌ಫರ್ಡ್ ಶಬ್ದಕೋಶದ ಪ್ರಕಾರ ಪ್ರವಾಸಿಗ ಎಂದರೆ "ವ್ಯಕ್ತಿಯೋರ್ವನು ಕುತೂಹಲ ಅಥವಾ ಮೋಜಿಗಾಗಿ ಪ್ರಯಾಣ ಮಾಡುವವನು" ಎಂದರ್ಥ. (A person who make a Journey for the sake of curiosity is called as Tourist.)

ವೆಬ್‌ಸ್ಟರ್ ವಿಶ್ವಕೋಶದ ಪ್ರಕಾರ "ವೃತ್ತಿ ಅಥವಾ ಸಂಭಾವನೆ ಕಾರಣವಲ್ಲದೆ ಒಬ್ಬ ವ್ಯಕ್ತಿ ತನ್ನ ವಾಸಸ್ಥಾನದಿಂದ ಮತ್ತೊಂದು ದೇಶಕ್ಕೆ/ಸ್ಥಳಕ್ಕೆ ಭೇಟಿ ನೀಡಿ ವಿರಾಮ ವೇಳೆಯನ್ನು ವಿನೋದಕ್ಕಾಗಿ ಕಳೆಯುವವನೇ ಪ್ರವಾಸಿಗ ಎನಿಸಿಕೊಳ್ಳುತ್ತಾನೆ." ಅದೇ ರೀತಿ Tour ಎಂದರೆ ವ್ಯವಹಾರ, ಕಲಾ ಪ್ರದರ್ಶನ ಮುಂತಾದ ಚಟುವಟಿಕೆಗಳಿಗೆ ಯೋಜನಾಬದ್ಧವಾಗಿ ಕೈಗೊಂಡ

ಪಯಣವನ್ನು Tour ಎನ್ನುತ್ತೇವೆ. ಪ್ರವಾಸೋದ್ಯಮದಲ್ಲಿ ತೊಡಗಿರುವ ಪ್ರಯಾಣಿಕರೆಲ್ಲರೂ ಪ್ರವಾಸಿಗರು ಎನಿಸಿಕೊಳ್ಳುತ್ತಾರೆ.

ಒಟ್ಟಾರೆಯಾಗಿ ವಾಸಸ್ಥಾನದಿಂದ ದೂರ ಪ್ರಯಾಣಿಸುವವನು, ವಿನೋದ, ಸಂತೋಷಕ್ಕಾಗಿ ಪ್ರಯಾಣಿಸುವವನು, ಕನಿಷ್ಠ 24 ಗಂಟೆಗಳ ಕಾಲ ಗಮ್ಯಸ್ಥಾನದಲ್ಲಿ ತಂಗುವವನು, ವಿರಾಮ ವೇಳೆಯನ್ನು ಸಂತೋಷದಲ್ಲಿ ಕಳೆಯುವವನು ಪ್ರವಾಸಿಗ ಎನಿಸಿಕೊಳ್ಳುತ್ತಾನೆ. ಅವನ ಪ್ರಯಾಣದ ಉದ್ದೇಶ ಅಲ್ಲೇ ಶಾಶ್ವತವಾಗಿ ನೆಲೆ ನಿಲ್ಲುವುದಕ್ಕಾಗಲಿ, ಸಂಪಾದನೆಗಾಗಿ, ಉದ್ಯೋಗಕ್ಕಾಗಿ, ಸಂಭಾವನೆಗಾಗಿ ಆಗಿರಬಾರದು. ವಿನೋದ, ಸಂತೋಷ, ಮನೋರಂಜನೆ ಅದರ ಉದ್ದೇಶವಾಗಿರಬೇಕು. ಪ್ರಯಾಣಿಸುವ ಸ್ಥಳ ಪ್ರವಾಸಿಗನಿಗೆ ನಿವಾಸವಾಗಿರಬಾರದು. ಅವನು ತಾತ್ಕಾಲಿಕ ಸಂದರ್ಶಕನಷ್ಟೆ ಕಾಲ ಮತ್ತು ದೂರ ಪ್ರವಾಸೋದ್ಯಮವನ್ನು ನಿರ್ಧರಿಸುವ 2 ಅಂಶಗಳು. ಪ್ರಯಾಣ ದೂರ ಮತ್ತು ಕಾಲಾವಧಿ ಕನಿಷ್ಠ 25 ಮೈಲಿ ಹಾಗೂ 24 ಗಂಟೆಗಳಾಗಿರಬೇಕು.

Tourism ಎಂದರೆ ಪ್ರವಾಸಿಗರಿಗೆ ಸಾರಿಗೆ, ವಸತಿ, ಮನರಂಜನೆ, ಪ್ರವಾಸ ಉತ್ಪನ್ನ ಮಾಹಿತಿ, ಪ್ರಯಾಣ ಸೇವೆಗಳನ್ನು ಒದಗಿಸುವ ವ್ಯವಸ್ಥೆ ಅಥವಾ ಆರ್ಥಿಕ ವಲಯವನ್ನು ಪ್ರವಾಸೋದ್ಯಮ ಎನ್ನುವರು. ಸಾರಿಗೆ ವಾಹನಗಳು, ಹೋಟೆಲ್‌ಗಳು, ಪ್ರವಾಸ ಏಜೆಂಟರು ಹಾಗೂ ಪ್ರವಾಸಿ ಸಂಸ್ಥೆಗಳು ಪ್ರವಾಸೋದ್ಯಮದಲ್ಲಿ ಸೇರ್ಪಡೆಯಾಗುತ್ತವೆ. ವ್ಯಕ್ತಿ (Tourist), ಸ್ಥಳ (Destination) ಮತ್ತು ಕಾಲ (Period) ಇವು ಪ್ರವಾಸೋದ್ಯಮವನ್ನು ಮುನ್ನಡೆಸುವ 3 ಅಂಶಗಳು. ಅವು ಇಲ್ಲದೆ ಪ್ರವಾಸೋದ್ಯಮ ನಡೆಯುವುದಿಲ್ಲ.

## ಪ್ರವಾಸೋದ್ಯಮ ಬೆಳೆದುಬಂದ ದಾರಿ

ಪ್ರವಾಸ ಎಂಬುದು ಮಾನವನಷ್ಟೇ ಪುರಾತನವದುದು. ಕುತೂಹಲ ಅವನ ಪ್ರವಾಸಕ್ಕೆ ಮೂಲ ಪ್ರೇರಣೆಯಾಗಿತ್ತು. ಆಹಾರ ಮತ್ತು ವಸತಿಗಾಗಿ ಅನಾದಿ ಕಾಲದ ಮಾನವ ಪ್ರವಾಸ ಹೋಗುತ್ತಿದ್ದನು. ಅನಂತರ ವ್ಯಾಪಾರ ಮತ್ತು ಧಾರ್ಮಿಕ ಉದ್ದೇಶಕ್ಕಾಗಿ ಪ್ರವಾಸ ಕೈಗೊಳ್ಳುತ್ತಿದ್ದನು. ಇಂದು ಮೋಜಿಗಾಗಿ ಪ್ರವಾಸ ಮಾಡಲಾಗುತ್ತಿದೆ. 19ನೇ ಶತಮಾನದಿಂದ ಈಚೆಗೆ ಆಧುನಿಕ ಪ್ರವಾಸೋದ್ಯಮವು ಬೆಳೆದು ಬಂದ ಬಗೆಯನ್ನು 3 ಭಾಗಗಳಾಗಿ ವಿಂಗಡಿಸಿ ಅಧ್ಯಯನ ಮಾಡಬಹುದು.

1. ಪ್ರಾಚೀನ ಕಾಲ
2. ಮಧ್ಯಕಾಲೀನ ಕಾಲ
3. ಆಧುನಿಕ ಕಾಲ

## 1. ಪ್ರಾಚೀನ ಕಾಲ

ಶಿಲಾಯುಗದ ಮಾನವ ನೆಲೆಗಳು ಜಾವ, ಚೀನ, ಪೂರ್ವ ಆಫ್ರಿಕಾದಲ್ಲಿ ಕಂಡುಬಂದಿವೆ. ಇದರಿಂದ ಆಹಾರ ಮತ್ತು ವಸತಿಗೆ ಮಾನವ ಪ್ರಯಾಣ ಮಾಡುತ್ತಿದ್ದನೆಂದು ವೇದ್ಯವಾಗುತ್ತದೆ. ಆಹಾರ ಮತ್ತು ವಸತಿಗಾಗಿ ಶಿಲಾಯುಗ ಮಾನವನ ವಲಸೆಯನ್ನೇ ಅತ್ಯಂತ ಪುರಾತನ ಪ್ರಯಾಣ ಎನ್ನಬಹುದು. ಆದರೆ ವಲಸೆಯನ್ನು ಪ್ರವಾಸ ಎಂದು ಕರೆಯಲಾಗುವುದಿಲ್ಲ. ಪ್ರವಾಸೋದ್ಯಮ ಉಗಮವನ್ನು ಕ್ರಿ.ಶ. 4000 ಕ್ಕೆ ಕೊಂಡೊಯ್ಯಬಹುದು.[5] ಆಗ ಸುಮೆರಿಯನ್ನರು ನಾಣ್ಯ ಮತ್ತು ಚಕ್ರ ಅನ್ವೇಷಿಸಿದರು. ಈ ಹಣದ ಬಳಕೆ ಮತ್ತು ಚಕ್ರ ಸಂಶೋಧನೆ ವಾಣಿಜ್ಯ ಹಾಗೂ ಪ್ರವಾಸ ಚಟುವಟಿಕೆಯನ್ನು ಚುರುಕುಗೊಳಿಸಿತು. ಶುಲ್ಗಿ ಎಂಬ ಸುಮೇರಿಯನ್ ರಾಜ ಪ್ರವಾಸಿಗಳಿಗೆ ವಿಶ್ರಾಂತಿ ಗೃಹಗಳನ್ನು ನಿರ್ಮಿಸಿದನಲ್ಲದೆ ಆಗಾಧ ರಸ್ತೆಜಾಲವನ್ನು ನಿರ್ಮಿಸಿದನು. ಅಂದಿನ ಪ್ರಯಾಣದ ಮುಖ್ಯ ಉದ್ದೇಶ, ಅಧ್ಯಯನ ಹಾಗೂ ತೀರ್ಥಯಾತ್ರೆಯಾಗಿತ್ತು.[6]

ಕ್ರಿ.ಪೂ. 3000ರಲ್ಲಿ ಸಿಂಧೂ ಬಯಲಿನ ಜನರು ಈಜಿಪ್ಟಿನ ಕಾರ್ನಕ್, ಗಿಜಾ, ಮೆಂಫಿಸ್, ಬ್ಯಾಬಿಲೋನ್ ಮತ್ತು ಮೆಸಪೊಟೇಮಿಯಾದ ಸುಮೇರಿಯನ್, ಊರ್, ಕಿಷ್, ನಿಪ್ಪೂರ್ ನಗರಗಳೊಂದಿಗೆ ವಾಣಿಜ್ಯ ಸಂಬಂಧ ಹೊಂದಿದ್ದರು. ಅಲ್ಲಿ ಸಿಂಧೂ ಜನರ ಮುದ್ರೆಗಳು ದೊರೆತಿದೆ. ಇದರಿಂದ ಸಿಂಧೂ ಜನ ಹಡಗುಗಳಲ್ಲಿ ದೂರದ ನಾಡುಗಳಲ್ಲಿ ಸಂಚರಿಸುತ್ತಿದ್ದರೆಂದು ತಿಳಿಯುತ್ತದೆ. ಕ್ರಿ.ಪೂ. 5000ರಲ್ಲೇ ಈಜಿಪ್ಟಿಯನ್ನರು ನೌಕಾಯಾನ ಅನ್ವೇಷಿಸಿ ನೈಲ್‌ನದಿ ಪ್ರಯಾಣವನ್ನು ಪರಿಚಯಿಸಿದರು. ಈಜಿಪ್ಟ್‌ನಲ್ಲಿ ಪಿರಮಿಡ್ಡುಗಳು ನಿರ್ಮಾಣವಾದ ಮೇಲೆ ಅವನ್ನು ನೋಡಲು ಏಷ್ಯಾ ಮೈನರ್, ಗ್ರೀಸ್, ರೋಮ್‌ನಿಂದ ಪ್ರವಾಸಿಗರು ಬರುತ್ತಿದ್ದರು. ಗ್ರೀಕ್, ಸುಮೇರಿಯನ್ ನಗರಗಳಲ್ಲಿ ಸುರಕ್ಷಿತ ರಸ್ತೆಗಳ ನಿರ್ಮಾಣ ಆರಂಭವಾಯಿತು.

ಕ್ರಿ.ಪೂ. 600ರಲ್ಲಿ ಪರ್ಶಿಯನ್‌ರು ಭಾರತಕ್ಕೆ ಬರತೊಡಗಿದರು. ಇಲ್ಲಿಗೆ ಬಂದ ರಾಜದೂತರು, ರಾಯಭಾರಿಗಳು, ಗೂಢಾಚಾರರು, ವರ್ತಕರು ಅನೇಕ ಪ್ರವಾಸ ಕಥನಗಳನ್ನು ನೀಡಿದರು. ಇತಿಹಾಸ ಪಿತಾಮಹ ಹೆರೊಡೋಟಸ್, ಪ್ಲೇಟೋ, ಅರಿಸ್ಟಾಟಲ್, ಪೈಥಗೋರಸ್, ಥುಸಿಡೈಡಿಸ್‌ರು ಏಷ್ಯಾಮೈನರ್‌ನಲ್ಲಿ ಸಂಚರಿಸಿ ಪ್ರವಾಸ ಮಾಹಿತಿ ನೀಡಿದ್ದಾರೆ. ರೋಮನ್ನರು ವಾಣಿಜ್ಯ ಉದ್ದೇಶಕ್ಕಾಗಿ ಪ್ರಪಂಚದ ನಾನಾಕಡೆ ಸಂಚರಿಸಿದ್ದರು. ಸಿರಿಯಾದ ಮಾರ್ಗವಾಗಿ

ಗ್ರೀಸ್‌ನಿಂದ ಚೀನಾವರೆಗೆ ರಸ್ತೆಗಳಿದ್ದ ಬಗ್ಗೆ ಜೆನೊಫನ್ ತನ್ನ ಅನಾಬಾಸಿಸ್ ಎಂಬ ಕೃತಿಯಲ್ಲಿ ತಿಳಿಸಿದ್ದಾನೆ. ಗ್ರೀಕ್-ರೋಮನ್ ವರ್ತಕರು, ರಾಯಭಾರಿಗಳು ಈಜಿಪ್ಟಿನ ಪಿರಮಿಡ್ಡುಗಳು, ಸ್ಪಿಂಕ್ಸ್ ದೇವಾಲಯಗಳು, ಬ್ಯಾಬಿಲೋನಿಯಾದ ಜಿಗ್ಗೂರಾತ್‌ಗಳನ್ನು ನೋಡಲು ಸಂದರ್ಶಿಸುತ್ತಿದ್ದರೆಂದು ಪ್ಲುಟಾರ್ಕ್‌ನು ಪ್ಯಾರಲಲ್ ಲೈವ್ ಕೃತಿಯಲ್ಲಿ ತಿಳಿಸುತ್ತಾರೆ. ಭಾರತಕ್ಕೆ ರೋಮನ್ ವರ್ತಕರು ಬರುತ್ತಿದ್ದರೆಂದು ಇದಕ್ಕೆ ಸಾಕ್ಷಿಯಾಗಿ ಚಂದ್ರವಳ್ಳಿ, ಅರಿಕಮೇಡುಗಳಲ್ಲಿ ರೋಮನ್ ನಾಣ್ಯಗಳು ದೊರೆತಿವೆ. ಕ್ರಿ.ಪೂ. 3ನೇ ಶತಮಾನದಲ್ಲಿ ರೋಮನ್ನರ ಪ್ರವಾಸ ಮಾಹಿತಿ ಪುಸ್ತಕವನ್ನು ಪರಿಚಯಿಸಿದರು.

ಕ್ರಿ.ಪೂ. 776ರಲ್ಲಿ ಆರಂಭವಾದ ಒಲಿಂಪಿಕ್ ಕ್ರೀಡೆಗಳು ಗ್ರೀಸ್ ಪ್ರವಾಸಿಗಳನ್ನು ಆಕರ್ಷಿಸಿತು. ಜೊತೆಗೆ ಅಥೆನ್ಸ್ ಸ್ಪಾರ್ಟಾನಗರ ರಾಜ್ಯಗಳ ಸೊಬಗು, ಹಬ್ಬ ಉತ್ಸವಗಳು, ಅಥೆನ್ಸ್‌ನ ಪಾರ್ಥೆನಾನ್ ದೇವಾಲಯ, ರಂಗಭೂಮಿ, ಔಷಧೀಯ ಸ್ನಾನಗೃಹಗಳು, ಸಮುದ್ರದ ವಿಶ್ರಾಂತಿಧಾಮಗಳು ಮುಖ್ಯ ಪ್ರವಾಸಿ ಆಕರ್ಷಕಣೆಗಳಾಗಿದ್ದವು. ಇಲ್ಲಿಗೆ ಬಂದವರು ಏಷ್ಯಾಮೈನರ್, ಈಜಿಪ್ಟ್‌ಗಳಿಗೆ ಭೇಟಿ ನೀಡುತ್ತಿದ್ದರು. ಡೆಲ್ಫಿಯ ಒರೇಕಲ್, ಎಪಿಕೊರಸ್ಸಿನ ಎಸ್ಕ್ಲೆಪಿಯಡ್ಸ್‌ಗೆ ಭೇಟಿ ಕೊಡುತ್ತಿದ್ದರು. ಈ ಬಗ್ಗೆ ಹೆರೊಡೋಟಸ್ ಪ್ರವಾಸವನ್ನು ಕುರಿತು ಗ್ರಂಥ ರಚಿಸಿದ್ದಾನೆ. ಗ್ರೀಕರು ಇಂತಹ ಪ್ರವಾಸಿಗಳಿಗೆ ಹೋಟೆಲ್‌ಗಳಲ್ಲಿ ವಸತಿ ಒದಗಿಸುತ್ತಿದ್ದರು. ಹಣ ಕೊಟ್ಟವರನ್ನು ಹಡಗುಗಳಲ್ಲಿ ಕೊಂಡೊಯ್ಯುತ್ತಿದ್ದರು. ಪ್ರವಾಸಿಗರು ಬೇಸಿಗೆಯಲ್ಲಿ ನೀರಿನ ಚಿಲುಮೆಗಳುಳ್ಳ ಸ್ಪಾಗಳಿಗೆ ಭೇಟಿ ನೀಡುತ್ತಿದ್ದರು.

**ಮೋಜು ಪ್ರವಾಸಗಳು:** ರೋಮನ್ ಸಾಮ್ರಾಜ್ಯದಲ್ಲಿ ಪ್ರವಾಸೋದ್ಯಮಕ್ಕೆ ವಿಶೇಷ ಪ್ರೋತ್ಸಾಹ ದೊರೆಯಿತು. ಕಾರಣ ವಿಶಾಲವಾದ ರೋಮನ್ ಸಾಮ್ರಾಜ್ಯದಲ್ಲಿ ರಾಜಕೀಯ, ಆರ್ಥಿಕ ಸ್ಥಿರತೆ ನೆಲೆಸಲು ಸಾಮ್ರಾಟರು ಅಗಾಧ ರಸ್ತೆಜಾಲ ನಿರ್ಮಿಸಿದುದು ಕಾರಣವಾಗಿತ್ತು. ಟ್ರಾಜನ್ ಎಂಬ ರಾಜ 50,000 ಮೈಲಿ ಉದ್ದದ ರಸ್ತೆ ನಿರ್ಮಿಸಿದನು. ಸಮುದ್ರ ಪ್ರಯಾಣ ಸುರಕ್ಷಿತವಾಗಿತ್ತು. ಪ್ರವಾಸಿಗಳಿಗೆ, ರಸ್ತೆಗಳಿಗೆ ಭದ್ರತೆ ಕಲ್ಪಿಸಲಾಗಿತ್ತು. ಇವುಗಳ ಪರಿಣಾಮವಾಗಿ ಅಲ್ಲಿ ಮೋಜು ಪ್ರವಾಸಗಳು ಹುಟ್ಟಿಕೊಂಡವು. ನೇಪಲ್ಸ್, ಸಿಸಿಲಿ, ರೋಮ್, ನೈಸ್, ಟ್ರಾಯ್ ನಗರಗಳು ಪ್ರವಾಸಿ ಕೇಂದ್ರಗಳಾಗಿ ಬೆಳೆದವು. ನೇಪಲ್ಸ್‌ನ ಕಡಲತೀರದ ಬಾಹ್ಯ ವಿಹಾರಧಾಮವಾಗಿ ಬೆಳೆಯಿತು. ಇಟಲಿಯ ಸಮುದ್ರತೀರಗಳು ಮನೋರಂಜನೆ ಕೇಂದ್ರಗಳಾಗಿ ಬೆಳೆದಿದ್ದರಿಂದ, ನೈಸರ್ಗಿಕ ಸೊಬಗು ತುಂಬಿದ್ದರಿಂದ ಅಲ್ಲಿ ಸ್ಪಾಗಳು ಹುಟ್ಟಿಕೊಂಡವು. ಸ್ಪಾಗಳಿಂದ ಮೋಜು ಪ್ರವಾಸ ಜನಪ್ರಿಯವಾಯಿತು. ಈಜಿಪ್ಟ್ ಮತ್ತು ಕಪ್ಪು ಸಮುದ್ರ ತೀರಗಳಲ್ಲಿ ಸ್ಪಾಗಳು ಹುಟ್ಟಿಕೊಂಡವು.

**ಸ್ಪಾಗಳು:** ವೈದ್ಯಕೀಯ ಸ್ನಾನಗಳುಳ್ಳ ಸಮುದ್ರತೀರದ ವಿಶ್ರಾಂತಿಧಾಮಗಳೇ ಸ್ಪಾಗಳು. ಇಲ್ಲಿ ಪ್ರವಾಸಿಗಳಿಗೆ ಖನಿಜಯುಕ್ತ ನೀರಿನ ಸ್ನಾನ ವ್ಯವಸ್ಥೆ ಇದ್ದಿತು. ಆ ನೀರಿಗೆ ಔಷಧೀಯ ಗುಣವಿದ್ದಿತು. ಇಂತಹ ಸ್ಪಾಗಳಲ್ಲಿ ಸ್ನಾನದ ಜೊತೆಗೆ ಮನೋರಂಜನೆ, ಖುಷಿ ಒದಗಿಸಲಾಗುತ್ತಿತ್ತು. Spa Resorts ಬೆಳೆದವು. ಅವು ಸಹ ಮೋಜು ಪ್ರವಾಸ ಕೇಂದ್ರಗಳಾಗಿದ್ದವು. ಅವು ಇಂಗ್ಲೆಂಡಿನ ಬ್ರೈಟನ್, ಹೆಮ್ಸ್‌ಗೇಟ್, ವಾರ್ಟಿಂಗ್ ಹೇಸಿಟಂಗ್ಸ್ ಬ್ಲಾಕ್‌ಪೂಲ್‌ಗಳಲ್ಲಿ ಸ್ಥಾಪನೆಯಾಗಿದ್ದವು. ಖನಿಜಯುಕ್ತ ಜಲವನ್ನು ಸೇವಿಸಿದರೆ ಇಲ್ಲವೆ ಅದರಲ್ಲಿ ಸ್ನಾನ ಮಾಡಿದರೆ ರೋಗಗಳಿಂದ ಮುಕ್ತರಾಗಬಹುದೆಂಬ ನಂಬಿಕೆಯನ್ನು ಸ್ಪಾವು ತನ್ನ ಮೂಲದಲ್ಲಿ ಹೊಂದಿದೆ. ಸ್ಪಾಗಳಿಂದ ಸಮುದ್ರ ಸ್ನಾನ ಜನಪ್ರಿಯತೆಗಳಿಸಿತು. ಅನಂತರ ಸ್ಪಾಗಿಂತ ಸಮುದ್ರಸ್ನಾನ ಹೆಚ್ಚು ಪ್ರಯೋಜನಕಾರಿ ಎಂದು ಭಾವಿಸಲಾಯಿತು. ಅನಂತರದ ಕಾಲದಲ್ಲಿ Spaಗಳ ಸ್ಥಾನವನ್ನು ಸಮುದ್ರ ಸ್ನಾನ ಹಾಗೂ Inland spaಗಳು ಅಕ್ರಮಿಸಿಕೊಂಡವು. ಪ್ರವಾಸೋದ್ಯಮ ಬೆಳವಣಿಗೆ ಇತಿಹಾಸದಲ್ಲಿ ಸ್ಪಾಗಳು ಗಣ್ಯಸ್ಥಾನ ಪಡೆದುಕೊಂಡಿವೆ. ಮೂಲತಃ ಸ್ಪಾ ಎಂಬುದು ಬೆಲ್ಜಿಯಂನ ಒಂದು ಸ್ಥಳ. ಇಲ್ಲಿ ಬಿಸಿ ನೀರಿನ ಚಿಲುಮೆಗಳು ಇದ್ದವು. ಅದರ ಸ್ನಾನದಿಂದ ಚರ್ಮರೋಗಗಳು ಗುಣಮುಖವಾಗುತ್ತಿದ್ದವು. ಈ ಸ್ಥಳದಿಂದಲೇ ಅನಂತರ ಸ್ಪಾಗಳು ಬೆಳೆದವು. ಹೀಗೆ ರೋಮನ್ ಸಾಮ್ರಾಜ್ಯ ವೈಭವವಾಗಿ ಬಾಳಿ ಪ್ರವಾಸಕ್ಕೆ ಉತ್ತೇಜನ ನೀಡಿ ಮೋಜು ಪ್ರವಾಸಗಳನ್ನು ಬೆಳೆಸಿತು. ಲಿಕೊರಿಷ್ ಹಾಗೂ ಕೆರ್ಷೇ ಹೇಳಿರುವಂತೆ "19ನೇ ಶತಮಾನದಲ್ಲಿ ಇಡೀ ಯೂರೋಪ್ ಕಂಡ ಪ್ರವಾಸಗಳಿಗಿಂತ ಹೆಚ್ಚು ಮನೋರಂಜನೆಯ ಪ್ರವಾಸ ಕಾರ್ಯಕ್ರಮ ರೋಮನ್ ಸಾಮ್ರಾಜ್ಯದ ಅಡಿಯಲ್ಲಿ ನಡೆಯಿತು."

**ವ್ಯಾಪಾರಿ ಪ್ರವಾಸಗಳು:** ಪ್ರಾಚೀನ ಕಾಲದಲ್ಲಿ ವ್ಯಾಪಾರವು ಪ್ರವಾಸಕ್ಕೆ ಮೂಲ ಪ್ರೇರಣೆಯಾಗಿತ್ತು. ರೋಮನ್ ಸಾಮ್ರಾಜ್ಯ ಕಾಲದಲ್ಲಿ ಯೂರೋಪಿನಲ್ಲಿ ವ್ಯಾಪಾರ ಪ್ರವಾಸೋದ್ಯಮ ನಿರಂತರವಾಗಿ ಬೆಳೆದಿತ್ತು. ಈಜಿಪ್ಟ್, ಬ್ಯಾಬಿಲೋನ್, ಅರಬ್, ಚೀನಿ, ಸಿಂಧೂ ನಾಗರಿಕತೆಗಳ ನಡುವೆ ಪರಸ್ಪರ ವ್ಯಾಪಾರ ಸಂಪರ್ಕಗಳು ಏರ್ಪಟ್ಟಿದ್ದವು. ಪಶ್ಚಿಮ ಏಷ್ಯಾ ನಗರಗಳಲ್ಲಿ ಸಿಂಧೂ ಜನರ ಮುದ್ರೆಗಳು ದೊರೆತಿವೆ. ದೂರದ ನಾಡುಗಳಿಗೆ ವ್ಯಾಪಾರಕ್ಕಾಗಿ ಪ್ರವಾಸಗಳು ನಡೆಯುತ್ತಿದ್ದವೆಂಬುದಕ್ಕೆ ಇವು ಸಾಕ್ಷಿಯಾಗಿವೆ. ವ್ಯಾಪಾರಿ ವರ್ತಕರು ಹಡಗುಗಳಲ್ಲಿ ಕಾಲ್ನಡಿಗೆಯಲ್ಲಿ ಒಂಟೆಗಳ ಮೇಲೆ, ಕುದುರೆಗಳ ಮೇಲೆ, ಎತ್ತಿನ ಗಾಡಿಗಳಲ್ಲಿ ಸಂಚರಿಸುತ್ತಿದ್ದರು. ಅವರು ತಂಗಲು ಕ್ಯಾರವಾನ್ ಟೆಂಟ್‌ಹೌಸ್‌ಗಳಲ್ಲಿ ವ್ಯವಸ್ಥೆ ಇತ್ತೆಂದು ತಿಳಿದುಬಂದಿದೆ.

## 2. ಮಧ್ಯಯುಗ

ಕ್ರಿ.ಶ. 476ರಲ್ಲಿ ರೋಮನ್ ಸಾಮ್ರಾಜ್ಯ ಪತನದ ನಂತರ ಮೋಜು ಪ್ರವಾಸ ಕುಂಠಿತಗೊಂಡಿತು. ಅಂದೇ ಮಧ್ಯಯುಗ ಆರಂಭವಾಯಿತು. ಮಧ್ಯಯುಗ ಧರ್ಮಶ್ರದ್ಧೆ ಕಾಲವಾಗಿದ್ದು ಮತಧರ್ಮವೇ ಜೀವನವನ್ನು ಆಕ್ರಮಿಸಿಕೊಂಡಿತು. ಈ ಅಂಧಕಾರಯುಗದಲ್ಲಿ ಪ್ರವಾಸ ಅಪಾಯಕಾರಿಯೂ, ಕಷ್ಟದಾಯಕವೂ ಆಗಿತ್ತು. ಟ್ರಾವೆಲ್ ಎಂದರೆ ಶ್ರಮ ಎಂಬ ಭಾವನೆ ಬೆಳೆಯಿತು. ಮಧ್ಯಯುಗದಲ್ಲಿ ಹೆಚ್ಚಾಗಿ ಧಾರ್ಮಿಕ ಪ್ರವಾಸಗಳು ನಡೆಯುತ್ತಿದ್ದವು. ಧಾರ್ಮಿಕ ಯುದ್ಧಗಳಾದ ಕ್ರುಸೇಡ್‌ಗಳು ಹಾಗೂ ಇಸ್ಲಾಮಿನ ನಾಯಕತ್ವದ ಜಿಹಾದ್‌ಗಳು ಜನರನ್ನು ಇತರ ದೇಶಗಳ ಸಂಪರ್ಕಕ್ಕೆ ತಂದವು. ಧರ್ಮ ಪ್ರಚಾರದಿಂದ ಜನ ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಂಚರಿಸುತ್ತಿದ್ದರು. ರೋಮನ್ ಸಾಮ್ರಾಜ್ಯದಲ್ಲಿ ಕ್ರೈಸ್ತಧರ್ಮ ಪ್ರಚಾರಗೊಂಡ ಮೇಲೆ ಕ್ರೈಸ್ತರ ಕ್ರಿಸ್ತನ ಪವಿತ್ರ ನಾಡುಗಳಾದ ಜೆರುಸಲೇಮ್, ಗ್ಯಾಲೇಷಿಯಾ, ಬೆತ್ಲೆಹೆಮ್, ಜೂಡಿಯಾ, ಕಂಪೊಸ್ತೆಲ್ಲಿ, ರೋಮ್, ಇಸ್ರೇಲಿನ ಪವಿತ್ರ ಸ್ಥಳಗಳಿಗೆ ಭೇಟಿ ನೀಡುತ್ತಿದ್ದರು. ಚರ್ಚುಗಳು, ಮಠವಾಸಿ ಪಾದ್ರಿಗಳ ನಿವಾಸಗಳು ಇವೆಲ್ಲವು ಆಶ್ರಯ ತಾಣಗಳಾಗಿ ಪ್ರವಾಸಿಗಳು ಸೇರತೊಡಗಿದರು. ಮುಸ್ಲಿಂರು ಇಸ್ಲಾಂ ಧಾರ್ಮಿಕ ಕೇಂದ್ರಗಳಾದ ಬಾಗ್ದಾದ್, ಮೆಕ್ಕಾ, ಮದೀನಾಗಳಿಗೆ ಭೇಟಿ ನೀಡುತ್ತಿದ್ದರು. ಅವರನ್ನು ಹಜ್ ಯಾತ್ರಿಕರೆಂದು ಕರೆಯುತ್ತಿದ್ದರು.

ಸ್ಪೈನ್, ಈಜಿಪ್ಟ್, ಮಧ್ಯ ಏಷ್ಯಾ, ಭಾರತ, ಇಡೋನೇಷ್ಯಾ, ಮಲೇಶಿಯಾಗಳಿಂದ ಹಜ್ ಯಾತ್ರಿಗಳು ಬರುತ್ತಿದ್ದರು. ಮುಸ್ಲಿಂ ಸಂತರ ದರ್ಗಾಗಳಿಗೆ ಭೇಟಿ ನೀಡುತ್ತಿದ್ದರು. ಉದಾ: ಆಗ್ರದ ಶೇಕ್ ಸಲೀಂ ಚಿಸ್ತಿ ದರ್ಗಾ, ಗುಲ್ಬರ್ಗದ ಬಂದೇನಾವಾಜ್ ದರ್ಗಾ, ಹಿಂದೂಗಳು ಕಾಶಿ, ಬದರಿ, ರಾಮೇಶ್ವರಂ, ತಿರುಪತಿ, ಕೇದಾರಗಳಿಗೆ ಭೇಟಿ ನೀಡುತ್ತಿದ್ದರು. ಬೌದ್ಧ ಧರ್ಮದಿಂದ ಆಕರ್ಷಿತರಾದ ಚೀನಿ ಬೌದ್ಧ ಯಾತ್ರಿಕರು ಭಾರತಕ್ಕೆ ಬರುತ್ತಿದ್ದರು. ಉದಾ: ಫಾಹಿಯಾನ್, ಹ್ಯೂಯನ್‌ತ್ಸಾಂಗ್, ಇತ್ಸಿಂಗ್‌ರು. ಮಧ್ಯಯುಗದ ಖ್ಯಾತ ಪ್ರವಾಸಿ ಮಾರ್ಕೋಪೋಲೋ.[7] ಈತ ಇಟಲಿಯ ವೆನಿಸ್ ನಗರದವನು. ಚೀನಾ, ಭಾರತಗಳಲ್ಲಿ ಸಂಚರಿಸಿ Travel of Marcopolo ಎಂಬ ಪ್ರವಾಸಿ ಕಥನ ರಚಿಸಿದನು. ಮಧ್ಯಯುಗದ ಇನ್ನೊಬ್ಬ ಪ್ರವಾಸಿ ಇಬನ್‌ಬಟೂಟ, ಕಿತಾಬ್–ಉಲ್–ರಹ್ಲೆ ಎಂಬ ಕೃತಿ ರಚಿಸಿದನು. ಈತ ಆಫ್ರಿಕದವನು. ಪರ್ಶಿಯಾ, ಭಾರತ, ಸಿಲೋನ್, ಮಾಲ್ಡೀವ್ಸ್‌ಗಳಲ್ಲಿ ಸಂಚರಿಸಿದನು. ಚೀನಿಯರು ನಾವಿಕರ ದಿಕ್ಸೂಚಿ ಕಂಡುಹಿಡಿದ ಮೇಲೆ ಹಡಗು ಪ್ರಯಾಣ ಸುಲಭವಾಯಿತು. ಸಿಡಿಮದ್ದು ನಾವಿಕರಿಗೆ ರಕ್ಷಣೆ ಒದಗಿಸಿತು. ಮಧ್ಯಯುಗದ ಅಂತ್ಯದಲ್ಲಿ ಧರ್ಮಶ್ರದ್ಧೆ ಯುಗದಲ್ಲಿ ಯೂರೋಪಿನ ಯಾತ್ರಾರ್ಥಿಗಳು ಪ್ರಮುಖ

ಚರ್ಚುಗಳಿಗೆ ಪ್ರವಾಸ ಕೈಗೊಂಡಿದ್ದರು. ಕ್ರೈಸ್ತ ಮತ ಪ್ರಚಾರದಿಂದ ಧಾರ್ಮಿಕ ಪ್ರವಾಸಗಳು ಹೆಚ್ಚಿನ ರಂಗು ಪಡೆದವು. ಆಗ ಜನರನ್ನು ಒಂದುಗೂಡಿಸುವ ಶಕ್ತಿ ಧಾರ್ಮಿಕ ಪ್ರವಾಸಕ್ಕೆ ಇದ್ದಿತು. 18ನೇ ಶತಮಾನದಲ್ಲಿ ಯೂರೋಪಿನಲ್ಲಿ ಉಂಟಾದ ಕೈಗಾರಿಕ ಕ್ರಾಂತಿ ಸಾರಿಗೆ ಮತ್ತು ಸಂಪರ್ಕದಲ್ಲಿ ಸಾಧಿಸಿದ ಸಾಧನೆ ಪ್ರವಾಸೋದ್ಯಮವನ್ನು ಮತ್ತಷ್ಟೂ ಉತ್ತೇಜಿಸಿತು.[8]

**ರೇಷ್ಮೆ ಮಾರ್ಗ:** ಮಧ್ಯಯುಗದಲ್ಲಿ ಬೃಹತ್ ಪ್ರಮಾಣದಲ್ಲಿ ಪ್ರವಾಸಿಗಳು ಸಂಚರಿಸುತ್ತಿದ್ದ ಹೆದ್ದಾರಿಯಿದು. ಇದು ಇಟಲಿಯ ವೆನಿಸ್‌ನಿಂದ ಆರಂಭವಾಗಿ ಇಸ್ತಾಂಬುಲ್, ಬಾಗ್ದಾದ್, ಬುಖಾರ, ಸಮರಖಂಡದ ಮೂಲಕ ಹಾದು ಚೀನಾದ ಪೀಕಿಂಗ್‌ವರೆಗೆ ಸುಮಾರು 12,000 ಮೈಲಿ ಉದ್ದ ಹಬ್ಬಿತ್ತು. ಈ ಮಾರ್ಗದಲ್ಲಿ ಚೀನಾದಿಂದ ರೇಷ್ಮೆ, ಪಿಂಗಾಣಿ ಪಾತ್ರೆಗಳು–ರೋಮಿಗೂ, ಯೂರೋಪಿನಿಂದ ಚಿನ್ನ, ಬೆಳ್ಳಿ, ಉಣ್ಣೆ ಉತ್ಪಾದನೆಗಳು ಚೀನಾಗೆ ರವಾನೆಯಾಗುತ್ತಿದ್ದವು. ಈ ಮಾರ್ಗದಲ್ಲಿ ಸಂಚರಿಸುತ್ತಿದ್ದ ಪ್ರವಾಸಿಗಳು ಚೀನಾದ ಮಹಾಗೋಡೆ ಮತ್ತು ಅರಮನೆಗಳನ್ನು ಸಂದರ್ಶಿಸುತ್ತಿದ್ದರು. ಪ್ರವಾಸಿ ಮಾರ್ಕೋಪೋಲೋ ಸಂಚರಿಸಿದ ಮಾರ್ಗವಿದು. ಕ್ರಿ.ಶ.13ನೇ ಶತಮಾನದಲ್ಲಿ ರೇಷ್ಮೆ ಮಾರ್ಗದ ಪ್ರವಾಸಗಳು ಕುಂಠಿತಗೊಂಡಿತು.

ಫ್ರಾನ್ಸಿನ ಪಿಯರ ಸೆಲ್ಸಸ್ ಎಂಬಾತನು ಸ್ವಿಟ್ಜರ್‌ಲ್ಯಾಂಡ್, ಇಟಲಿ, ಜರ್ಮನಿಗಳಲ್ಲಿ ಸಂಚರಿಸಿ ಅಲ್ಲಿನ ಗುಡ್ಡಗಾಡುಗಳಲ್ಲಿ ಖನಿಜಯುಕ್ತ ನೀರಿನ ಸ್ನಾನಗಳ ಸ್ಪಾಗಳ ಬಳಕೆಯನ್ನು ತಿಳಿಸಿದನು. ದಕ್ಷಿಣ ಫ್ರಾನ್ಸಿನ ಲೊರ್ಡೆ ಎಂಬಲ್ಲಿ ಇಂತಹ ಸ್ಪಾ ವಿಶ್ರಾಂತಿಧಾಮ ಖ್ಯಾತಿಗೆ ಬಂದಿತು.

ಮಧ್ಯಯುಗದ ಪ್ರವಾಸಿಗಳು ಕುದುರೆ, ಒಂಟೆ, ಎತ್ತಿನ ಗಾಡಿಗಳ ಮೇಲೆ ಪ್ರಯಾಣಿಸುತ್ತಿದ್ದು ಅವರಿಗೆ ಧರ್ಮಛತ್ರಗಳಲ್ಲಿ, ಸಮುದಾಯ ಗೃಹಗಳಲ್ಲಿ, ಮಠಗಳಲ್ಲಿ, ಕೋಟೆಗಳಲ್ಲಿ ವಸತಿ, ಊಟ ವ್ಯವಸ್ಥೆ ಕಲ್ಪಿಸಲಾಗಿತು. ಒಟ್ಟಾರೆ ಮಧ್ಯಯುಗ ಪ್ರವಾಸಗಳು ಸಂತೋಷದಾಯಕವಾಗಿರಲಿಲ್ಲ.

### 3. ಆಧುನಿಕ ಕಾಲ

**ಪುನರುಜ್ಜೀವನ ಕಾಲ:** ಕ್ರಿ.ಶ. 1453ರಲ್ಲಿ ಆಟೋಮನ್ ಟರ್ಕರು ಕಾನ್‌ಸ್ಟ್ಯಾಂಟಿನೋಪಲ್ ನಗರವನ್ನು ಮುತ್ತಿ ಅಲ್ಲಿನ ಭೂ ಮಾರ್ಗ ಮುಚ್ಚಿದರು. ಇದು ಹೊಸ ಭೂ ಹಾಗೂ ಜಲಮಾರ್ಗಗಳ ಅನ್ವೇಷಣೆಗೆ ಕಾರಣವಾಯಿತು. ಬಾರ್ಥಲೋಮಿಯೋ ಡಯಾಜ್ ಆಫ್ರಿಕವನ್ನು, ವಾಸ್ಕೋಡಿಗಾಮನು ಭಾರತವನ್ನು, ಕೊಲಂಬಸ್‌ನು ಹೊಸ ಜಗತ್ತಾದ ಅಮೇರಿಕಾವನ್ನು ಮೆಗಲಾನ್‌ನು ದಕ್ಷಿಣ ಮತ್ತು ಉತ್ತರ ಅಮೇರಿಕಾಗಳನ್ನು ಕಂಡುಹಿಡಿದರು. ಅವರನ್ನು ಅನ್ವೇಷಣಾ

ಪ್ರವಾಸಿಗಳೆಂದು ಕರೆಯಲಾಯಿತು. ಈ ಹೊಸ ಮಾರ್ಗಗಳು ವ್ಯಾಪಾರ ವಾಣಿಜ್ಯವನ್ನು ವಿಸ್ತರಿಸಿದವು. ವಾಣಿಜ್ಯ ವಿಸ್ತರಣೆ ಪ್ರವಾಸೋದ್ಯಮವನ್ನು ವಿಸ್ತರಿಸಿತು. ಬ್ರಿಟಿಷ್, ಡಚ್, ಫ್ರೆಂಚ್, ಈಸ್ಟ್ ಇಂಡಿಯಾ ಕಂಪನಿಗಳು ಹುಟ್ಟಿ ಬೆಳೆದವು. ಹೊಸ ಅನ್ವೇಷಣೆಗಳು ಹೊಸ ಜನಾಂಗ, ಸಂಸ್ಕೃತಿಗಳನ್ನು ಪರಿಚಯಿಸಿದವು. ಇದರಿಂದ ಮಾನವನಲ್ಲಿ ಹೊಸ ನಾಡುಗಳ ಪರಿಚಯ ಹೊಂದಬೇಕೆಂಬ ಜಿಜ್ಞಾಸೆ ಮೂಡಿಸಿತು. ಇದೇ ಪುನರುಜ್ಜೀವನದ ಹುಟ್ಟು ಪುನರುಜ್ಜೀವನ ಮಾನವನಲ್ಲಿ ಅನ್ವೇಷಣಾ ಗುಣ, ಚಿಕಿತ್ಸಕ ಗುಣ ಬೆಳೆಸಿತು. ಹೊಸ ಸಂಸ್ಕೃತಿಗಳ ಸಂಪರ್ಕ ಬೆಳೆಸಿತು. ಹೀಗಾಗಿ ಪ್ರವಾಸ ಹೋಗಲು ಜನ ಕುತೂಹಲಭರಿತರಾದರು. ವಿದ್ಯಾಭ್ಯಾಸಕ್ಕಾಗಿ ವಿದ್ಯಾರ್ಥಿಗಳು ಅವರ ಜೊತೆ ಶಿಕ್ಷಕರು ಪ್ರವಾಸದಲ್ಲಿ ತೊಡಗಿದರು.

ಪುನರುಜ್ಜೀವನ, ಮತ ಸುಧಾರಣೆ, ಭೌಗೋಳಿಕ ಅನ್ವೇಷಣೆಗಳಿಂದ ವಾಣಿಜ್ಯ ವಿಸ್ತರಣೆ, ಸಾರಿಗೆ ಸೌಲಭ್ಯಗಳ ವಿಸ್ತರಣೆಗೊಂಡು ಉತ್ಸಾಹಿಗಳು ಹೊಸ ನಾಡುಗಳಿಗೆ ಹೊರಡಲು ಮುಂದಾದರು. ಉದಾ: ಇಂಗ್ಲೆಂಡ್‌ನಿಂದ ಜನ ಅಮೇರಿಕಾಗೆ ಹೊರಟರು. ಇದೇ ಕಾಲಕ್ಕೆ ಮೋಟಾರ್ ವಾಹನಗಳು, ಹಡಗು, ರೇಡಿಯೋ, ಸಂಪರ್ಕಗಳ ಅಭಿವೃದ್ಧಿ ಆಧುನಿಕ ವಸತಿ ಗೃಹಗಳ ನಿರ್ಮಾಣಗಳಿಂದ ಪ್ರವಾಸಿ ಚಟುವಟಿಕೆ ಚುರುಕಾಯಿತು. ಮೋಜು ಪ್ರವಾಸಗಳು ಪುನಃ ಜನಪ್ರಿಯಗೊಂಡವು. ಹೀಗಾಗಿ ಸಮುದ್ರ ವಿಹಾರಧಾಮಗಳು ಮತ್ತು ಸ್ಪಾ ಗಳು ಬೆಳೆದವು. ಸ್ಪಾ ಗಳಲ್ಲಿ ಖನಿಜಯುಕ್ತ ನೀರಿನ ಸ್ನಾನ ಅಂದರೆ ಔಷಧೀಯ ಗುಣವುಳ್ಳ ನೀರಿನ ಸ್ನಾನ ವ್ಯವಸ್ಥೆ ಇದ್ದಿತು. 18ನೇ ಶತಮಾನದ ಹೊತ್ತಿಗೆ ಫ್ರಾನ್ಸ್ ಸ್ಪೈನ್, ಇಂಗ್ಲೆಂಡಿನ ಬ್ರೈಟನ್, ಸ್ಕಾರ್‌ಬರೋ, ಬಕ್ಸ್‌ಟನ್, ಎಪ್ಸಂ, ಭಾತ್ ಎಂಬಲ್ಲಿ ಸ್ಪಾ ಗಳು (ಔಷಧೀಯ ಧಾಮ) ವಿಹಾರಧಾಮಗಳಾಗಿ ಬೆಳೆದವು. ಅದೇ ವೇಳೆಗೆ ಗ್ರ್ಯಾಂಡ್ ಟೂರ್ ಕಲ್ಪನೆ ಬೆಳೆಯಿತು. ಸ್ಪಾ ಗಳಲ್ಲಿ ಜಲಬುಗ್ಗೆಗಳು, ಬಿಸಿ ನೀರಿನ ಬುಗ್ಗೆಗಳು ಏಳುತ್ತವೆ.

**ಗ್ರ್ಯಾಂಡ್ ಟೂರ್:** ಇಂಗ್ಲೆಂಡಿನಲ್ಲಿ ಗ್ರ್ಯಾಂಡ್ ಟೂರ್ ಕಲ್ಪನೆ ಅಭಿವೃದ್ಧಿ ಹೊಂದಿತು. 18ನೇ ಶತಮಾನದ ಹೊತ್ತಿಗೆ ಸುಮಾರು 20,000 ಪ್ರವಾಸಿಗಳು ಇಂಗ್ಲೆಂಡಿನಿಂದ ಯೂರೋಪಿನ ವಿವಿಧ ದೇಶಗಳಿಗೆ ಗ್ರ್ಯಾಂಡ್ ಟೂರ್ ಹೊರಟರು. ಈ ಪ್ರವಾಸಿಗಳು ಇಂಗ್ಲಿಷರು ಇತರ ರಾಷ್ಟ್ರಗಳ ಗೃಹ ನಿರ್ಮಾಣ, ಪುರಾತನ ನಿರ್ಮಾಣಗಳು, ಉದ್ಯಾನವನಗಳು, ರಸ್ತೆಗಳನ್ನು ತಿಳಿಯಲು ಮತ್ತು ಅವನ್ನು ತಮ್ಮ ನಾಡಿನಲ್ಲಿ ಆರಂಭಿಸಲು ಪ್ರಯಾಣ ಮಾಡಿದರು. ಗ್ರ್ಯಾಂಡ್ ಟೂರ್ ಎಂದರೆ ಯೂರೋಪ್ ಖಂಡಕ್ಕೆ ಪ್ರವಾಸ ಹೋಗುವುದು. ಇದರ ಅವಧಿ 3 ರಿಂದ 4 ವಾರಗಳವರೆಗೆ. ಇದಕ್ಕೆ ಉತ್ತಮ ಉದಾಹರಣೆ ಎಂದರೆ ರಷ್ಯಾದ ಪೀಟರ್ ಮಹಾಶಯ. ಶೈಕ್ಷಣಿಕ ಅನುಭವ

ಪಡೆಯಲು ಯೂರೋಪ್ ಪ್ರವಾಸ ಕೈಗೊಂಡು ಪ್ಯಾರಿಸ್, ಅಮಸ್ಟರ್‌ಡ್ಯಾಂ, ಲಂಡನ್‌ಗಳಲ್ಲಿ ಕಲೆ, ಸಾಹಿತ್ಯ, ಕೈಗಾರಿಕಾ, ರಾಜಕೀಯ ಶಿಕ್ಷಣ ಅನುಭವಗಳಿಸಿದನು. ಶ್ರೀಮಂತ ವಿದ್ಯಾರ್ಥಿಗಳು ತಮ್ಮ ಶಿಕ್ಷಕರೊಂದಿಗೆ ಗ್ರ್ಯಾಂಡ್ ಟೂರ್ ಹೊರಡುವ ಪರಿಪಾಠವಿದ್ದಿತು. ಇಂತಹ ಪ್ರವಾಸಿಗಳಿಗೆ ವಸತಿ ನೀಡಲು ರೆಸಾರ್ಟ್, ಹೋಟೆಲ್‌ಗಳು, ಬೆಳೆದವು. ಇಟಲಿ, ಜರ್ಮನಿ, ಫ್ರಾನ್ಸ್, ಸ್ವೀಡನ್, ನಾರ್ವೆ, ಐರ್‌ಲ್ಯಾಂಡ್, ಫಿನ್‌ಲ್ಯಾಂಡ್‌ಗಳು ಪ್ರವಾಸಿಗಳನ್ನು ಆಕರ್ಷಿಸಿದವು. ಪ್ರವಾಸಿಗಳಿಗೆ ಹಣ ಪೂರೈಕೆಗಾಗಿ ಸಹಕಾರಿ ಬ್ಯಾಂಕ್‌ಗಳು ಜನ್ಮ ತಾಳಿದವು. 1760ಕ್ಕೆ ಪ್ರವಾಸಿ ಚೆಕ್ ಸೌಲಭ್ಯ ಜಾರಿಗೆ ಬಂದಿತು. ಎಡ್ವರ್ಡ್‌ಗಿಬ್ಬನ್ ಚಾರ್ಲ್ಸ್ ಡಿಕನ್ಸ್, ಸಾಮ್ಯುಯಲ್ ಜಾನ್‌ಸನ್ ಮುಂತಾದವರು ಗ್ರ್ಯಾಂಡ್ ಟೂರ್‌ಗಳ ಕುರಿತು ತಮ್ಮ ಕೃತಿಗಳಲ್ಲಿ ವಿವರಣೆ ನೀಡಿದ್ದಾರೆ.

**ಕೈಗಾರಿಕಾ ಕ್ರಾಂತಿಯ ಪ್ರಭಾವ**: 18ನೇ ಶತಮಾನದಲ್ಲಿ ಸಂಭವಿಸಿದ ಕೈಗಾರಿಕಾ ಕ್ರಾಂತಿ ಪ್ರವಾಸೋದ್ಯಮಕ್ಕೆ ಆನೆಬಲ ತಂದು ಕೊಟ್ಟಿತು. ಹೇಗೆಂದರೆ.

1. ರೈಲ್ವೆ, ರಸ್ತೆ, ವಾಯು ಸಾರಿಗೆಯಲ್ಲಿ ವೇಗ ಪ್ರಯಾಣ ವಾಹನಗಳ ಬೆಳವಣಿಗೆ.
2. ತಾಂತ್ರಿಕಾಭಿವೃದ್ಧಿಯಿಂದ ಸಾರಿಗೆ ಸಂಪರ್ಕಗಳಲ್ಲಿ ವಿನೂತನ ಕ್ರಾಂತಿ ಆಗಿದ್ದು.
3. ಕಾರ್ಮಿಕರಿಗೆ ವೇತನ ಸಮೇತ ರಜೆಗಳು ಮತ್ತು ಪ್ರವಾಸ ವೆಚ್ಚ ನೀಡುವ ಸವಲತ್ತುಗಳು.
4. ಸಮಯ ಮತ್ತು ಹಣದಲ್ಲಿ ಹೆಚ್ಚಳ, ಸಂಪತ್ತಿನ ಹೆಚ್ಚಳ.
5. ವ್ಯವಸ್ಥಿತ ಪ್ರವಾಸೋದ್ಯಮ ನಡೆಸುವ ಉದ್ಯಮದ ಬೆಳವಣಿಗೆ.
6. ಭದ್ರತೆ ಮತ್ತು ಸುರಕ್ಷೆಯ ಪ್ರಯಾಣಗಳು.
7. ನಗರೀಕರಣ, ಕೈಗಾರೀಕರಣ, ಅತ್ಯಾಧುನಿಕ ವಸತಿಗೃಹಗಳ ನಿರ್ಮಾಣ.

**ವೇತನಸಹಿತ ರಜೆ ಸೌಲಭ್ಯಗಳು:** ಹಣ ಮತ್ತು ಸಮಯ ಪ್ರವಾಸದ ಎರಡು ಪ್ರೇರಣೆಗಳು. 19ನೇ ಶತಮಾನದ ಮುನ್ನ ಕಡಿಮೆ ವೇತನ ಹಾಗೂ ಬಿಡುವಿಲ್ಲದ ಕೈಗಾರಿಕಾ ಸಮಾಜದಲ್ಲಿ ಒತ್ತಡಗಳಿಂದ ಪ್ರವಾಸೋದ್ಯಮದ ಮೇಲೆ ದುಷ್ಪರಿಣಾಮ ಬೀರುತ್ತಿತ್ತು. ಕೈಗಾರಿಕೆಗಳಲ್ಲಿ ದುಡಿಯುವ ಕಾರ್ಮಿಕರು ಒತ್ತಡದ ಮಧ್ಯೆ ದಕ್ಷತೆ, ಮಾನಸಿಕ ಸ್ಥಿಮಿತ ಕಳೆದುಕೊಳ್ಳುತ್ತಿದ್ದರು. ಆದರೆ ಕೈಗಾರಿಕಾ ಕ್ರಾಂತಿಯ ಸಂಪತ್ತಿನ ಹೆಚ್ಚಳ, ಅಧಿಕ ವೇತನಗಳು ಪ್ರವಾಸಗಳಿಗೆ ಉತ್ತೇಜನ ನೀಡಿದವು. Paid Holidays ಎಂದರೆ ವೇತನ ಸಹಿತರಜೆ ಸೌಲಭ್ಯ. ಸರ್ಕಾರ/ಕೈಗಾರಿಕಾ ಮಾಲೀಕರು ದುಡಿಯುವ ನೌಕರರಿಗೆ ವಿರಾಮಕ್ಕಾಗಿ ಪ್ರವಾಸ ಕೈಗೊಳ್ಳಲು ವೇತನ ಸಹಿತ ರಜೆ ಸೌಲಭ್ಯಗಳನ್ನು ನೀಡತೊಡಗಿದವು.[9] ಇದರಿಂದ ಕಾರ್ಮಿಕರಲ್ಲಿ ಪ್ರವಾಸ ಹೋಗುವ ಹವ್ಯಾಸ

ಬೆಳೆಯಿತು. ಯಾಂತ್ರಿಕರಣ ಮತ್ತು ವೇತನ ಹೆಚ್ಚಳದಿಂದಲೂ ಪ್ರವಾಸೋದ್ಯಮಕ್ಕೆ ಉತ್ತೇಜನ ದೊರೆಯಿತು. Holiday ಎಂಬ ಪದ Holyday ಎಂಬ ಪದದಿಂದ ಬಂದಿದ್ದು ಅದು ಧಾರ್ಮಿಕ ಆಚರಣೆಗೆ ಸಂಬಂಧಿಸಿದ್ದಾಗಿದೆ. ಇಂದು ಇದು ಸಾರ್ವತ್ರಿಕವಾಗಿ ಬಳಕೆಯಾಗುತ್ತಿದೆ. ಈ Paid Holidays ಕಲ್ಪನೆಯು ಕೈಗಾರಿಕಾ ಕ್ರಾಂತಿಯ ಪರಿಣಾಮ ಎನ್ನಬಹುದು

**ಆಧುನಿಕ ಪ್ರವಾಸೋದ್ಯಮ:** 19ನೇ ಶತಮಾನದ ನಂತರ ಆಧುನಿಕ ಪ್ರವಾಸೋದ್ಯಮವು ಹೆಚ್ಚು ತಾಂತ್ರಿಕರಣಗೊಂಡಿತು. ಇದಕ್ಕೆ 2 ಪ್ರಬಲ ಕಾರಣಗಳೆಂದರೆ (1) ವೇತನ ಸಹಿತ ರಜೆ ಸೌಲಭ್ಯಗಳು (2) ಸಾರಿಗೆ ಅಭಿವೃದ್ಧಿ.

**ರೈಲ್ವೆ ಪ್ರವಾಸ :** ರೈಲು ಮಾರ್ಗದ ನಿರ್ಮಾಣ ಪ್ರಯಾಣದಲ್ಲಿ ಒಂದು ಕ್ರಾಂತಿಕಾರಿ ಹೆಜ್ಜೆ. ವೇಗ, ಸುರಕ್ಷತೆ, ಕಡಿಮೆ ವೆಚ್ಚಗಳಿಂದ ರೈಲ್ವೆ ಸಾರಿಗೆ ಬಹುಬೇಗ ಜನಪ್ರಿಯವಾಯಿತು. ಪ್ರಥಮ ಬಾರಿಗೆ ಇಂಗ್ಲೆಂಡಿನಲ್ಲಿ 1825ರಲ್ಲಿ ಸರಕು ಸಾಗಾಣೆಯ ರೈಲು ಆರಂಭವಾಯಿತು. 1830ರಲ್ಲಿ ಇಂಗ್ಲೆಂಡಿನ ಲಿವರ್‌ಪೂಲ್ ಮತ್ತು ಮ್ಯಾಂಚೆಸ್ಟರ್ ನಡುವೆ ರೈಲುಮಾರ್ಗ ನಿರ್ಮಾಣಗೊಂಡು ರೈಲು ಓಡಾಡಿತು. ಇಂಗ್ಲೆಂಡಿನ ಥಾಮಸ್ ಕುಕ್ ಎಂಬಾತನು ರೈಲು ಪ್ರವಾಸ ಆಯೋಜಿಸಲು ಥಾಮಸ್ ಕುಕ್ಕ ಕಂಪನಿಯನ್ನು ಸ್ಥಾಪಿಸಿದನು.[10]

1841ರಲ್ಲಿ ಥಾಮಸ್ ಕುಕ್‌ನು 570 ಪ್ರವಾಸಿಗಳ ತಂಡವನ್ನು ಇಂಗ್ಲೆಂಡ್‌ನ ಲೀಸೆಸ್ಟರ್‌ನಿಂದ ಲಾಬೊರೋಗೆ ರೈಲಿನಲ್ಲಿ ಕೊಂಡೊಯ್ದನು. ಒಂದು ದಿನದ ಈ ಪ್ರವಾಸಕ್ಕೆ 1 ಶಿಲಿಂಗ್ ಶುಲ್ಕ ವಿಧಿಸಿದನು. ಅವರಿಗೆ ಊಟ ನೀಡಿದ್ದನು. ಇದು ಜಗತ್ತಿನ ಮೊದಲ ರೈಲು ಪ್ರವಾಸ. 1843ರಲ್ಲಿ ಥಾಮಸ್ ಕುಕ್‌ನು 3000 ವಿದ್ಯಾರ್ಥಿಗಳಿಗೆ ಲೀಸೆಸ್ಟರ್‌ನಿಂದ ಡರ್ಬಿ ನಗರದವರೆಗೆ ಪ್ರವಾಸ ಏರ್ಪಡಿಸಿದನು. 1848ರಲ್ಲಿ ಥಾಮಸ್ ಕುಕ್ ಕಂಪನಿ ಇಂಗ್ಲಿಷ್ ನಾಗರಿಕರನ್ನು ಸ್ಕಾಟ್‌ಲ್ಯಾಂಡ್‌ಗೆ ವರ್ತುಲ ಪ್ರವಾಸಕ್ಕಾಗಿ ಕರೆದೂಯ್ದನು. ಒಂದೊಂದು ಟ್ರಿಪ್‌ನಲ್ಲಿ 5000 ಪ್ರವಾಸಿಗಳಿದ್ದರು. 1850ರಲ್ಲಿ ಯೂರೋಪಿನಿಂದ 1½ ಲಕ್ಷ ಪ್ರವಾಸಿಗರನ್ನು ಲಂಡನ್ನಿನ ಮಹಾ ಪ್ರದರ್ಶನಕ್ಕೆ ಕರೆತಂದನು. 1869ರಲ್ಲಿ ಆತ ಜೆರುಸಲೇಮ್ ಮತ್ತು ಭಾರತಕ್ಕೂ ಪ್ರವಾಸ ಏರ್ಪಡಿಸಿದನು. 1856ರಲ್ಲಿ ಕುಕ್‌ನು ವರ್ತುಲ ಪ್ರವಾಸ ಸಂಘಟಿಸಿ ಆಚಿಟವರ್ಪ್, ವಾಟರ್‌ಲೂ, ಬೇಡನ್ ರೈನ್, ಫ್ರಾಂಕ್‌ಫರ್ಟ್, ಸ್ಟ್ರೇಸ್‌ಬರ್ಗ್‌ಗಳ ಪ್ರವಾಸ ಏರ್ಪಡಿಸಿದನು. ಇದನ್ನು ಗ್ರ್ಯಾಂಡ್ ಟೂರ್ ಎಂದು ಕರೆಯಲಾಯಿತು. ಥಾಮಸ್ ಕುಕ್‌ನು ಆಲ್ಫ್ ಪರ್ವತಗಳಿಗೆ ಚಾರಣ ಏರ್ಪಡಿಸಿದನು. ಲಿಸ್ಬನ್‌ನಿಂದ ಲೀವರ್‌ಪೂಲ್ ಮತ್ತು ನಾರ್ತ್‌ವೇಲ್ಸ್‌ವರೆಗೆ ಪ್ರವಾಸ ಏರ್ಪಡಿಸುವ ಮೂಲಕ ಪ್ರವಾಸವನ್ನು ವಾಣಿಜ್ಯ ವ್ಯವಹಾರವಾಗಿ ರೂಪಿಸಿದನು. 1855ರಲ್ಲಿ

ಖಂಡಾಂತರ ಪ್ರವಾಸ ಏರ್ಪಡಿಸಿದನು. ಅದೇ ವರ್ಷ ಪ್ಯಾರಿಸ್ ವಿಶ್ವ ಪ್ರದರ್ಶನಕ್ಕೆ ಪ್ರವಾಸ ಏರ್ಪಡಿಸಿದನು. ಇದರಿಂದ ಸೇರ್ಪಡೆ ಪ್ರವಾಸ (Inclusive Tours) ಪರಿಕಲ್ಪನೆ ಹುಟ್ಟಿತು.

ಪ್ರವಾಸಿಗಳಿಗೆ ಉತ್ತಮ ದರ ಮತ್ತು ಸೇವೆಗಳನ್ನು ಒದಗಿಸಿದನು. ಹೋಟೆಲ್ ರಶೀದಿ (1867), ಟ್ರಾವೆಲ್ ಚೆಕ್ (1873) ಬಳಕೆಗೆ ತಂದನು. ಅದೇ ವರ್ಷ ಲಂಡನ್‌ನಿಂದ ನ್ಯೂಯರ್ಕ್, ಸ್ಯಾನ್‌ಫ್ರಾನ್ಸಿಸ್ಕೋ, ಕೈರೋ ಮೂಲಕ ಹಾದು ಪುನಃ ಲಂಡನ್ ಸೇರುವ ಜಾಗತಿಕ ಪ್ರವಾಸ ಏರ್ಪಡಿಸಿದನು. ಥಾಮಸ್ ಕುಕ್ ಕಂಪನಿ ಇಂದು ಜಗತ್ತಿನ ಅತಿ ದೊಡ್ಡ ಪ್ರವಾಸಿ ಏಜೆನ್ಸಿ ಸಂಘಟನೆಯಾಗಿದ್ದು, ಜಗತ್ತಿನಾದ್ಯಂತ ಇದರ ಶಾಖೆಗಳಿವೆ. ಹೀಗಾಗಿ ಥಾಮಸ್ ಕುಕ್‌ನನ್ನು ಪ್ರವಾಸೋದ್ಯಮ ಪಿತಾಮಹ ಎಂದು ಕರೆಯಲಾಗಿದೆ.

ಇಂಗ್ಲೆಂಡಿನ ವ್ಯವಸ್ಥಿತ ರೈಲು ಸಂಚಾರದಿಂದ ಸ್ಫೂರ್ತಿಗೊಂಡ ಆಸ್ಟ್ರಿಯ, ಫ್ರಾನ್ಸ್, ಸ್ವಿಟ್ಜರ್‌ಲ್ಯಾಂಡ್ ಹಾಗೂ ಅಮೇರಿಕಾದಲ್ಲಿ ರೈಲ್ವೆ ಮಾರ್ಗ ವ್ಯವಸ್ಥೆಯ ವಿಸ್ತರಣೆಯಾಯಿತು. 1853ರಲ್ಲಿ ಭಾರತದಲ್ಲಿ ರೈಲ್ವೆ ನಿರ್ಮಾಣ ಆರಂಭವಾಯಿತು. ಅಮೇರಿಕನ್ ಎಕ್ಸ್‌ಪ್ರೆಸ್ ಕಂಪನಿ ಅಮೆರಿಕಾ ಮತ್ತು ಯೂರೋಪ್ ಪ್ರವಾಸಗಳನ್ನು ಏರ್ಪಡಿಸಿತು. ಅಮೇರಿಕಾದ ಜಿ.ಎಮ್.ಪುಲ್‌ಮನ್‌ನು ಟ್ರಾವೆಲ್ ಎಜೆನ್ಸಿಯು Pioneer ಎಂಬ ಗ್ರ್ಯಾಂಡ್ ಟೂರ್‌ನ್ನು ರೈಲಿನಲ್ಲಿ ಏರ್ಪಡಿಸಿದನು. ಅದರ ಶುಲ್ಕ ಒಂದು ರಾತ್ರಿಗೆ 2 ಡಾಲರ್ ಆಗಿತ್ತು. ಅಮೇರಿಕದಲ್ಲಿ ತಯಾರಾದ ಪುಲ್‌ಮನ್ ಕಾರುಗಳನ್ನು ಇಂಗ್ಲೆಂಡಿಗೆ ಆಮದು ಮಾಡಿಕೊಳ್ಳಲಾಯಿತು. 1850ರಲ್ಲಿ ನಾರ್ವೆಯ ಬೆನ್ನೆಟ್‌ನು Tripನ್ನು ಸಂಘಟಿಸಿದನು. 1872ರಲ್ಲಿ ಪುಲ್‌ಮನ್ ಕಂಪನಿ 700 ಕಾರುಗಳನ್ನು ತಯಾರಿಸಿತು. ಅದರಲ್ಲಿ 30,000 ಕಾರ್ಮಿಕರು ದುಡಿಯುತ್ತಿದ್ದು 150 ದೇಶಗಳಲ್ಲಿ ಅದರ ಶಾಖೆಗಳಿದ್ದವು.

1950ರ ನಂತರ ಅತಿ ವೇಗದ ರೈಲು ಪ್ರಯಾಣ ಆರಂಭಗೊಂಡಿತು. ಜಪಾನಿನ ಬುಲೆಟ್ ಟ್ರೈನ್ (ಹಿಕಾರಿ ಎಕ್ಸ್‌ಪ್ರೈಸ್ ಟ್ರೈನ್) ಟೋಕಿಯೋ ಮತ್ತು ಒಸಾಕ ನಡುವೆ ಓಡಾಡುತ್ತಿದೆ. ವೇಗ ಗಂಟೆಗೆ 210 ಕಿ.ಮೀ. 1981ರಲ್ಲಿ ಫ್ರಾನ್ಸ್ 380 ಕಿ,ಮೀ. ವೇಗದ ರೈಲನ್ನು ಶೋಧಿಸಿತು. ಅದು ಪ್ಯಾರಿಸ್–ಲೈಯೋನ ನಡುವೆ 560 ಕಿ.ಮೀ. ಅಂತರವನ್ನು 48 ನಿಮಿಷಗಳಲ್ಲಿ ಕ್ರಮಿಸುತ್ತದೆ. ಭಾರತದಲ್ಲಿ ದೆಹಲಿ ಮತ್ತು ಕಲ್ಕತ್ತ ನಡುವೆ ರಾಜಧಾನಿ ಎಕ್ಸ್‌ಪ್ರೆಸ್ ರೈಲು ಗಂಟೆಗೆ 120 ಕಿ.ಮೀ. ವೇಗವಾಗಿ ಓಡುತ್ತದೆ. ಅದು 1441 ಕಿ.ಮೀ.ಗಳನ್ನು 12 ½ ಗಂಟೆಗಳಲ್ಲಿ ಕ್ರಮಿಸುತ್ತದೆ. ದೆಹಲಿ–ಭೂಪಾಲ್ ನಡುವೆ ಸೂಪರ್ ಫಾಸ್ಟ್ ರೈಲು 160 ಕಿ.ಮೀ. ವೇಗದಲ್ಲಿ ಚಲಿಸುತ್ತದೆ. ಈ ರೈಲುಗಳಲ್ಲಿ ಸುಖಕರ ಆಸನ ವ್ಯವಸ್ಥೆ ಇದೆ. ಜೊತೆಗೆ ಏರ್‌ಕಂಡೀಷನ್‌ನ್ನು ಹೊಂದಿವೆ.

ರೈಲು ಸಾರಿಗೆ ರಸ್ತೆ ಸಾರಿಗೆಗಿಂತ 2 ರಿಂದ 4, ವಿಮಾನ ಸಾರಿಗೆಗಿಂತ 10 ಪಟ್ಟು ಕಡಿಮೆ ವೆಚ್ಚದಲ್ಲಿ ಸಾರಿಗೆ ಸೌಲಭ್ಯ ಒದಗಿಸುತ್ತದೆ.

**ಹಡಗು ಪ್ರವಾಸ:** ಜಲಸಾರಿಗೆ ಅತಿ ಅಗ್ಗದ ಸಾರಿಗೆ. ಸಮುದ್ರ ತೀರಗಳ ನೀರಿನ ಸ್ನಾನ ಆರೋಗ್ಯಕರ ಎಂಬ ಭಾವನೆ ಬೆಳೆದಂತೆ ಹಡಗು ಸಂಚಾರ ತೀವ್ರಗೊಂಡಿತು. 1752ರಲ್ಲಿ ಡಾ॥ ರಿಚರ್ಡ್ ರನ್ಸೆಲ್ಲನು ಸಮುದ್ರ ನೀರಿನ ಮೇಲೆ ಪ್ರಬಂಧ ಬರೆದು ಸಮುದ್ರ ನೀರಿನ ಸ್ನಾನ ಆರೋಗ್ಯಕರ ಎಂದು ತಿಳಿಸಿದನು. ಡಾ॥ ಎನ್.ವೈಟ್ ಕೂಡಾ History of Cold and Bathing ಎಂಬ ಗ್ರಂಥದಲ್ಲಿ ಸಮುದ್ರ ತೀರಗಳ ನೀರಿನ ಸ್ನಾನದ ಉಪಯುಕ್ತತೆ ತಿಳಿಸಿದನು. ಇಟಲಿಯ ಸಿಸಿಲಿ, ನೇಪಲ್ಸ್, ನೈಸ್ ತೀರಗಳಿಗೆ ಪ್ರವಾಸಿಗಳು ಬರತೊಡಗಿದರು. 1758ರಲ್ಲಿ ಇಂಗ್ಲೆಂಡಿನ ಕಾಕ್ಸ್ ಅಂಡ್ ಕಿಂಗ್ ಎಂಬ ಪ್ರವಾಸಿ ಸಂಸ್ಥೆ ಶ್ರೀಮಂತರಿಗೆ ಹಡಗಿನ ಮೂಲಕ ಅಮೆರಿಕಾಗೆ ಪ್ರವಾಸ ಏರ್ಪಡಿಸಿತು. ಕುನಾರ್ಡ್ ಸ್ಟೀಮ್ ಶಿಪ್ ಕಂಪನಿ ಪ್ರಥಮ ಬಾರಿಗೆ ಹಡಗು ಪ್ರವಾಸ ಏರ್ಪಡಿಸಿತು (1840). ಲಂಡನ್‌ನಿಂದ ಅಮೇರಿಕಾದ ಕೆರೆಬಿಯನ್ ದ್ವೀಪಗಳಿಗೆ ಪ್ರವಾಸ ಏರ್ಪಡಿಸಿತು.

1866ರಲ್ಲಿ ಥಾಮಸ್ ಕುಕ್ ಉತ್ತರ ಅಮೇರಿಕಾಗೆ ಸಕಲ ಏರ್ಪಾಡಿನ ಪ್ರವಾಸವನ್ನು ಏರ್ಪಡಿಸಿದನು. ಆತ 1872ರಲ್ಲಿ ವರ್ತುಲ ವಿಶ್ವ ಪ್ರವಾಸವನ್ನು ಸಂಘಟಿಸಿದನು. 1869ರಲ್ಲಿ ಸೂಯಜ್ ಕಾಲುವೆ ತೆರೆದಾಗ ಪೂರ್ವ ಮತ್ತು ಪಶ್ಚಿಮ ರಾಷ್ಟ್ರಗಳ ನಡುವಿನ ಅಂತರ ತಗ್ಗಿತು. ಹಾಗಾಗಿ ಭಾರತ ಮತ್ತು ಇತರೆ ದೂರಪ್ರಾಚ್ಯ ಏಷ್ಯಾ ದೇಶಗಳಿಗೆ ಪ್ರವಾಸಗಳು ಏರ್ಪಟ್ಟವು. 19ನೇ ಶತಮಾನದ ಅಂತ್ಯಕ್ಕೆ ಜಲಸಾರಿಗೆ ಹೆಚ್ಚಾಯಿತು. ಆದರೆ 20ನೇ ಶತಮಾನದ ಮಧ್ಯಭಾಗದಲ್ಲಿ ವಿಮಾನ ಸಾರಿಗೆ ಆರಂಭವಾಗಿ ಅದರ ಏಕಸ್ವಾಮ್ಯ ಮುಗಿಯಿತು. 1910ರಲ್ಲಿ ಅಮೇರಿಕಾ ಸಿನಿಮಾ ನಟರು, ಫ್ರಾನ್ಸ್, ಇಟಲಿಯ ಬೀಚ್‌ಗಳಿಗೆ ಲಗ್ಗೆ ಇಟ್ಟರು. ಕೆರೆಬಿಯನ್ ಮತ್ತು ಮೆಡಿಟರೇನಿಯನ್ ದ್ವೀಪಗಳು ಪ್ರವಾಸಿ ಕೇಂದ್ರಗಳಾಗಿ ಬೆಳೆದವು.

**ಮೋಟಾರ್ ವಾಹನಗಳ ಪ್ರವಾಸ:** 1890 ರಿಂದ ಈಚೆಗೆ ಪ್ರವಾಸಕ್ಕೆ ಮೋಟಾರ್ ವಾಹನಗಳು ಬಳಕೆಯಾದವು. ಜರ್ಮನಿಯ ಕಾರ್ಲ್‌ಬೆಂಜ್, ಫ್ರಾನ್ಸಿನ ಲೂಯಿ ರವಾಲ್ಟ್, ಇಟಲಿಯ ಬುಗಾಟಿಯರು ಮೋಟಾರ್ ಕಾರುಗಳನ್ನು ತಯಾರಿಸಿದರು. ಇದರಿಂದ ಭೂ ಸಾರಿಗೆ ಅಧಿಕಗೊಂಡಿತು. 1903ರಲ್ಲಿ ಅಮೇರಿಕಾದ ನೆಲ್ಸನ್ ಮೋಟಾರ್ ಕಾರ್‌ನಲ್ಲಿ ಸ್ಯಾನ್‌ಫ್ರಾನ್ಸಿಸ್ಕೋದಿಂದ ನ್ಯೂಯಾರ್ಕ್‌ಗೆ ಪ್ರಯಾಣಿಸಿದನು. 1908ರಲ್ಲಿ ಹೆನ್ರಿಫ್ರೋರ್ಡ್ ತಯಾರಿಸಿದ ಮಾಡೆಲ್ ಟೀ ಕಾರುಗಳು ರೈಲ್ವೆ ಏಕಸ್ವಾಮ್ಯವನ್ನು ಮುರಿದವು. 1930ರಲ್ಲಿ ಪ್ರವಾಸಕ್ಕೆ

ಬಸ್‌ಗಳು ಬಳಕೆಯಾದವು. ಇದು ಸಾಮಾನ್ಯ ಜನರ ಪ್ರವಾಸಕ್ಕೆ ಉತ್ತೇಜನಕಾರಿಯಾಯಿತು. ಅದೇ ವರ್ಷ ಜರ್ಮನ್ನರು ಮೋಟಾರ್ ರಸ್ತೆಗಳನ್ನು ಅಭಿವೃದ್ಧಿಪಡಿಸಿದರು.

1991ಕ್ಕೆ ಈ ಕೆಳಕಂಡ ಹೆದ್ದಾರಿಗಳನ್ನು ಅಭಿವೃದ್ಧಿಪಡಿಸಲಾಗಿತ್ತು.

1. **ಟ್ರಾನ್ಸ್ ಆಫ್ರಿಕನ್ ಹೆದ್ದಾರಿ:** ಕೀನ್ಯಾ, ಉಗಾಂಡ, ಜೈರೆ, ಮಧ್ಯ ಆಫ್ರಿಕ, ಕ್ಯಾಮೆರೂನ್, ನೈಜೀರಿಯಾ, ಕಾಂಗೋ, ತಾಂಜೇನಿಯಾಗಳನ್ನು ಸಂಪರ್ಕಿಸುತ್ತದೆ. ಉದ್ದ 6596 ಕಿ.ಮೀ.
2. **ಟ್ರಾನ್ಸ್ ವೆಸ್ಟ್ ಆಫ್ರಿಕನ್ ಹೆದ್ದಾರಿ:** ಸೆನಗಾಲ್, ಮಾಲಿ, ನೈಜೀರಿಯಾ, ಕ್ಯಾಮರೂನ್‌ಗಳನ್ನು ಒಳಗೊಂಡಿದೆ. ಉದ್ದ 4771 ಕಿ.ಮೀ.
3. **ಟ್ರಾನ್ಸ್ ಈಸ್ಟ್ ಆಫ್ರಿಕನ್ ಹೆದ್ದಾರಿ:** ಕೈರೋದಿಂದ ಆರಂಭವಾಗಿ ಜಾಂಬಿಯಾದಲ್ಲಿ ಕೊನೆಗೊಳ್ಳುತ್ತದೆ. ಉದ್ದ 9000 ಕಿ.ಮೀ.
4. **ಟ್ರಾನ್ಸ್ ನಾರ್ತ್ ಸೌತ್ ಯೂರೋಪ್ ಹೆದ್ದಾರಿ:** ಪೋಲೆಂಡ್, ಇರಾನ್, ಸಿರಿಯಾ, ಇಟಲಿ, ಗ್ರೀಸ್, ಟರ್ಕಿ, ಹಂಗೇರಿ, ಆಸ್ಟ್ರೆಲಿಯಾಗಳನ್ನು ಇದು ಕೂಡಿಸುತ್ತದೆ.
5. **ಪಾನ್ ಅಮೆರಿಕನ್ ಹೆದ್ದಾರಿ:** ಇದು ಅಲಾಸ್ಕಾದಿಂದ ದಕ್ಷಿಣ ಚಿಲಿವರೆಗೆ ಸಾಗುತ್ತದೆ. ಉದ್ದ 23,000 ಕಿ.ಮೀ.
6. **ಏಷ್ಯಾ ಹೆದ್ದಾರಿ:** ಉದ್ದ 66,000 ಕಿ.ಮೀ. 15 ದೇಶಗಳನ್ನು ಸುತ್ತುವರಿದಿದೆ. ಇದು ಆಫ್ಘಾನಿಸ್ತಾನ್, ಬಾಂಗ್ಲಾದೇಶ, ಬರ್ಮ, ಕಾಂಬೋಡಿಯಾ, ಭಾರತ, ಇರಾನ್, ಲಾವೋಸ್, ಮಲೇಶಿಯಾ, ಪಾಕಿಸ್ತಾನ್, ಶ್ರೀಲಂಕಾ, ಸಿಂಗಪೂರ್, ಥಾಯ್‌ಲ್ಯಾಂಡ್‌ಗಳನ್ನು ಸುತ್ತುವರಿಯುತ್ತದೆ.

**ವಿಮಾನ ಸಾರಿಗೆ:** 1900ರಲ್ಲಿ ಅಮೇರಿಕಾದ ರೈಟ್ ಸಹೋದರರಿಂದ ವಿಮಾನ ಕಂಡುಹಿಡಿಯಲ್ಪಟ್ಟಿತು. ವಿಮಾನ ಸಾರಿಗೆ ಇಂದು ರಸ್ತೆ ಮತ್ತು ರೈಲ್ವೆ ಸಾರಿಗೆಯನ್ನು ಹಿಂದೆ ತಳ್ಳಿದೆ. ಅಂತರರಾಷ್ಟ್ರೀಯ ಪ್ರವಾಸೋದ್ಯಮದಲ್ಲಿ ಕ್ರಾಂತಿಕಾರಿ ಬದಲಾವಣೆ ತಂದ ಸಾರಿಗೆ ಇದಾಗಿದೆ. 1903ರಲ್ಲಿ ಕರೋಲಿನದಲ್ಲಿ ಮೊದಲ ವಿಮಾನ ಹಾರಾಡಿತು. 1927ರಲ್ಲಿ ನ್ಯೂಯಾರ್ಕ್‌ನಿಂದ ಬರ್ಲಿನ್ ನಡುವೆ ವಿಮಾನ ಹಾರಾಡಿತು. 1926ರಲ್ಲಿ ಅಮೇರಿಕಾದ ವಾರ್ನಿ ಸಂಸ್ಥೆ ವಿಮಾನ ಸಂಚಾರ ಆರಂಭಿಸಿತು. 1928ರಲ್ಲಿ ಪ್ರಥಮ ಪ್ರಯಾಣಿಕರನ್ನು ಹೊತ್ತ ವಿಮಾನ ಫ್ಲಾರಿಡಾದಿಂದ ಹವಾನಾ (ಕ್ಯೂಬಾ)ಗೆ ಹಾರಿತು. 1930ರಲ್ಲಿ ಪನಾಮ ಏರ್‌ವೇ ಸೇವೆ

ಆರಂಭವಾಯಿತು. 1948ರಲ್ಲಿ ವಿಮಾನಗಳನ್ನು ವ್ಯವಸ್ಥಿತ ಪ್ರವಾಸಗಳಿಗೆ ಬಳಸಲಾಯಿತು. 2ನೇ ಮಹಾಯುದ್ಧದ ನಂತರ ವಾಯು ಸಂಚಾರ ಹೆಚ್ಚಾಯಿತು.

ಇಂಗ್ಲೆಂಡಿನ ಫ್ರಾಂಕ್ ವೈಟಲ್ ಬಿ–52 ಎಂಬ ವಿಮಾನ ಅನ್ವೇಷಿಸಿದನು. 1940ರಲ್ಲಿ ಬೋಯಿಂಗ್ 314 ವಿಮಾನ ಅನ್ವೇಷಣೆಯಾಯಿತು. 1958ರಲ್ಲಿ ಅತಿವೇಗದ ಜೆಟ್ ವಿಮಾನ ಆರಂಭಗೊಂಡಿತು. ಜೆಟ್ ವಿಮಾನ ಸಾಮೂಹಿಕ ಹಾಗೂ ಆರಾಮದಾಯಕ ಪ್ರವಾಸಕ್ಕೆ ಹೆಸರಾಯಿತು. ಅಮೇರಿಕಾದ ಜೆಟ್ 707 ವಿಮಾನ ಲಾಸ್ ಏಂಜಲೀಸ್ ಮತ್ತು ನ್ಯೂಯಾರ್ಕ್ ನಡುವೆ ಹಾರಾಡಿತು. 1970ರಲ್ಲಿ ಜಂಬೋಜೆಟ್ ವಿಮಾನ ಹಾರಾಟಕ್ಕೆ ಬಂದಿತು. 747 ಬೋಯಿಂಗ್ ನ್ಯೂಪ್ಲೇನ್ 352 ಪ್ರಯಾಣಿಕರನ್ನು ನ್ಯೂಯಾರ್ಕ್‌ನಿಂದ ಲಂಡನ್‌ಗೆ ಕರೆತಂದಿತು. ಬೋಯಿಂಗ್ 707, 747, ಮೆಕ್‌ಡೊನಲ್, ಡೊಗ್ಲಾಸ್–ಡಿ.ಸಿ.10, ಏರ್‌ಬಸ್ ಎ300, ಲಾಕ್‌ಹೀಡ್ ಟ್ರೈಸ್ಟಾರ್ ಎಲ್–1011, ಕಾಂಕಾರ್ಡ್, ಟುಪೋಲೆವ್–ಕಾಂಪಿ ಮೊದಲಾದ ವಿಮಾನಗಳು ಬಳಕೆಗೆ ಬಂದವು. ಆರಾಮ, ಕ್ಷೇಮ, ವೇಗದ ದೃಷ್ಟಿಯಿಂದ ವಿಮಾನ ಪ್ರವಾಸ ಇಂದು ಹೆಚ್ಚು ಜನಪ್ರಿಯವಾಗಿದೆ. ವಿಮಾನ ಪ್ರವಾಸಿಗಳ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿದೆ. 1960 ರಿಂದ ಈಚೆಗೆ ವಿಮಾನ ಸಾರಿಗೆ 6 ಪಟ್ಟು ಹೆಚ್ಚಾಗಿದೆ. 1970–90ರ ನಡುವೆ ವರ್ಲ್ಡ್ ಟೂರಿಸಂ 240% ನಷ್ಟು ವೇಗವಾಗಿ ಬೆಳೆಯಿತು. ವೇಗ, ಸುರಕ್ಷತೆ ಹಾಗೂ ಸೌಲಭ್ಯಗಳಿಂದಾಗಿ 20ನೇ ಶತಮಾನದಲ್ಲಿ ವಿಮಾನ ಸಾರಿಗೆ ಬಹು ಜನಪ್ರಿಯವಾಯಿತು.

**ಪ್ಯಾಕೇಜ್ ಟೂರ್ಸ್:** ಊಟ ಮತ್ತು ವಸತಿ ಸಮೇತ ಸಕಲ ಏರ್ಪಾಡಿನ ಪ್ರವಾಸಗಳನ್ನು ಪ್ಯಾಕೇಜ್ ಟೂರ್‌ಗಳು ಎನ್ನುವರು. ಅವು ಪ್ರವಾಸ ನಿರ್ವಾಹಕ/ಏಜೆಂಟ್ ಮೂಲಕ ನಡೆಯುತ್ತಿವೆ. ಇವು ಸಮಗ್ರ ಪ್ರವಾಸಗಳಾಗಿರುತ್ತದೆ. ಪ್ರಥಮ ಬಾರಿಗೆ ಇಂಗ್ಲೆಂಡಿನ ಹರೈಜನ್ ಕಂಪನಿ ಪ್ಯಾಕೇಜ್ ಟೂರ್‌ಗಳನ್ನು ಲಂಡನ್‌ನಿಂದ ಕಾರ್ಸಿಕಾ ದ್ವೀಪಗಳಿಗೆ ಏರ್ಪಡಿಸಿತು (1950).

## ಭಾರತದಲ್ಲಿ ಪ್ರವಾಸೋದ್ಯಮದ ಬೆಳವಣಿಗೆ

ಭೌಗೋಳಿಕವಾಗಿ ಅಗಾಧವಾದ ಭಾರತವು ಅಪಾರ ನೈಸರ್ಗಿಕ ಹಾಗೂ ಸಾಂಸ್ಕೃತಿಕ ಸಂಪತ್ತನ್ನು ಹೊಂದಿದೆ. ಆದ್ದರಿಂದ ಇಲ್ಲಿ ಪ್ರವಾಸೋದ್ಯಮಕ್ಕೆ ವಿಫುಲ ಅವಕಾಶಗಳಿವೆ. ಪ್ರಾಚೀನ ಕಾಲದಲ್ಲಿ ಭಾರತದಲ್ಲಿ ವ್ಯಾಪಾರ, ಧರ್ಮ ಮತ್ತು ಶಿಕ್ಷಣ ಈ 3 ಕಾರಣಗಳಿಗಾಗಿ ಪ್ರವಾಸಗಳು ನಡೆಯುತ್ತಿದ್ದವು.

ಜಗತ್ತಿನ ನಾನಾ ನಾಗರಿಕತೆಗಳೊಂದಿಗೆ ಸಂಪರ್ಕ ಹೊಂದಿದ್ದ ಸಿಂಧೂ ಜನರೇ ಭಾರತದ ಪ್ರಪ್ರಥಮ ಪ್ರವಾಸಿಗಳಾಗಿದ್ದಾರೆ. ಅವರು ಈಜಿಪ್ಟ್ ಮೆಸಪಟೋಮಿಯಾ, ಬ್ಯಾಬಿಲೋನಿಯ, ಪರ್ಷಿಯಾ, ಚೀನಿ, ಗ್ರೀಸ್ ಹಾಗೂ ರೋಮನ್ ನಾಗರಿಕತೆಗಳೊಂದಿಗೆ ವಾಣಿಜ್ಯ ಸಂಬಂಧ ಹೊಂದಿದ್ದರು.[11] ಅವರಿಬ್ಬರಲ್ಲಿ ಪರಸ್ಪರ ವ್ಯಾಪಾರ ಸಂಪರ್ಕ ಏರ್ಪಟ್ಟಿತು. ಹಡಗು, ಎತ್ತಿನಗಾಡಿ, ಕುದುರೆ ಗಾಡಿಗಳನ್ನು ಸಂಚಾರಕ್ಕಾಗಿ ಬಳಸುತ್ತಿದ್ದರು. ಮೆಕ್ಕಾ, ಬಹರೈನ್ ಮೊದಲಾದ ಪಶ್ಚಿಮ ಏಷ್ಯಾ ನಗರಗಳಲ್ಲಿ ದೊರೆತಿರುವ ಸಿಂಧೂ ಜನರ ಮುದ್ರೆಗಳು, ಭತ್ತದ ಕಾಳುಗಳು ದೂರ ಸ್ಥಳಗಳಿಗೆ ವ್ಯಾಪಾರಕ್ಕಾಗಿ ಪ್ರವಾಸಗಳು ನಡೆಯುತ್ತಿದ್ದವು ಎಂಬುದಕ್ಕೆ ಸಾಕ್ಷಿಗಳಾಗಿವೆ.[12] ಕ್ರಿ.ಪೂ. ಆರಂಭದಲ್ಲಿ ರೋಮನ್‌ರ ಹಡಗುಗಳು ಭಾರತದ ಪೂರ್ವ ಕರಾವಳಿವರೆಗೆ ಬರುತ್ತಿದ್ದವು. ಇದಕ್ಕೆ ಸಾಕ್ಷಿಯಾಗಿ ಅರಿಕಮೇಡುವಿನಲ್ಲಿ ರೋಮನ್ ನಾಣ್ಯಗಳು ದೊರೆತಿವೆ. ಅನಂತರ ಪರ್ಶಿಯನ್ನರು ಭಾರತಕ್ಕೆ ಬಂದರು.

ಬೌದ್ಧಯುಗದ ನಂತರದ ಕಾಲದಲ್ಲಿ ವ್ಯಾಪಾರಿ ಸಂಘಗಳ ಹುಟ್ಟು ಹಾಗೂ ಬ್ಯಾಂಕಿಂಗ್ ಸೌಲಭ್ಯಗಳ ದೊರೆಯುವಿಕೆಯಿಂದ ವ್ಯಾಪಾರ ಬೆಳವಣಿಗೆಯಾಯಿತು. ಇದರಿಂದ ರಸ್ತೆ ಅಭಿವೃದ್ಧಿಯಾಯಿತು. ಬೌದ್ಧಯುಗದಲ್ಲಿ ತಾಮ್ರಲಿಪ್ತಿ, ಪಾಟಲೀಪುತ್ರ, ಕೌಶಾಂಬಿ, ಭೃಗುಕಂಚು, ವಿಧಿಸ, ಕಾಶಿ, ಉಜ್ಜಯಿನಿಗಳನ್ನು ಕೂಡಿಸುವ ವ್ಯಾಪಾರ ಮಾರ್ಗಗಳಿದ್ದವು. ಅದೇ ರೀತಿ ಮಥುರಾ, ಗುಜರಾತ್‌ನ್ನು ಕೂಡಿಸುವ ಮಾರ್ಗ ದೆಹಲಿಯಿಂದ ಆರಂಭವಾಗಿ ತಕ್ಷಶಿಲಾ, ಕಾಬೂಲ್ ಮಾರ್ಗವಾಗಿ ಏಷ್ಯಾಕ್ಕೆ ಸಾಗುವ ಮಾರ್ಗ, ಉಜ್ಜಯಿನಿ ಪೈತಾನ್ ಕಂಚೆಗಳನ್ನು ಕೂಡಿಸುವ ಮಾರ್ಗಗಳು ಏರ್ಪಟ್ಟಿದ್ದವು.[13] ಕಾವ್ಯಯುಗದಲ್ಲಿ ಹಸ್ತಿನಾಪುರ, ಆಯೋಧ್ಯ, ಪಂಪಾಕ್ಷೇತ್ರಗಳು, ವೈದಿಕ ಯುಗದಲ್ಲಿ ಶ್ರೀಕ್ಷೇತ್ರ ಕಾಶಿ, ಪ್ರಯಾಗಗಳು ವರ್ತಕ/ಪ್ರವಾಸಿ ನಗರಗಳಾಗಿ ಅಭಿವೃದ್ಧಿ ಹೊಂದಿದವು. ಶಾತವಾಹನರ ಕಾಲದಲ್ಲಿ ವರ್ತಕ ಸಂಘಗಳು ನಾನಾ ನಗರಗಳಲ್ಲಿ ಸ್ಥಾಪನೆಯಾಗಿದ್ದವು.

ಧಾರ್ಮಿಕ ಪ್ರವಾಸಗಳಲ್ಲಿ ಧಾರ್ಮಿಕ ನಾಯಕರ ಜೀವನ ಸ್ಥಳಗಳಿಗೆ ಭೇಟಿ ನೀಡುವುದು, ದೇವಾಲಯ ಕೇಂದ್ರಗಳಿಗೆ ಭೇಟಿ ನೀಡುವುದು ಮುಖ್ಯವಾದವು. ಶಂಕರ, ರಾಮಾನುಜ, ಮಧ್ವಚಾರ್ಯರ ಜನ್ಮಸ್ಥಳಗಳಿಗೆ ಭೇಟಿ ನೀಡುವುದು. ದೇವಾಲಯ ಸ್ಥಳಗಳಾದ ಐಹೊಳೆ, ಕಾರ್ಲೆ, ಅಜಂತಾ, ನಾಗಾರ್ಜುನಕೊಂಡ, ತಂಜಾವೂರುಗಳಿಗೆ ಭೇಟಿ ನೀಡುವುದರಿಂದ ಪ್ರವಾಸಗಳು ಬೆಳೆದವು. ಬುದ್ಧನ ಕಪಿಲವಸ್ತು, ಬುದ್ಧಗಯಾ, ರಾಜಗೃಹ, ಸಾರನಾಥ, ಕುಶಿ ನಗರಳಲ್ಲೂ, ಮಹಾವೀರನು ಕುಂದಗ್ರಾಮ, ಜೃಂಬಕಗ್ರಾಮ, ಕಾಶಿ, ಪ್ರಯಾಗ, ಪಾವಗಳಲ್ಲಿ

ಸಂಚರಿಸಿದ್ದರು. ಬೌದ್ಧ ಧರ್ಮ ಬೆಳೆದಂತೆ ಬೌದ್ಧಿಕ, ಧಾರ್ಮಿಕ ಕೇಂದ್ರಗಳನ್ನು ಸಂದರ್ಶಿಸಲು ಚೀನಾ, ಟಿಬೆಟ್, ಸಿಂಹಳ, ಬರ್ಮಾದಿಂದ ಪ್ರವಾಸಿಗಳು ಬರುತ್ತಿದ್ದರು. ಭಾರತದಿಂದ ಹೊರಟವರು ಜಾವ, ಸುಮಾತ್ರ, ಮಲಯ, ಸಿಂಹಳ, ಗಾಂಧಾರ ದೇಶಗಳಲ್ಲಿ ಸಂಚರಿಸುತ್ತಿದ್ದರು.

ಅಶೋಕನು ಬೌದ್ಧಮತ ಪ್ರಚಾರಕ್ಕಾಗಿ ಧರ್ಮ ಮಹಾಮಾತ್ರರನ್ನು ಸಿಂಹಳ, ಅಫ್ಘಾನಿಸ್ತಾನ್, ಬರ್ಮಾ ದೇಶಗಳಿಗೆ ಕಳುಹಿಸಿದ್ದನು. ಸ್ವತಃ ಅಶೋಕನು ಅಧಿಕಾರಗಳ ದಕ್ಷತೆ ತಿಳಿಯಲು ಪ್ರವಾಸ ಮಾಡುತ್ತಿದ್ದನು. ಆತನ ಕಾಲದಲ್ಲಿ ಹೆದ್ದಾರಿಗಳು, ಧರ್ಮಶಾಲೆಗಳು, ಅನ್ನಛತ್ರಗಳನ್ನು ಪ್ರವಾಸಿಗರಿಗಾಗಿ ನಿರ್ಮಾಣವಾದವು.

ಕೌಟಿಲ್ಯನು ಅರ್ಥಶಾಸ್ತ್ರದಲ್ಲಿ ಪರವಾನಿಗಿ ಮತ್ತು ವಿದೇಶಿಯರನ್ನು ನೋಡಿಕೊಳ್ಳಲು ಪ್ರತ್ಯೇಕ ಇಲಾಖೆ ಇತ್ತೆಂದು ಹೇಳಿದ್ದಾನೆ. ವಿದೇಶಿಯರಿಗೆ ಪರವಾನಿಗಿ ಅಗತ್ಯವೆಂದು, ಅದಿಲ್ಲದೆ ಸಂಚರಿಸುವವರಿಗೆ ದಂಡ ವಿಧಿಸಲಾಗುತ್ತಿತ್ತೆಂದು ಅವನು ಹೇಳಿದ್ದಾನೆ.[14] ಗುಪ್ತರ ಕಾಲದಲ್ಲೂ ಅಂತಪಾಲ ಎಂಬ ಅಧಿಕಾರಿಯನ್ನು ಈ ಉದ್ದೇಶಕ್ಕಾಗಿ ನೇಮಿಸಲಾಗುತ್ತಿತ್ತು. ಹರ್ಷನು ಆಡಳಿತ ಉದ್ದೇಶಕ್ಕಾಗಿ ಪ್ರವಾಸ ಕೈಗೊಳ್ಳುತ್ತಿದ್ದನು. ಕಾಶಿ, ಪುರಿ, ಮಥುರಾ, ಪ್ರಯಾಗ, ಕಂಚಿ, ಶ್ರೀಶೈಲ, ಗೋಕರ್ಣ, ಬದರಿ, ಹರಿದ್ವಾರ, ದ್ವಾರಕ, ಮಧುರೈ, ಪಂಪಾಕ್ಷೇತ್ರ, ರಾಮೇಶ್ವರಂ, ನಾಸಿಕ್‌ಗಳು ಯಾತ್ರಾಸ್ಥಳಗಳಾಗಿ, ಪ್ರವಾಸಿ ಕೇಂದ್ರಗಳಾಗಿ ಬೆಳೆದವು. ಅಜಂತ, ಕರ್ಲೆ, ಎಲ್ಲೋರ, ಸಾರನಾಥ, ಸಾಂಚಿ, ಬುದ್ಧ ಗಯಾಗಳು ಬೌದ್ಧ ಕೇಂದ್ರಗಳಾಗಿ ಬೆಳೆದವು. ಪ್ರವಾಸಿಗಳು ಕುದುರೆ, ಒಂಟೆ, ಎತ್ತಿನ ಗಾಡಿಗಳಲ್ಲಿ ಸಂಚರಿಸುತ್ತಿದ್ದರು. ಮತ್ತೆ ಕೆಲವರು ಕಾಲ್ನಡಿಗೆಯಲ್ಲೇ ಸಂಚರಿಸುತ್ತಿದ್ದರು. ಉದಾ: ಶಂಕರಾಚಾರ್ಯರು ದ್ವಾರಕ, ಬದರಿ, ಪುರಿ, ಶೃಂಗೇರಿ, ಕಾಶಿ, ಶ್ರೀಶೈಲಗಳಿಗೆ ಕಾಲ್ನಡಿಗೆಯಲ್ಲೇ ಸಂಚರಿಸಿದ್ದರು.

ಶಿಕ್ಷಣ ಪಡೆಯುವ ಉದ್ದೇಶಕ್ಕಾಗಿ ವಿದೇಶಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದರು. ಅಂತಹವರು ತಕ್ಷಶಿಲಾ, ವಿಕ್ರಮಶಿಲಾ, ಕಂಚಿ, ನಲಂದಾಗಳಲ್ಲಿ ಶಿಕ್ಷಣ ಪಡೆಯುತ್ತಿದ್ದರು. ನಲಂದ ಬೌದ್ಧ ವಿಹಾರದಲ್ಲಿ 10,000 ವಿದ್ಯಾರ್ಥಿಗಳಿದ್ದರು. ಆಗ್ನೇಯ ಏಷ್ಯಾದಿಂದ ಅದು ವಿದ್ಯಾರ್ಥಿಗಳನ್ನು ಸೆಳೆಯುತ್ತಿತ್ತು. ಬೃಹತ್ ಭಾರತ ಕಾಲದಲ್ಲಿ ಭಾರತೀಯ ವರ್ತಕರು, ಧರ್ಮ ಪ್ರಚಾರಕರು, ರಾಜದೂತರು ಆಗ್ನೇಯ ಏಷ್ಯಾ ರಾಷ್ಟ್ರಗಳಲ್ಲಿ ಪ್ರವಾಸ ಕೈಗೊಂಡಿದ್ದರು.[15]

ಭಾರತಕ್ಕೆ ಬಂದ ವಿದೇಶಿ ಯಾತ್ರಿಕರಲ್ಲಿ ಗ್ರೀಸ್‌ನ ಅಲೆಗ್ಸಾಂಡರ್ ಮತ್ತು ಮೆಗಸ್ಥನೀಸ್ ಪ್ರಮುಖರು. ಚಂದ್ರಗುಪ್ತನ ಆಸ್ಥಾನಕ್ಕೆ ಬಂದ ಗ್ರೀಸಿನ ರಾಯಭಾರಿ ಮೆಗಾಸ್ಥನೀಸ್ ಇಂಡಿಕಾ ಎಂಬ ಗ್ರಂಥ ಬರೆದಿದ್ದಾನೆ. ಬುದ್ಧನ ತವರಾದ ಭಾರತವನ್ನು ನೋಡಲು ಚೀನಾದಿಂದ ಅನೇಕ

ಬೌದ್ಧ ಯಾತ್ರಿಕರು ಬಂದರು. ಅವರಲ್ಲಿ ಫಾಹಿಯಾನ್, ಇತ್ಸಿಂಗ್, ಹ್ಯೂಯೆನ್‌ತ್ಸಾಂಗರು ಪ್ರಮುಖರು. ಕ್ರಿ.ಶ.405ರಲ್ಲಿ ಬಂದ ಫಾಹಿಯಾನ್ ಗೋಕೊಕಿ ಎಂಬ ಕೃತಿ ರಚಿಸಿದನು. ಕನೂಜ್, ಕಂಚಿ, ಬಾದಾಮಿಗಳಿಗೆ ಕ್ರಿ.ಶ.640ರಲ್ಲಿ ಭೇಟಿ ನೀಡಿದ ಹ್ಯೂಯೆನ್‌ತ್ಸಾಂಗ್ ಸಿ.ಯು.ಕಿ ಎಂಬ ಪ್ರವಾಸ ಕಥನ ಬರೆದಿದ್ದಾರೆ.[16]

ಮಧ್ಯಯುಗದಲ್ಲಿ ಇಸ್ಲಾಮಿಕ್ ರಾಜ್ಯಭಾರ ಇದ್ದಿದ್ದರಿಂದ ಹಿಂದೂಗಳು ತಮ್ಮ ಜೀವನದ ಜಂಜಾಟ ಕಳೆದುಕೊಳ್ಳಲು ಧಾರ್ಮಿಕ ಸ್ಥಳಗಳಿಗೆ ಪ್ರವಾಸ ಹೋಗುವುದು ಕಂಡುಬರುತ್ತದೆ. ನಿರ್ದಿಷ್ಟ ಧಾರ್ಮಿಕ ಕೇಂದ್ರಗಳಿಗೆ ಭೇಟಿ ನೀಡುವ ರೂಢಿ ಆರಂಭವಾಗುತ್ತದೆ. ಶಕ್ತಿಸ್ಥಳಗಳು, ಶಂಕರರ ಮಠಗಳು ಮಧ್ಯಯುಗದಲ್ಲಿ ಪ್ರಾಮುಖ್ಯತೆ ಪಡೆಯುತ್ತವೆ. ಈ ಕಾಲದಲ್ಲಿ ಅಮೃತಸರ, ಪಂಡರಾಪುರಗಳು ಪ್ರವಾಸಿ ಕೇಂದ್ರಗಳಾದವು. ಮೊಗಲ್ ದೊರೆಗಳಾದ ಅಕ್ಬರ್, ಷಹಜಹಾನ್ ನಿರ್ಮಿಸಿದ ದೆಹಲಿಯ ಕೆಂಪುಕೋಟೆ, ಆಗ್ರಕೋಟೆ, ತಾಜ್‌ಮಹಲ್, ಫತೇಪುರಸಿಕ್ರಿ ಪ್ರವಾಸಿ ಕೇಂದ್ರಗಳಾಗಿ ಬೆಳೆದವು.[17]

**ಆಧುನಿಕ ಕಾಲದಲ್ಲಿ ಭಾರತದಿಂದ ಆಡಳಿತ, ಶಿಕ್ಷಣ, ರಾಜಕೀಯ ಆಡಳಿತ ಅನುಭವಗಳಿಸಲು ವಿದೇಶಗಳಿಗೆ ಪ್ರವಾಸ ಕೈಗೊಂಡವರು ಇಂತಿದ್ದಾರೆ.**

ರಾಜಾರಾಮ್ ಮೋಹನ್‌ರಾಯ್ – ಇಂಗ್ಲೆಂಡ್

ಸ್ವಾಮಿ ವಿವೇಕಾನಂದ – ಅಮೇರಿಕಾ, ಜರ್ಮನಿ, ಫ್ರಾನ್ಸ್, ಇಟಲಿ, ಜಪಾನ್

ದಾದಾಬಾಯಿ ನವರೋಜಿ – ಇಂಗ್ಲೆಂಡ್

ಗೋಖಲೆ – ಇಂಗ್ಲೆಂಡ್, ಗಯಾನ, ವೆಸ್ಟ್ ಇಂಡೀಸ್

ಗಾಂಧೀಜಿ – ದಕ್ಷಿಣ ಆಫ್ರಿಕ, ಇಂಗ್ಲೆಂಡ್

ನೆಹರು – ಅಮೇರಿಕಾ, ಇಂಗ್ಲೆಂಡ್

ಅಂಬೇಡ್ಕರ್ – ಅಮೇರಿಕಾ, ಇಂಗ್ಲೆಂಡ್

**ಕೆಲವು ಪ್ರವಾಸಿ ಕಥನಗಳು**

ಭಾರತಕ್ಕೆ ಬಂದು ಹಲವು ಪ್ರವಾಸಿ ಕಥನಗಳನ್ನು ರಚಿಸಿದವರು:[18]

| | |
|---|---|
| **ಮೆಗಾಸ್ಥನೀಸ್ ಇಂಡಿಕಾ** | – ಮೌರ್ಯರ ಕಾಲದ ಭಾರತದ ಬಗ್ಗೆ ತಿಳಿಸುತ್ತದೆ. ಇವರೊಂದಿಗೆ ಗ್ರೀಕ್, ರೋಮನ್ ಬರಹಗಾರರಾದ ಅರ್ರಿಯನ್, ಜಸ್ಟಿಸ್, ಸ್ಟ್ರಾಂಬೋ, ಸ್ಕೈಲಾಕ್ಸ್‌ರು ಸೇರುತ್ತಾರೆ. |
| **ಟಾಲೆಮಿ** | – ಗ್ರೀಕ್‌ನವರು, ಜಿಯಾಗ್ರಫಿ ಕೃತಿ ರಚಿಸಿದನು. |
| **ಅನಾಮಿಕ** | – ಪೆರಿಪ್ಲಸ್ ಆಫ್ ಎರಿತ್ರಿಯನ್ಸೀ |
| **ಪಾಹಿಯಾನ್** | – ಗೋಕೊಕಿ |
| **ಹ್ಯೂಯನ್‌ತ್ಸಾಂಗ್** | – ಸಿಯುಕಿ |
| **ಸುಲೈಮಾನ್** | – ಅರಬ್ ಪ್ರವಾಸಿ. ಈತ ಮಾನ್ಯಖೇಟ, ಸೂರತ್, ಬಾದಾಮಿಗಳನ್ನು ಸಂದರ್ಶಿಸಿ ಪ್ರವಾಸಿ ಕಥನ ರಚಿಸಿದನು. |
| **ಅಲ್ಬೆರೂನಿ** | – ಘಜ್ನಿ ಮಹಮದ್‌ನೊಂದಿಗೆ ಭಾರತಕ್ಕೆ ಬಂದು (1020) ಸುಂದರ ಪ್ರವಾಸ ಕಥನ ಕಿತಾಬ್–ಆಲ್–ಹಿಂದ್ ಎಂಬ ಕೃತಿ ರಚಿಸಿದನು. ಇದರಲ್ಲಿ ಹಿಂದೂಗಳ ಆಯುರ್ವೇದ, ಗಣಿತಶಾಸ್ತ್ರ, ಸಂಸ್ಕೃತ ಭಾಷೆಗಳನ್ನು ಹೊಗಳಿದ್ದಾನೆ. |
| **ಮಾರ್ಕೊಪೋಲೋ** | – ಇಟಲಿಯ ವೆನಿಸ್‌ನವನು. ಪಾಮೀರ್, ಪರ್ಶಿಯಾ, ಅಫ್ಘಾನಿಸ್ತಾನ, ಜಾವ, ಸುಮಾತ್ರ, ಚೀನ, ಸಿಲೋನ್‌ಗಳಲ್ಲಿ ಸಂಚರಿಸಿ ಟ್ರಾವೆಲ್ಸ್ ಆಫ್ ಮಾರ್ಕೊಪೋಲೋ ಎಂಬ ಕೃತಿ ರಚಿಸಿದನು. |
| **ಬೆಂಜಮಿನ್** | – ಯಹೂದಿ ಸಾಹಿತಿಯಾದ ಈತ 1160ರಲ್ಲಿ ಯೂರೋಪ್, ಪರ್ಶಿಯಾ ಮತ್ತು ಭಾರತದಲ್ಲಿ ಸಂಚರಿಸಿ ಪ್ರವಾಸಿ ಕಥನ ರಚಿಸಿದನು. |
| **ಇಬನ್ ಬಟೂಟ** | – ಬಟೂಟ (1304–30) ಆಫ್ರಿಕಾದಿಂದ ಬಂದು ಪಶ್ಚಿಮ ಏಷ್ಯಾ, ಸಿಲೋನ್, ಮಾಲ್ಡೀವ್ಸ್, ಸಿಂಧ್, ಭಾರತ, ಇಂಡೋನೇಷ್ಯಾ, ಚೀನಾಗಳಲ್ಲಿ 17,000 ಮೈಲಿ ಸಂಚರಿಸಿ ಕಿತಾಬ್–ಉರ್–ರೆಹ್ಲಾ ಎಂಬ ಕೃತಿ ರಚಿಸಿದ್ದಾರೆ. |

**ಅಬ್ದುಲ್ ರಜಾಕ್** – 2ನೇ ದೇವರಾಯನ ಆಸ್ಥಾನಕ್ಕೆ ಬಂದಿದ್ದ ಪರ್ಶಿಯಾದ ರಾಯಭಾರಿ. ಹಿಸ್ಟರಿ ಆಫ್ ಪರ್ಷಿಯಾ ಎಂಬ ಕೃತಿಯಲ್ಲಿ ವಿಜಯನಗರದ ಸಾಮ್ರಾಜ್ಯದ ವೈಭವ ಆಳ್ವಿಕೆ ಬಗ್ಗೆ ಬರೆದಿದ್ದಾನೆ. ವಿಜಯನಗರದ ಬಗ್ಗೆ ತಿಳಿಸುವ ಇತರೆ ಪ್ರವಾಸಿಗಳೆಂದರೆ ನಿಕೋಲೋಕಾಂಟಿ, ಬಾರ್ಬೋಸಾ, ಡೊಮಿಂಗೊಪೈಯಾಸ್, ನಿಕೆಟಿನ್‌ರು.

**ಬಾಬರ್** – ಮೊಗಲ್ ದೊರೆ. ಈತ ಭಾರತದ ಭೂಗೋಳ ಕುರಿತು ಬಾಬರ್‌ನಾಮ ಬರೆದಿದ್ದಾನೆ. ಮೊಗಲ್‌ರ ಆಸ್ಥಾನಕ್ಕೆ ಭೇಟಿ ನೀಡಿ ಪ್ರವಾಸ ಕಥನ ರಚಿಸಿದ ಇತರರೆಂದರೆ ರಾಲ್ಫ್‌ಫಿಚ್, ಮೌನ್ಸೆರಾಟ್, ಸರ್ ಥಾಮಸ್ ರೋ, ಪೆಲ್ಸಾರ್ಟ್ ಟ್ರಾವರ್ನಿಯರ್, ಪೀಟರ್‌ಮುಂಡಿ, ಪೀಟರ್ ಡೆಲ್‌ವೆಲ್ಲೆ ಮುಂತಾದವರು.

**ಫ್ರಾನ್ಸಿಸ್ ಬುಖಾನನ್** – ಇಂಗ್ಲಿಷ್ ಅಧಿಕಾರಿ. ಈತ ಮದ್ರಾಸ್ ರಾಜ್ಯ, ಟಿಪ್ಪು ರಾಜ್ಯಗಳಲ್ಲಿ ಸಂಚಿರಿಸ. Journey from Madras through the states of Mysore Malabar and Canara ಎಂಬ ಕೃತಿ ರಚಿಸಿದನು.

**ಕರ್ನಲ್ ಟಾಡ** – ರಜಪುಟಾನದಲ್ಲಿ ಸಂಚರಿಸಿ Annals of Rajastan ಎಂಬ ಕೃತಿ ರಚಿಸಿದನು. ಇವು ಬರಿ ಪ್ರವಾಸ ಕಥನಗಳಷ್ಟೆ ಅಲ್ಲದೆ ಉನ್ನತಮಟ್ಟದ ಇತಿಹಾಸ ಆಕರ ಕೃತಿಗಳೂ ಆಗಿವೆ.

## ಕರ್ನಾಟಕ ಪ್ರವಾಸೋದ್ಯಮ

ಕರ್ನಾಟಕ ತನ್ನ ವೈವಿಧ್ಯಮಯ ಸಂಸ್ಕೃತಿಯಿಂದ ಪ್ರಸಿದ್ದಿ ಪಡೆದಿದ್ದು, ಅತಿ ಪ್ರಾಚೀನ ನೃತ್ಯ ನಾಟಕದಲ್ಲೊಂದಾದ ಯಕ್ಷಗಾನದಿಂದ, ಹಂಪಿಯ ಮೌನ ಬಂಡೆಗಳ ಕಲಾಕೃತಿಯವರೆಗೆ, ವಿಜಯಪುರದ ಅದ್ಭುತ ಇಸ್ಲಾಮಿಕ್ ವಾಸ್ತುಶಿಲ್ಪದಿಂದ, ಬೇಲೂರು ಹಾಗೂ ಹಳೆಯ ಬೀಡಿನ ಅದ್ಭುತ ಶಿಲ್ಪಕಲೆಯಿಂದ ಕೂಡಿದ ದೇವಸ್ಥಾನಗಳವರೆಗೆ, ವಿಶ್ವದ ಅತಿ ಎತ್ತರದ ಏಕಶಿಲೆಯ ಅತಿ ಗಾಂಭೀರ್ಯದಿಂದಿರುವ ಹಾಗೂ ವಿಶ್ವಕ್ಕೆ ಶಾಂತಿ ಸಂದೇಶ ಸಾರುವ ಸುಂದರ ಮೂರ್ತಿ ಶ್ರವಣಬೆಳಗೊಳದ ಬಾಹುಬಲಿಯಿಂದ ಹಿಡಿದು ಧುಮ್ಮಿಕ್ಕುವ ವಿಶ್ವವಿಖ್ಯಾತ ಜೋಗ ಜಲಪಾತ

ಭೋರ್ಗರೆಯುವ ಅರಬ್ಬೀ ಸಮುದ್ರದವರೆಗೆ ಕರ್ನಾಟಕದಲ್ಲಿದ್ದು – ಇದು ಒಂದು ರೀತಿಯಲ್ಲಿ ಪುಟ್ಟ ವಿಶ್ವವಾಗಿದೆ. ಭಾರತದ ವೈವಿಧ್ಯತೆಯಲ್ಲಿ ಏಕತೆ ಎಂಬ ತತ್ವವನ್ನು ಪ್ರಚಲಿತ ಪಡಿಸುತ್ತದೆ.

ಕರ್ನಾಟಕದ ಪ್ರಾಚೀನತೆ, ಪರಂಪರೆ, ಯೋಗ, ಆಯುರ್ವೇದ, ಪ್ರಾಕೃತಿಕ ಆಕರ್ಷಣೆಗಳು, ಸಾಂಸ್ಕೃತಿಕ ಪರಂಪರೆ, ವನ್ಯಧಾಮಗಳು, ಪಕ್ಷಿಧಾಮಗಳು, ವಿಶ್ವದ ಹತ್ತರಲ್ಲಿ ಒಂದಾದ ಅದ್ಭುತ ಜೀವ ವೈವಿಧ್ಯದ ತಾಣವಾದ ಪಶ್ಚಿಮಘಟ್ಟಗಳು – ಇವೆಲ್ಲ ಕರ್ನಾಟಕದ ಪ್ರವಾಸೋದ್ಯಮದ ಅತಿ ಆಕರ್ಷಣೀಯ ಸ್ಥಳವಾಗಿದೆ. ಹಿಮ ಒಂದನ್ನು ಬಿಟ್ಟು ಪ್ರವಾಸಿಗರು ಇಷ್ಟಪಡುವ ಎಲ್ಲವೂ ಇಲ್ಲಿದೆ. ಇವುಗಳನ್ನು ನಾವು ಇನ್ನೂ ಹೆಚ್ಚು ಸಮರ್ಪಕವಾಗಿ ಮಾರಾಟ ಮಾಡಬೇಕಾಗಿದೆ. ಭಾರತದಲ್ಲಿ ಕೇರಳ ಪ್ರವಾಸೋದ್ಯಮದಲ್ಲಿ ಮೊದಲನೇ ಸ್ಥಾನದಲ್ಲಿದ್ದು ಕರ್ನಾಟಕ ನಾಲ್ಕನೇ ಸ್ಥಾನದಲ್ಲಿದೆ. ಕೇರಳದ ಪ್ರವಾಸೋದ್ಯಮ ಆಕರ್ಷಣೆ ವಿಶೇಷವಾಗಿ ಆಯುರ್ವೇದ ಹಾಗೂ ಹಿನ್ನೀರಿಗೆ ಸೀಮಿತವಾಗಿದೆ. ಕರ್ನಾಟಕದಲ್ಲಿ ಪಾರಂಪರಿಕ ಪ್ರವಾಸೋದ್ಯಮ, ಆರೋಗ್ಯ ಪ್ರವಾಸೋದ್ಯಮ, ಸಾಹಸ ಪ್ರವಾಸೋದ್ಯಮ, ಪ್ರಾಕೃತಿಕ ಪ್ರವಾಸೋದ್ಯಮ, ಶೈಕ್ಷಣಿಕ ಪ್ರವಾಸೋದ್ಯಮ, ಸಮುದ್ರತೀರದ ಪ್ರವಾಸೋದ್ಯಮ ಹೀಗೆ ವಿವಿಧ ರೀತಿಯ ಪ್ರವಾಸೋದ್ಯಮಕ್ಕೆ ಸಾಕಷ್ಟು ಅವಕಾಶಗಳಿವೆ. ಕೇರಳ ಪ್ರವಾಸೋದ್ಯಮ ಸುಮಾರು ಆ ರಾಜ್ಯದ ಒಟ್ಟು ದೇಶಿಯ ಉತ್ಪನ್ನ 28% ಕೊಡುಗೆ ನೀಡುತ್ತಿದೆ. ನಮ್ಮ ರಾಜ್ಯದಲ್ಲಿ ಅದರ ಕೊಡುಗೆ 6% ರಿಂದ 7% ಇದೆ. ಕರ್ನಾಟಕ ರಾಜ್ಯದ ಮುಂಗಡ ಪತ್ರದಲ್ಲಿ ಶೇಕಡ 0.5% ಕಡಿಮೆ ಪ್ರವಾಸೋದ್ಯಮಕ್ಕೆ ಮೀಸಲಿಡಲಾಗಿದೆ.[19] ಅದನ್ನು ಕೂಡ ಪ್ರವಾಸೋದ್ಯಮ ಇಲಾಖೆ ಸಂಪೂರ್ಣ ಖರ್ಚು ಮಾಡದೇ ಹಣವನ್ನು ಹಿಂತಿರುಗಿಸುವ ಉದಾಹರಣೆ ಇದೆ.

**ಪ್ರಸ್ತುತ ಪರಿಸ್ಥಿತಿ:** ವ್ಯಾಪಾರಿ ಪ್ರವಾಸೋದ್ಯಮ ಬೆಂಗಳೂರಿನಲ್ಲಿದೆ. ಉಳಿದ ಪ್ರದೇಶವನ್ನು ಸಾಧಾರಣವಾಗಿ ಮೂರು ವಿಭಾಗಗಳಲ್ಲಿ ವಿಂಗಡಿಸಬಹುದು. ಮೈಸೂರು ಪ್ರದೇಶ, ಕರಾವಳಿ ಪ್ರದೇಶ ಹಾಗೂ ಉತ್ತರ ಕರ್ನಾಟಕ.

**ಮೈಸೂರು ಪ್ರದೇಶ:** ಮೈಸೂರು, ಚಾಮರಾಜನಗರ, ಮಡಿಕೇರಿ, ಮಂಡ್ಯ ಹಾಗೂ ಹಾಸನಗಳನ್ನು ಈ ವಿಭಾಗಕ್ಕೆ ಸೇರಿಸಬಹುದು. ಕಡಲು ಹಾಗೂ ಹಿಮವನ್ನು ಬಿಟ್ಟರೆ ಪ್ರವಾಸಿಗರು ಇಷ್ಟಪಡುವ ಎಲ್ಲವೂ ಇದೆ. ಕಳೆದ ವರ್ಷ ಈ ಲೇಖನ ಈ ಪ್ರದೇಶದ ಒಂದು ಸಮೀಕ್ಷೆ ಮಾಡಿದ್ದಾರೆ. ಈ ಪ್ರದೇಶಕ್ಕೆ ವರ್ಷಕ್ಕೆ ಸರಾಸರಿ 32 ರಿಂದ 35 ಲಕ್ಷ ಪ್ರವಾಸಿಗರು ಭೇಟಿಕೊಟ್ಟಿರುತ್ತಾರೆ. ಇದರಲ್ಲಿ ಬಹುತೇಕರು ದೇಶೀಯರು, ಹೊರದೇಶದ ಪ್ರವಾಸಿಗರ ಸಂಖ್ಯೆ ಒಂದು ಲಕ್ಷವನ್ನೂ ಸಹ ಮೀರಿಲ್ಲ. ಸುಮಾರು 60,000 ಕುಟುಂಬ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಈ ಕೈಗಾರಿಕೆಯಲ್ಲಿ

ತೊಡಗಿಕೊಂಡಿದ್ದಾರೆ. ಸುಮಾರು 2,50,000 ಜನರು ವಿವಿಧ ರೀತಿಯ ಪ್ರವಾಸೋದ್ಯಮದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.[20] ಈ ಪ್ರದೇಶದಲ್ಲಿ ಸರಾಸರಿ ವರ್ಷಕ್ಕೆ ಒಂದು ಸಾವಿರ ಕೋಟಿ ವ್ಯವಹಾರ ಪ್ರವಾಸೋದ್ಯಮದಲ್ಲಿ ಆಗುತ್ತಿದೆ. ಇದು ಅತಿ ಸಾಮಾನ್ಯನಿಂದ ಹಿಡಿದು ಅತ್ಯಂತ ಮೇಧಾವಿಯ ವರೆಗೆ ಉದ್ಯೋಗ ನೀಡುತ್ತದೆ. ಪ್ರವಾಸೋದ್ಯಮ ಅತಿ ಕಡಿಮೆ ಮಾಲಿನ್ಯ ಮಾಡುವ ಕೈಗಾರಿಕೆಯಾಗಿದೆ.

**ಕರ್ನಾಟಕ ದರ್ಶನ:** ನಮಗೆ ಪಾರಂಪರಿಕವಾಗಿ ಒಂದು ಪ್ರವಾಸಿ ತಾಣದ ಜೊತೆಗೆ ಪ್ರವಾಸಿ ತಾಣದ ಸೃಷ್ಟಿಗೂ ನಾವು ಪ್ರಯತ್ನ ಮಾಡಬೇಕು. ಈ ಲೇಖಕ ಹಾಲೆಂಡಿನಲ್ಲಿ ಮಧುರಾಡ್ಯಾಂ (ಆಂಸ್ಟ್ರಡ್ಯಂ ಹತ್ತಿರ) ಭೇಟಿ ಕೊಟ್ಟಿದ್ದಾಗ ಹಾಲೆಂಡಿನಲ್ಲಿರುವ ಎಲ್ಲಾ ತಾಣಗಳನ್ನು ಅಲ್ಲಿ ಸಣ್ಣ ಪ್ರಮಾಣದಲ್ಲಿ ಸೃಷ್ಟಿಸಲಾಗಿದೆ. ಅದೇ ಮಾದರಿಯಲ್ಲಿ ಮೈಸೂರು, ಮಡಿಕೇರಿ, ಚಾಮರಾಜನಗರ ನಡುವೆ ಒಂದು 200 ಎಕರೆ ಸ್ಥಳ ಗುರುತಿಸಿ ಅಲ್ಲಿ "ಕರ್ನಾಟಕ ದರ್ಶನ" ಎಂಬ ಹೊಸ ತಾಣವನ್ನು ಸೃಷ್ಟಿ ಮಾಡಬೇಕು. ಕರ್ನಾಟಕದ ಎಲ್ಲಾ ಜಿಲ್ಲೆಗೂ ಒಂದು ಅಥವಾ ಎರಡು ಎಕರೆ ಸ್ಥಳಕೊಟ್ಟು ಜಿಲ್ಲಾಡಳಿತ ತಮ್ಮ ಜಿಲ್ಲೆಯಲ್ಲಿರುವ ಎಲ್ಲಾ ಪ್ರವಾಸಿ ತಾಣಗಳ ಕಿರುಕೃತಿ ಸೃಷ್ಟಿಸಬೇಕು. ಅದರ ಜೊತೆಗೆ ಆಯಾ ಜಿಲ್ಲೆಯ ಕರಕುಶಲದಲ್ಲಿ ತೊಡಗಿರುವವರಿಗೆ ಸ್ಥಳಾವಕಾಶ ಮಾಡಿಕೊಟ್ಟು ಅವರು ಅಲ್ಲಿಯೇ ತಮ್ಮ ಕರಕುಶಲ ವಸ್ತುಗಳನ್ನು ತಯಾರಿಸಿ ಮಾರಾಟಮಾಡುವ ವ್ಯವಸ್ಥೆ ಮಾಡಬೇಕು. ಆಗ ಕುಶಲ ಕಾರ್ಮಿಕರಿಗೆ ಉದ್ಯೋಗ ಕಲ್ಪಿಸುವುದರೊಂದಿಗೆ ಆ ಕಲೆಗಳನ್ನು ಉಳಿಸಬಹುದು.

ಎರಡು ಅಥವಾ ಮೂರು ಸಭಾಂಗಣ ಕಟ್ಟಿಸಿ ಅಲ್ಲಿ ವಿವಿಧ ರೀತಿಯ ಜಾನಪದ, ಸಂಗೀತ, ನೃತ್ಯ ಮುಂತಾದವುಗಳಿಗೆ ಅವಕಾಶ ಮಾಡಿಕೊಡಬೇಕು. ಕೋಲಾಟ, ಡೊಳ್ಳುಕುಣಿತ, ಗೊರವರಕುಣಿತ, ಕಂಸಾಳೆ, ವೀರಗಾಸೆ, ತೊಗಲುಗೊಂಬೆಯಾಟ, ಸುಗ್ಗೀಕುಣಿತ, ಯಕ್ಷಗಾನ– ಹೀಗೆ ಹಲವು ಹತ್ತು ಜಾನಪದ ಕಲೆಗಳಿಗೆ ಸರಿಯಾದ ಪ್ರೋತ್ಸಾಹ ಇಲ್ಲದೆ ನಶಿಸಿ ಹೋಗುತ್ತಿದೆ. ಆ ಎಲ್ಲಾ ರೀತಿಯ ಕರಕುಶಲ ಕೆಲಸಗಾರರಿಗೆ ಹಾಗೂ ಜಾನಪದ ಕಲಾವಿದರಿಗೆ ಪ್ರೋತ್ಸಾಹ ಕೊಡುವುದರ ಜೊತೆಗೆ ಆ ಕಲೆಗಳನ್ನು ಉಳಿಸಬಹುದು. ಡಿಸ್ನಿಲ್ಯಾಂಡ್ ಮಾದರಿಯಲ್ಲಿ ಹಲವು ಆಟಿಕೆಗಳನ್ನು ಅಳವಡಿಸಬೇಕು, ಇದು ಪ್ರವಾಸಿಗರಿಗೆ ರೋಮಾಂಚನವನ್ನು ಕೊಡುತ್ತದೆ. ಇದಕ್ಕೆ ಸರ್ಕಾರ ಸಾವಿರಾರು ಕೋಟಿ ಖರ್ಚುಮಾಡಬೇಕಾಗಿಲ್ಲ.

ಮೂಲ ಸೌಕರ್ಯ ಒದಗಿಸಿಕೊಟ್ಟರೆ ಖಾಸಗಿ ಹೊಡಿಕೆದಾರರು ಈ ಎಲ್ಲ ಅನುಕೂಲ ಒದಗಿಸಿಕೊಡುತ್ತಾರೆ. ಸರಿಯಾದ ಗುಣಾತ್ಮಕ ಸೇವೆ ಒದಗಿಸಿದರೆ, ಪ್ರವಾಸಿಗರು ಹಣ ಕೊಡಲು

ಹಿಂದೆ–ಮುಂದೆ ನೋಡುವುದಿಲ್ಲ. ಮೈಸೂರು, ಕೊಡಗಿಗೆ ಬಂದ ಪ್ರವಾಸಿಗರು, ಕನಿಷ್ಠ ಒಂದು ದಿನ ಇಲ್ಲಿ ಸಂತೋಷಪಡುವ ಅವಕಾಶವನ್ನು ಕಲ್ಪಿಸಬೇಕು. ಕರ್ನಾಟಕ ಸರ್ಕಾರ 2014–15ನೇ ಸಾಲಿನ ಮುಂಗಡ ಪತ್ರದಲ್ಲಿ ಮೈಸೂರು ಪ್ರದೇಶದ ಪ್ರವಾಸೋದ್ಯಮ ಅಭಿವೃದ್ಧಿಗೆ "ಕಾವೇರಿ ಪ್ರವಾಸೋದ್ಯಮ ಅಭೀವೃದ್ಧಿ" ಎಂದು ಘೋಷಣೆ ಮಾಡಿ ಒಂದು ವರ್ಷ ಸಂಪೂರ್ಣವಾಗಿ ಕಳೆದಿದೆ, ಆದರೆ ಈ ಪ್ರಾಧಿಕಾರ ಇನ್ನು ಅಸ್ತಿತ್ವಕ್ಕೆ ಬಂದಿಲ್ಲ. ಈ ಕೆಂಪುಪಟ್ಟಿಯಿಂದ ನಾವು ಹೊರಗೆ ಬಂದು ಕಾಲಮಿತಿಯ ಆಧಾರದ ಮೇಲೆ ಪ್ರವಾಸೋದ್ಯಮ ಅಭಿವೃದ್ಧಿ ಕಾರ್ಯಕ್ರಮವನ್ನು ಅನುಷ್ಠಾನಕ್ಕೆ ತರಬೇಕು. ಇದೇ ರೀತಿ ಕರಾವಳಿ ಪ್ರದೇಶ ಹಾಗೂ ಉತ್ತರ ಕರ್ನಾಟಕದಲ್ಲೂ ಕೂಡ ಸುಸ್ಥಿರ ಪ್ರವಾಸೋದ್ಯಮದ ಹಲವು ಯೋಜನೆಗಳನ್ನು ಅನುಷ್ಠಾನಗೊಳಿಸಬಹುದು.

ಈ ಪ್ರಾಧಿಕಾರ ಒಬ್ಬ ಹಿರಿಯ ಐಎಎಸ್ ಅಧಿಕಾರಿಯ ಮಾರ್ಗದರ್ಶನದಲ್ಲಿ ಸರ್ಕಾರಿ ವಿವಿಧ ಇಲಾಖೆಯ ಅಧಿಕಾರಿಗಳ ಜೊತೆಗೆ ಪ್ರವಾಸೋದ್ಯಮ ತಜ್ಞರನ್ನು ಹಾಗೂ ಪ್ರವಾಸೋದ್ಯಮದಲ್ಲಿ ತೊಡಗಿಸಿಕೊಂಡವರ ವಿವಿಧ ಸಂಘಗಳ ಪ್ರತಿನಿಧಿಗಳನ್ನು ಒಳಗೊಂಡಿರಬೇಕು. ಇದಕ್ಕೆ ಮುಂಗಡ ಪತ್ರದಲ್ಲಿ ನೇರ ಅನುದಾನದ ವ್ಯವಸ್ಥೆಯಾಗಬೇಕು. ಇದು ಸಾಕಷ್ಟು ಚರ್ಚೆ ಹಾಗೂ ಚಿಂತನೆ ನಡೆಸಿ ಮುಂದಿನ 10 ವರ್ಷಗಳಲ್ಲಿ ತೆಗೆದುಕೊಳ್ಳಬೇಕಾದ ಕಾರ್ಯಕ್ರಮ ಹಾಕಿಕೊಂಡು, ಅವುಗಳನ್ನು ಆದ್ಯತೆಯ ಮೇಲೆ ಅನುಷ್ಠಾನಗೊಳಿಸಬೇಕು.

**ಸಾಹಸ ಪ್ರವಾಸೋದ್ಯಮ:** ಹಲವು ರೀತಿಯ ಸಾಹಸ ಪ್ರವಾಸೋದ್ಯಮಕ್ಕೆ ಇಲ್ಲಿ ಅವಕಾಶವಿದೆ. ಇದರ ತರಬೇತಿಗೆ ತೆಗೆದುಕೊಳ್ಳಬೇಕಾದ ಮುನ್ನೆಚ್ಚರಿಕೆ ಕ್ರಮ, ಮಾರ್ಗದರ್ಶಿ ಸೂತ್ರದ ಅನುಷ್ಠಾನ, ಮುಂತಾದವುಗಳನ್ನು ನೋಡಿಕೊಳ್ಳುವ ವ್ಯವಸ್ಥೆ ಇಲ್ಲ. ನೀರು, ಭೂಮಿ ಹಾಗೂ ಆಕಾಶ ಸಾಹಸ ಆಟಕ್ಕೆ ಒಂದು ಪ್ರಾಧಿಕಾರ ರಚನೆ ಮಾಡಿ ಅವುಗಳನ್ನು ಸೂಕ್ತರೀತಿಯಲ್ಲಿ ನಿಯಂತ್ರಿಸುವ ವ್ಯವಸ್ಥೆಮಾಡಬೇಕು. ಅವುಗಳಿಗೆ ಸೂಕ್ತ ತರಬೇತಿ, ತೆಗೆದುಕೊಳ್ಳಬೇಕಾದ ಸುರಕ್ಷತಾಕ್ರಮ ಹಾಗೂ ಅವುಗಳ ನಿಯಂತ್ರಣದ ಬಗ್ಗೆ ಈ ಪ್ರಾಧಿಕಾರ ನಿಗಾ ಇಡಬೇಕು. ಸಾಹಸ ಕ್ರೀಡೆಯಲ್ಲಿ ತೊಡಗಿರುವ ಪ್ರತಿ ಸಂಸ್ಥೆಯೂ ಈ ಪ್ರಾಧಿಕಾರದಲ್ಲಿ ಕಡ್ಡಾಯವಾಗಿ ನೊಂದಾವಣೆ ಮಾಡಿಕೊಂಡಿರಬೇಕು. ಈ ಪ್ರಾಧಿಕಾರ ಸೂಕ್ತ ಪ್ರಮಾಣಪತ್ರ ನೀಡಬೇಕು. ಈ ಪ್ರಮಾಣ ಪತ್ರವನ್ನು ಪ್ರತಿ 3 ವರ್ಷಕ್ಕೊಮ್ಮೆ ನವೀಕರಿಸಬೇಕು. ನವೀಕರಿಸುವ ಮೊದಲು ಮತ್ತೊಮ್ಮೆ ಎಲ್ಲಾ ಉಪಕರಣಗಳನ್ನು ಪರೀಕ್ಷೆಮಾಡಿ ಪ್ರಮಾಣಪತ್ರ ನೀಡಬೇಕು.

**ವೃತ್ತಿಪರ ಮಾರ್ಗದರ್ಶಿಗಳು:** ಪ್ರತಿ ಪ್ರವಾಸಿ ತಾಣದಲ್ಲಿ ವೃತ್ತಿಪರ ಮಾರ್ಗದರ್ಶಿಗಳ ಅವಶ್ಯಕತೆ ಇದೆ. ಈ ಮಾರ್ಗದರ್ಶಿಗಳು ಆಯಾ ಪ್ರದೇಶದ ರಾಯಭಾರಿಗಳು. ಅವರಿಗೆ ಪ್ರತಿ ಪ್ರವಾಸಿ ತಾಣದ ಚಾರಿತ್ರಿಕ, ಭೌಗೋಳಿಕ ಹಾಗೂ ಪ್ರಾಕೃತಿಕ ವಿಷಯದ ಸಂಪೂರ್ಣ ಮಾಹಿತಿ ಇರಬೇಕು. ಅದನ್ನು ಅವರು ಅತಿ ಸುಂದರ ಹಾಗೂ ವರ್ಣರಂಜಿತವಾಗಿ ಕಥೆ ರೂಪದಲ್ಲಿ ಹೇಳುವ ಕಲೆ ಕಲಿತಿರಬೇಕು. ಚೀನಾದಲ್ಲಿ ಮಾರ್ಗದರ್ಶಿಗಳಿಗೋಸ್ಕರ ಮೂರು ವರ್ಷದ ಪದವಿ ಅಧ್ಯಯನದ ಕೋರ್ಸ್ ಇದೆ. ಫ್ರಾನ್ಸಿನಲ್ಲಿ ಸ್ನಾತಕೋತ್ತರ ಪದವೀಧರರು ಹಾಗೂ ಡಾಕ್ಟರೇಟ್ ಆದವರು ಮಾರ್ಗದರ್ಶಿಗಳಿಗೆ ಶೈಕ್ಷಣಿಕ ಅರ್ಹತೆ ಅಥವಾ ಸೂಕ್ತ ತರಬೇತಿ ಯಾವುದೂ ಇಲ್ಲ. ಈ ಮಾರ್ಗದರ್ಶಿಗಳಿಗೆ ಭಾಷೆಯ ಮೇಲೆ ಪ್ರಭುತ್ವ ಅಥವಾ ವಿಷಯದ ಜ್ಞಾನ ಎರಡೂ ಇರುವುದಿಲ್ಲ. ಆಕರ್ಷಣೀಯವಾಗಿ ಮಾರ್ಗದರ್ಶನ ಮಾಡುವ ಕಲೆಯೂ ಗೊತ್ತಿರುವುದಿಲ್ಲ. ಕೆಲವೊಂದು ವಿಷಯವನ್ನು ಬಾಯಿಪಾಠ ಮಾಡಿಕೊಂಡು ಹೇಳುತ್ತಾರೆ. ಇದರಿಂದ ಪ್ರವಾಸೋದ್ಯಮ ಬೆಳವಣಿಗೆ ಸಮರ್ಪಕವಾಗಿ ಆಗುವುದಿಲ್ಲ.

**ಗ್ರಾಮೀಣ ಪ್ರವಾಸೋದ್ಯಮ:** ಇದು ಅತಿ ಹೆಚ್ಚಿನ ನಗರೀಕರಣವನ್ನು ತಡೆಯುವಲ್ಲಿ ಯಶಸ್ವಿಯಾಗಬಹುದು. ನಮ್ಮ ಗ್ರಾಮೀಣ ಸಂಸ್ಕೃತಿಗೆ ವಿಭಿನ್ನವಾಗಿದೆ. ಅವರ ಉಡುಗೆ, ತೊಡುಗೆ, ಜಾನಪದ ಸಂಸ್ಕೃತಿ ಪ್ರಾಕೃತಿಕ ತಾಣಗಳು, ಸಂಪ್ರದಾಯಕತೆ, ನೃತ್ಯ, ಸಂಗೀತ ಮುಂತಾದ ಹಲವು ಹತ್ತು ಕಾರ್ಯಕ್ರಮವನ್ನು ಹಾಕಿಕೊಂಡು ಪ್ರವಾಸೋದ್ಯಮವನ್ನು ಅಭಿವೃದ್ಧಿಪಡಿಸಬಹುದು. ಆದರೆ ಗ್ರಾಮೀಣ ಸಂಸ್ಕೃತಿಯ ವ್ಯವಸ್ಥೆಗೆ ಧಕ್ಕೆ ಬರದಂತೆ, ಸುಸ್ಥಿರ ಪ್ರವಾಸೋದ್ಯಮವನ್ನು ಬೆಳೆಸಬೇಕು. ಇದಕ್ಕೆ ಕೇಂದ್ರ ಸರ್ಕಾರದಿಂದಲೂ ಆರ್ಥಿಕ ಸಹಾಯ ದೊರೆಯುತ್ತದೆ. ಗ್ರಾಮೀಣ ಪ್ರವಾಸೋದ್ಯಮ ಎಂದ ಕೂಡಲೇ ನಮ್ಮ ಉದ್ದಿಮೆದಾರರು ರೆಸಾರ್ಟ್ ಹಾಗೂ ಪಂಚತಾರಾ ಹೋಟೆಲ್ ಬಗ್ಗೆ ವಿಚಾರ ಮಾಡುತ್ತಾರೆ. ಇದು ಸಂಪೂರ್ಣ ತಪ್ಪು. ಪ್ರವಾಸಿಗರ ವಾಸ್ತವ್ಯಕ್ಕೆ ಅಚ್ಚುಕಟ್ಟಾದ ಹಾಗೂ ಸ್ವಚ್ಚವಾದ ಸಣ್ಣ-ಸಣ್ಣ ಕಾಟೇಜುಗಳನ್ನು ಅತಿ ಕಡಿಮೆ ಖರ್ಚಿನಲ್ಲಿ ಕಟ್ಟಬಹುದು. ಕಾಂಕ್ರೀಟ್ ಕಾಡು ಬೆಳೆಸದೇ, ಸ್ಥಳೀಯವಾಗಿ ಸಿಗುವ ಪದಾರ್ಥಗಳನ್ನು ಉಪಯೋಗಿಸಿ, ಕಲಾತ್ಮಕವಾಗಿ ವಾಸ್ತವ್ಯದ ವ್ಯವಸ್ಥೆ ಮಾಡಬಹುದು. ಅದೇ ರೀತಿ ಸ್ಥಳೀಯವಾಗಿ ಸಿಗುವ ಆಹಾರವನ್ನೇ ಸ್ವಚ್ಛ ಹಾಗೂ ರುಚಿಯಾಗಿ ತಯಾರಿಸಬಹುದು. ಇದರಿಂದ ಪರಿಸರ ರಕ್ಷಣೆ ಮಾಡಿಕೊಂಡು ಪ್ರವಾಸೋದ್ಯಮವನ್ನು ಬೆಳೆಸಬಹುದು.

ಹೀಗೆ ಕರ್ನಾಟಕದಲ್ಲಿ ಪ್ರವಾಸೋದ್ಯಮವನ್ನು ಬೆಳೆಸಲು ವಿಪುಲ ಅವಕಾಶಗಳಿವೆ. ಇದನ್ನು ಬೆಳೆಸಲು ಬೇಕಾದ ರಾಜಕೀಯ ಇಚ್ಛಾ ಶಕ್ತಿಯ ಕೊರತೆ ಹಾಗೂ ಅಧಿಕಾರಿಗಳ

ಮುಂದಾಲೋಚನೆ ಮತ್ತು ಬದ್ಧತೆಯ ಕೊರತೆ ಕಾಣುತ್ತದೆ. ಪ್ರವಾಸೋದ್ಯಮದಲ್ಲಿ ತೊಡಗಿಕೊಂಡವರೆಲ್ಲರೂ ಇನ್ನೂ ಹೆಚ್ಚು ವೃತ್ತಿಪರತೆಯಿಂದ ಹಾಗೂ ಬದ್ಧತೆಯಿಂದ ಕೆಲಸ ಮಾಡಿದರೆ ಕರ್ನಾಟಕ ಪ್ರವಾಸೋದ್ಯಮವನ್ನು ಭಾರತದಲ್ಲಿ ಒಂದನೇ ಸ್ಥಾನಕ್ಕೆ ತೆಗೆದುಕೊಂಡು ಹೋಗಲು ಸಾಧ್ಯವಾಗುತ್ತದೆ.

## ಚಿಕ್ಕಮಗಳೂರು ಜಿಲ್ಲೆಯ ಪ್ರವಾಸಿ ತಾಣಗಳ ಸಮೀಕ್ಷೆ

ಕರ್ನಾಟಕ ರಾಜ್ಯದ ಚಿಕ್ಕಮಗಳೂರು ಜಿಲ್ಲೆಯು ನಿಸರ್ಗ ಸೌಂದರ್ಯದಷ್ಟೇ ಸಾಂಸ್ಕೃತಿಕ ಸಂಪತ್ತು ಸಹ ದಟ್ಟವಾಗಿ ಪಸರಿಸಿದೆ. ಸಹಸ್ರ ಸಹಸ್ರ ವರ್ಷಗಳಿಂದ ನಿರಂತರವಾಗಿ ಪ್ರವಹಿಸುತ್ತ ಕವಿ, ಋಷಿ, ಸಂತ, ಕಲಾವಿದರಿಂದ ನಾನಾ ಜ್ಞಾನಕ್ಷೇತ್ರಗಳ ತಜ್ಞರಿಂದ ಪರಿಪುಷ್ಟಿಗೊಳುತ್ತ ಸನಿಹಕ್ಕೆ ಬಂದ ಅನ್ಯ ಸಂಸ್ಕೃತಿಗಳನ್ನು ತನ್ನತನಕ್ಕೆ ಭಂಗ ಬರದಂತೆ ಸಮನ್ವಯ ವಿಧಾನದಲ್ಲಿ ಗರ್ಭೀಕರಸಿಕೊಳ್ಳುತ್ತ ಜಗತ್ತಿನ ಸಂಸ್ಕೃತಿಯೊಡನೆ ಹೆಗಲೆಣೆಯಾಗಿ ವಿಜೃಂಭಿಸುತ್ತ ಭಾರತೀಯ ಮುಕುಟಾಗ್ರದ ಕೋಹಿನೂರಾಗಿ ರಾರಾಜಿಸುತ್ತಿದೆ.[21]

ಇಂತಹ ಪರಿಸರದಲ್ಲಿ ಚಿಕ್ಕಮಗಳೂರು ಜಿಲ್ಲೆಯಿದ್ದು, ಪವಿತ್ರವಾದ ನದಿಗಳು, ಉನ್ನತ ಶಿಖರಗಳು ಮತ್ತು ಗಿರಿಧಾಮಗಳು ಈ ಜಿಲ್ಲೆಯನ್ನು ಅತ್ಯಂತ ಶ್ರೀಮಂತಗೊಳಿಸಿವೆ.[22] 1865ರ ವರೆಗೆ ಕಡೂರು ಜಿಲ್ಲಾ ಕೇಂದ್ರವಾಗಿತ್ತು. 1947ರಲ್ಲಿ ಕಡೂರು ಜಿಲ್ಲೆ ಚಿಕ್ಕಮಗಳೂರು ಜಿಲ್ಲೆಯಾಗಿ ಪುನರ್ ನಾಮಕರಣ ಹೊಂದಿತು.[23] 1958–59ರ ವರೆಗಿನ ಜಹಾಗೀರ್ ಆಗಿದ್ದ ಶೃಂಗೇರಿ ತಾಲೂಕಾಯಿತು. 1965–66ರಲ್ಲಿ ಕಿಗ್ಗ ಅದಕ್ಕೆ ಸೇರಿತು. ಈಗ ಚಿಕ್ಕಮಗಳೂರು, ಮೂಡಿಗೆರೆ, ಶೃಂಗೇರಿ, ನರಸಿಂಹರಾಜಪುರ, ಕೊಪ್ಪ, ತರೀಕೆರೆ, ಕಡೂರು ತಾಲೂಕುಗಳೆಂದು ವಿಂಗಡಿಸಲಾಯಿತು. ಆಡಳಿತದ ಅನುಕೂಲಕ್ಕಾಗಿ ಈ ಜಿಲ್ಲೆಯನ್ನು ಎರಡು ಉಪವಿಭಾಗಗಳಾಗಿ ಮಾಡಲಾಗಿದೆ. 1973ರಲ್ಲಿ ತರೀಕೆರೆ ಉಪವಿಭಾಗದಲ್ಲಿದ್ದ ಶೃಂಗೇರಿ, ಕೊಪ್ಪ, ತಾಲೂಕುಗಳನ್ನು ಚಿಕ್ಕಮಗಳೂರು ಉಪವಿಭಾಗಕ್ಕೆ ಸೇರಿಸಲಾಯಿತು.

ತರೀಕೆರೆ, ನ.ರಾ.ಪುರ, ಕಡೂರು ತಾಲೂಕುಗಳನ್ನು ತರೀಕೆರೆ ಉಪವಿಭಾಗಕ್ಕೆ ಸೇರಿಸಲಾಗಿದೆ. ಈ ಜಿಲ್ಲೆಯಲ್ಲಿ ಚಿಕ್ಕಮಗಳೂರು, ಶೃಂಗೇರಿ, ಮೂಡಗೆರೆ, ಕೊಪ್ಪ, ನರಸಿಂಹರಾಜಪುರ, ತರೀಕೆರೆ ಮತ್ತು ಕಡೂರು ಎಂಬ ಏಳು ತಾಲೂಕಿಗಳಿವೆ. ಪಶ್ಚಿಮದತ್ತ ದೃಷ್ಟಿ ಹರಿಸಿ..... ಆಗಸದತ್ತ ಬೆಳೆದು ನಿಂತ ಅದ್ಭುತವಾದ ಚಂದ್ರದ್ರೋಣ (ಬಾಬಾಬುಡನ್‌ಗಿರಿ) ಪರ್ವತಾವಳಿ ಸಾಹಸಕ್ಕೆ ಸವಾಲೆಸೆಯುತ್ತದೆ. ಪಶ್ಚಿಮದಿಂದ ಪೂರ್ವಕ್ಕೆ ಮೈದಾನದವರೆಗೆ ಹಬ್ಬಿ ಮಾಯವಾಗುವ ಬೆಟ್ಟದ ಸಾಲು ಅಪೂರ್ವವಾದದ್ದು. ಬಲ್ಲಾಳರಾಯನ ದುರ್ಗದಿಂದ

ಆರಂಭವಾಗುವ ಈ ಬೆಟ್ಟ ಸಾಲು ಪೂರ್ವಕ್ಕೆ ಮಂಡಗದ್ದೆಯವರೆಗೆ ಸಾಗುತ್ತದೆ. ಪೂರ್ವದಲ್ಲಿ ಭದ್ರೆಯ ಬಲ ಭಾಗದಲ್ಲಿರುವುದೇ ಜಾರ್ಗ ಕಣಿವೆ. ಇದು ಬಾಬಾಬುಡನ್‌ನ ಬೆಟ್ಟ ಸಾಲಿನಿಂದ ಆವೃತವಾಗಿದೆ. ರಾಜ್ಯದ ಅತ್ಯಂತ ಉತ್ತುಂಗ ಶಿಖರವಾದ ಗಿರಿ ಪರ್ವತಾವಳಿ ಜಿಲ್ಲೆಯ ಮಧ್ಯಭಾಗದಲ್ಲಿ ಅಕ್ಷಾಂಶ 13.25.46 ಮತ್ತು ರೇಖಾಂಶ 75.45.27[24] ರಲ್ಲಿ ತಲೆ ಎತ್ತಿ ನಿಂತಿದೆ. ಪುರಾಣದಲ್ಲಿ ಚಂದ್ರದ್ರೋಣ ಪರ್ವತವೆಂದು ಉಲ್ಲೇಖಗೊಂಡಿದ್ದು ಕುದುರೆಯ ಗೊರಸಿನಾಕಾರದ ಈ ಬೆಟ್ಟ ಸಾಲು ವಾಯುವ್ಯ ದಿಕ್ಕಿಗೆ ತೆರೆದುಕೊಂಡಿದೆ.

ಚಂದ್ರದ್ರೋಣ ಪರ್ವತ ಸಾಲು ರಾಜ್ಯದ ಅತ್ಯಂತ ಎತ್ತರದ ಶಿಖರವಾದ ಮುಳ್ಳಯ್ಯನಗಿರಿಯನ್ನು ಹೊಂದಿದೆ. ಇದು ಹಿಮಾಲಯ ಮತ್ತು ನೀಲಗಿರಿ ಪರ್ವತಗಳ ಮಧ್ಯ ಉತ್ತರದ ಶಿಖರಗಳಲ್ಲೊಂದಾಗಿದೆ. ಕುದುರೆಮುಖ ಮತ್ತೊಂದು ಉನ್ನತ ಶಿಖರ ಬಾಬಾಬುಡನ್‌ಗಿರಿ ವೇದಾನದಿ ಉಗಮ ಸ್ಥಾನವೂ ಆಗಿದೆ. ಇನ್ನಿತರ ಎತ್ತರದ ಶಿಖರಗಳೆಂದರೆ ದೇವಿರಮ್ಮನ ಗುಡ್ಡ. ಕಲ್ಲತ್ತಗಿರಿ, ಬಾಬಾಬುಡನ್‌ಗಿರಿ, ಹಿಂದೂ ಮುಸ್ಲಿಂರ ಯಾತ್ರಾ ಕ್ಷೇತ್ರವಾಗಿದ್ದು. ಗುರು ದತ್ತಾತ್ರೇಯ ಪೀಠವನ್ನು ಹೊಂದಿದೆ. ಹಲವು ಚಿಕ್ಕ ಜಲಪಾತ, ಇಳಿಜಾರಿನಲ್ಲಿ ಕಾಡು, ಕಾಫಿಖಾನು ಹೊಂದಿರುವ ಬಾಬಾಬುಡನ್‌ಗಿರಿ ಸಾಲಿನಲ್ಲಿ ತಂಪಿನ ತಾಣವೂ ಕಬ್ಬಿಣದ ಅದಿರಿನ ನಿಕ್ಷೇಪವನ್ನೂ ಹೊಂದಿರುವ ಕೆಮ್ಮಣ್ಣುಗುಂಡಿ ಇದೆ.

ಪಶ್ಚಿಮ ಘಟ್ಟದ ಈ ಸೆರಗಿನ ಜಿಲ್ಲೆಯಾದ ಇದು ಮೂರು ಜೀವನದಿಗಳಿಗೆ ಹಾಗೂ ಮೂರು ಉಪನದಿಗಳ ಜನ್ಮ ಭೂಮಿಯು ಹೌದು. ಕೃಷ್ಣನದಿ ಪ್ರವೇಶಕ್ಕೆ ಸೇರುವ ತುಂಗ, ಭದ್ರಾ, ಹಾಗೂ ದಕ್ಷಿಣ ಕನ್ನಡಕ್ಕೆ ಹರಿಯುವ ನೇತ್ರಾವತಿ ದೊಡ್ಡ ನದಿಗಳಾದರೆ ವೇದಾವತಿ ಒಂದು ಉಪನದಿ. ಕಾವೇರಿ ನದಿ ಬಯಲು ಸೇರುವ ಹೇಮಾವತಿ ಹಾಗೂ ಯಗಚಿಯ ಮೂಲ ಸಹ ಚಿಕ್ಕಮಗಳೂರು ಜಿಲ್ಲೆಯದಾಗಿದೆ.[25]

ಪ್ರವಾಸಿಗರ ಸ್ವರ್ಗವಾಗಿರುವ ಚಿಕ್ಕಮಗಳೂರು ಜಿಲ್ಲೆಯಲ್ಲಿ ಪ್ರಮುಖವಾಗಿ ಎರಡು ವಿಧದ ಪ್ರವಾಸಿ ಆಕರ್ಷಣೆಯ ಸ್ಥಳಗಳನ್ನು ಕಾಣಬಹುದು. ಅವುಗಳೆಂದರೆ ಐತಿಹಾಸಿಕ ಪ್ರವಾಸಿ ತಾಣಗಳು ಮತ್ತು ನೈಸರ್ಗಿಕ ಪ್ರವಾಸಿ ತಾಣಗಳು.

**1. ನೈಸರ್ಗಿಕ ಪ್ರವಾಸಿ ತಾಣಗಳು**

- ಮುಳ್ಳಯ್ಯನಗಿರಿ
- ಬಾಬಾಬುಡನ್‌ಗಿರಿ
- ರತ್ನಗಿರಿ ಬೋರೆ

- ಕೆಮ್ಮಣ್ಣುಗುಂಡಿಯ ಕೃಷ್ಣರಾಜೇಂದ್ರ ಗಿರಿಧಾಮ
- ಕಲ್ಲತ್ತಗಿರಿ ಜಲಪಾತ
- ಹೆಬ್ಬೆ ಜಲಪಾತ
- ಸಿರಿಮನೆ ಜಲಪಾತ
- ಮುತ್ತೋಡಿ ಅರಣ್ಯಧಾಮ.... ಇತ್ಯಾದಿ

**2. ಐತಿಹಾಸಿಕ ಪ್ರವಾಸಿ ತಾಣಗಳು**

- ಅಮೃತೇಶ್ವರ ದೇವಾಲಯ, ಅಮೃತಪುರ
- ಬೆಳವಾಡಿಯ ದೇವಾಲಯಗಳು
- ಶ್ರೀ ಕಳಸೇಶ್ವರ ದೇವಾಲಯ, ಕಳಸ
- ಶೃಂಗೇರಿಯ ದೇವಾಲಯಗಳು
- ಶ್ರೀ ಅನ್ನಪೂರ್ಣೇಶ್ವರಿ ದೇವಾಲಯ, ಹೊರನಾಡು
- ಬೀರೂರು ಮತ್ತು ಬಗ್ಗವಳ್ಳಿಯ ದೇವಾಲಯಗಳು. ಇತ್ಯಾದಿ

## ಚಿಕ್ಕಮಗಳೂರಿನಲ್ಲಿ ಕಂಡು ಬರುವ ಹೋಂ ಸ್ಟೇಗಳು

ಚಿಕ್ಕಮಗಳೂರ ಜಿಲ್ಲೆಯಲ್ಲಿ ಇದುವರವಿಗೂ ಪ್ರವಾಸಿಗರ ಅನುಕೂಲಕ್ಕಾಗಿ 29 ಹೋಂ ಸ್ಟೇಗಳು ಕಂಡು ಬರುತ್ತದೆ. ಚಿಕ್ಕಮಗಳೂರು ಜಿಲ್ಲೆಯಲ್ಲಿ ಕಂಡು ಬರುವ ಹೋಂ ಸ್ಟೇಗಳ ಮಾಹಿತಿಯು ಈ ಕೆಳಕಂಡಂತ್ತಿವೆ.

**1. ಗೋಲ್ಡ್ ವಿಭಾಗ**

- ತಿಪ್ಪನಹಳ್ಳಿ ಹೋಂ ಸ್ಟೇ, ತಿಪ್ಪನಹಳ್ಳಿ, ಚಿಕ್ಕಮಗಳೂರು.
  08262–247476 / 9448277408
- ಪ್ರಕೃತಿ ಹೋಂ ಸ್ಟೇ, ತಿಪ್ಪನಹಳ್ಳಿ ಎಸ್ಟೇಟ್, ಚಿಕ್ಕಮಗಳೂರು.
  08262–247475 / 9945518067.
- ವುಡ್‌ವೇ ಹೋಂ ಸ್ಟೇ, ಜಕ್ಕನಹಳ್ಳಿ, ಚಿಕ್ಕಮಗಳೂರು.
  08262–248023 / 9448245201
- ಸೌಧಾಮಿನಿ ಹೋಂ ಸ್ಟೇ, ಹೊಸಳ್ಳಿಪೇಟೆ, ಚಿಕ್ಕಮಗಳೂರು.
  08262–656522 / 980272008

**ಸಿಲ್ವರ್ ವಿಭಾಗ**

- ಕಲ್‌ಗ್ರೀನ್ ವ್ಯಾಲಿ ಹೋಂ ಸ್ಟೇ, ಕೊಪ್ಪ.
  08265–238056/9448530446
- ಕ್ಯಾಸೋಲ್ ರ‍್ಯಾಕ್ ಹೋಂ ಸ್ಟೇ, ಅರೆನೂರು, ಚಿಕ್ಕಮಗಳೂರು.
  9449499225/9446971902
- ಓಜೋನ್ ವ್ಯಾಲಿ ಹೋಂ ಸ್ಟೇ, ಸಂತವೇರಿ, ತರೀಕೆರೆ.
  08261–215078
- ಜೋಶ್ ಹೋಂ ಸ್ಟೇ, ಬಳ್ಳಾವರ, ತರೀಕೆರೆ.
  08261–690656/9449414130
- ಗ್ರೀನ್‌ಡೇಲ್ ಹಾಲಿಡೇ ಹೋಂ ಸ್ಟೇ, ಪಂಡರವಳ್ಳಿ, ಚಿಕ್ಕಮಗಳೂರು.
  9242182548
- ದೇವಗಿರಿ, ಹೋಂ ಸ್ಟೇ, ಅರಿಶಿನಗುಪ್ಪೆ, ಚಿಕ್ಕಮಗಳೂರು
  08262–215186/9448817524
- ಕೆರೆಹಕ್ಲು ಹೋಂ ಸ್ಟೇ, ಅಲ್ದೂರು, ಚಿಕ್ಕಮಗಳೂರು.
  08262–250111/251088
- ರೇಂಜರ್ ಕ್ಯಾಂಪ್ ಹೋಂ ಸ್ಟೇ, ಬಳ್ಳಾವರ, ತರೀಕೆರೆ.
  08261–258138/9448555633
- ಬೃಂದಾವನ ಹೋಂ ಸ್ಟೇ, ಜಕ್ಕನಹಳ್ಳಿ, ಚಿಕ್ಕಮಗಳೂರು.
  08262–248360/9448530483
- ನೇಚರ್ ಕ್ರಾಫ್ಟ್ ಹೋಂ, ಸ್ಟೇ ಜೋಳದಾಳ್, ಚಿಕ್ಕಮಗಳೂರು.
  08262–262026/9972161237
- ದಿ ವಿಲ್ಡ್‌ನೇಸ್ಟ್ ಹೋಂ ಸ್ಟೇ. ಕಲ್ಪತ್ತಿಪುರ, ತರೀಕೆರೆ
  08261–215129/9449137464
- ಸಿನಿಕ್ ಎಕರ್ಸ್ ಹೋಂ ಸ್ಟೇ, ಜ್ಯೋತಿನಗರ, ಚಿಕ್ಕಮಗಳೂರು.
  08262–222817/9448759248
- ಹುಲಿಕಟ್ಟೆ ಹೋಂ ಸ್ಟೇ, ಸುಂಕಸಾಲೆ, ಮೂಡಿಗೆರೆ.
  9448244629

- ಜಪವತಿ ಹೋಂ ಸ್ಟೇ, ದೇವವೃಂದ ಮೂಡಿಗೆರೆ.
  08263–239097/9448211179
- ಬಿಳಗಲಿ ಹೋಂ ಸ್ಟೇ, ಬಿಳಗಲಿ ಹಿರೇಬೈಲ್, ಮೂಡಿಗೆರೆ.
  9448971359
- ಗಿರಿದರ್ಶಿನಿ ಹೋಂ ಸ್ಟೇ, ಕೊಳ್ಳಿಬೈಲು, ಮೂಡಿಗೆರೆ.
  08263–220256/9448272371
- ಪವನ ಹೋಂ ಸ್ಟೇ, ನಿರುವಂಕಿ, ಚಿಕ್ಕಮಗಳೂರು.
  08263–270322
- ವುಡ್ಸ್ ಹೋಂ ಸ್ಟೇ, ಬಾಳೂರು, ಮೂಡಿಗೆರೆ.
  9448025723
- ಗುಡ್ ಅರ್ಥ್ ಹೋಂ ಸ್ಟೇ, ಮಲ್ಲಂದೂರು, ಚಿಕ್ಕಮಗಳೂರು.
  08262–248087/9449917511
- ನಮ್ಮನೆ ಹೋಂ ಸ್ಟೇ, ಮರಸಣಗಿ, ಮೂಡಿಗೆರೆ.
  08263–270034/9880124975
- ಅತಿಥಿ ಹೋಂ ಸ್ಟೇ, ಹೊಸಮನೆ ರಸ್ತೆ, ಚಿಕ್ಕಮಗಳೂರು.
  9448618366
- ಹಂಕಲ್ ವುಡ್ ಹೋಂ ಸ್ಟೇ, ತೊಗರಿಹಂಕಲ್, ಚಿಕ್ಕಮಗಳೂರು.
  08262–230472/9449831473
- ವಿಸ್ಮಯ ಹೋಂ ಸ್ಟೇ, ಅತ್ತಿಗುಂಡಿ, ಚಿಕ್ಕಮಗಳೂರು.
  9243402777
- ಹಿಲ್ ವ್ಯೂ ಹೋಂ ಸ್ಟೇ, ಬನ್ನೂರು ಆಲ್ದೂರು.
  08262–250782/9448387545
- ರಿವರ್ ವ್ಯೂ ಹಾಲಿಡೇಸ್ ಹೋಂ ಸ್ಟೇ, ಹೊನ್ನೆಕೊಪ್ಪ, ಚಿಕ್ಕಮಗಳೂರು.
  9449138229

**2. ಕಲಾಗ್ಯಾಲರಿ ಮತ್ತು ಮ್ಯೂಸಿಯಂ ಮಾಹಿತಿಗಳು**

- ಶಾಂತಿನಿಕೇತನ ಕಲಾಗ್ಯಾಲರಿ, ಶಾಂತಿನಿಕೇತನ ಚಿತ್ರಕಲಾ ಮಹಾವಿದ್ಯಾಲಯ, ಚಿಕ್ಕಮಗಳೂರು.
  08262–239377
- ಕಾಫಿ ಮ್ಯೂಸಿಯಂ, ಕಾಫಿಮಂಡಳಿ ಚಿಕ್ಕಮಗಳೂರು.
  08262–221432

**3. ಚಿಕ್ಕಮಗಳೂರು ಜಿಲ್ಲೆಯ ಟೂರ್ಸ್ & ಟ್ರಾವೆಲ್ಸ್‌ಗಳ ಮಾಹಿತಿಗಳು**

ಚಿಕ್ಕಮಗಳೂರು ಜಿಲ್ಲೆಯಲ್ಲಿ ಇದುವರೆವಿಗೂ 12 ಟೂರ್ಸ್ & ಟ್ರಾವೆಲ್ಸ್‌ಗಳು ಕಂಡು ಬರುತ್ತವೆ. ಇಲ್ಲಿ ಕಂಡು ಬರುವ ಟೋರ್ಸ್ & ಟ್ರಾವೆಲ್ಸ್ ಈ ಕೆಳಕಂಡಂತಿವೆ.

- ಸಚಿನ್ ಟೂರ್ಸ್ ಆಂಡ್ ಟ್ರಾವೆಲ್ಸ್, ಚಿಕ್ಕಮಗಳೂರು.
  08262–237727
- ಶ್ರೀ ಟೂರ್ಸ್ ಆಂಡ್ ಟ್ರಾವೆಲ್ಸ್, ಚಿಕ್ಕಮಗಳೂರು.
  08262–235638
- ಕರ್ನಾಟಕ ಟೂರ್ಸ್ ಆಂಡ್ ಟ್ರಾವೆಲ್ಸ್, ಚಿಕ್ಕಮಗಳೂರು.
  08262–230056
- ನ್ಯಾಷಿನಲ್ ಟೂರ್ಸ್ ಆಂಡ್ ಟ್ರಾವೆಲ್ಸ್, ಚಿಕ್ಕಮಗಳೂರು.
  08262–238574
- ಪ್ರಥಮ್ ಟೂರ್ಸ್ ಆಂಡ್ ಟ್ರಾವೆಲ್ಸ್, ಬೀರೂರು.
  08267–255741
- ಪಟ್ಟಾಭಿ ಟೂರ್ಸ್ ಆಂಡ್ ಟ್ರಾವೆಲ್ಸ್, ಕಳಸ.
  08262–274728
- ಎಸ್.ಎನ್.ಟ್ರಾವೆಲ್ಸ್. ಚಿಕ್ಕಮಗಳೂರು.
  9448334321
- ಆರ್ಕಿಡ್ ಟೂರ್ಸ್ ಆಂಡ್ ಟ್ರಾವೆಲ್ಸ್, ಚಿಕ್ಕಮಗಳೂರು.
  9448539538
- ಟ್ರಾನ್ಸ್‌ಪೋರ್ಟ್ ಕೋ–ಅಪರೇಟಿವ್ ಸೊಸೈಟಿ, ಕೊಪ್ಪ.
  08265–221369 / 221956

- ಮೊಟ್ಲ ಕ್ರೇವ್, ಟೂರ್ ಅಪರೇಟರ್ಸ್, ಚಿಕ್ಕಮಗಳೂರು.
  08262–326929 / 9731242964
- ಝುಡ್ ಪಾಯಿಂಟ್ ಟೂರ್ಸ್ ಆಂಡ್ ಟ್ರಾವೆಲ್ಸ್, ಚಿಕ್ಕಮಗಳೂರು.
  08262–228011 / 9731242964
- ಪ್ರಕೃತಿ ಹಾಲೀಡೇಸ್ ಟೂರ್ಸ್ ಆಂಡ್ ಟ್ರಾವೆಲ್ಸ್, ಚಿಕ್ಕಮಗಳೂರು.
  08262–232022 / 9886638852

### 4. ಚಿಕ್ಕಮಗಳೂರು ಜಿಲ್ಲೆಯ ರೆಸಾರ್ಟ್ಸ್ ಮತ್ತು ಹೋಟೆಲ್‌ಗಳ ಮಾಹಿತಿಗಳು

ಚಿಕ್ಕಮಗಳೂರು ಜಿಲ್ಲೆಯಲ್ಲಿ ಇದುವರೆವಿಗೂ 23 ರೆಸಾರ್ಟ್ಸ್ ಮತ್ತು ಹೋಟೆಲ್‌ಗಳು ಇವೆ. ಅವು ಈ ಕೆಳಕಂಡಂತ್ತಿವೆ

- ದಿ.ಗೇಟ್‌ವೇ ಹೋಟೆಲ್, ಕೆ.ಎಂ.ರಸ್ತೆ, ಚಿಕ್ಕಮಗಳೂರು.
  08262–660660 / 660661
- ದಿ.ಸೆರಾಯ್, ಕೆ.ಎಂ.ರಸ್ತೆ, ಚಿಕ್ಕಮಗಳೂರು.
  08262–224903
- ಈಗಲ್ ಐ ಹಾಲಿಡೇಸ್ ರೆಸಾರ್ಟ್, ಕಡವಂತಿ ಸಂಗಮೇಶ್ವರ ಪೇಟೆ, ಚಿಕ್ಕಮಗಳೂರು. 08262–252153 / 9341415588
- ದಿ.ಪ್ಲಾಂಟರ್ಸ್ ಕೋರ್ಟ್, ಕೆ.ಎಂ.ರಸ್ತೆ, ಚಿಕ್ಕಮಗಳೂರು
  08262–235881
- ಹೋಟೆಲ್ ಮಲ್ನಾಡ್ ಪ್ಯಾರಡೈಸ್, ಐ.ಜಿ.ರಸ್ತೆ, ಚಿಕ್ಕಮಗಳೂರು
  08262–234531 / 232218
- ರಾಜ್‌ಮಹಲ್ ಹೋಟೆಲ್, ಐ.ಜಿ.ರಸ್ತೆ, ಚಿಕ್ಕಮಗಳೂರು
  08262–236415/236452
- ಸೌಂದರ್ಯ ರೆಸಿಡೆನ್ಸಿ, ಐ.ಜಿ.ರಸ್ತೆ, ಚಿಕ್ಕಮಗಳೂರು
  08262–235257
- ಕೃಷ್ಣ ರೆಸಿಡೆನ್ಸಿ, ತಾಲ್ಲೂಕು ಕಛೇರಿ ಹತ್ತಿರ, ಚಿಕ್ಕಮಗಳೂರು.
  08262–230543
- ವಸಂತ ವಿಹಾರ್, ರತ್ನಗಿರಿ ರಸ್ತೆ, ಚಿಕ್ಕಮಗಳೂರು.
  08262–235585

- ಹೋಟೆಲ್ ಮೌಂಟ್ ಪ್ಯಾಲೇಸ್, ಐ.ಜಿ.ರಸ್ತೆ, ಚಿಕ್ಕಮಗಳೂರು.
  08262–237050
- ತೋಟದೂರ್ ಯಾತ್ರಿನಿವಾಸ, ಕಳಸ, ಮೂಡಿಗೆರೆ.
  08263–274699
- ಹೋಟೆಲ್ ಚಂದನ್, ಮಹಾವೀರ್ ರಸ್ತೆ, ಕಳಸ.
  08263–274209 / 274291
- ದೇವಿ ಕಂಫರ್ಟ್, ಹೊರನಾಡು.
  08262–269751
- ದುರ್ಗಾಂಭ ಲಾಡ್ಜ್, ಹೊರನಾಡು.
  08263–269748
- ಜೆ.ಪಿ.ಲಾಡ್ಜ್ ಆಂಡ್ ರೆಸ್ಟೋರೆಂಟ್, ಕೆ.ಸ್.ಆರ್.ಟಿ.ಸಿ. ಹತ್ತಿರ, ಕಡೂರು.
  08267–221373
- ಹೋಟೆಲ್ ಶುಭೋದಯ, ಮುಖ್ಯ ರಸ್ತೆ, ಶೃಂಗೇರಿ.
  08265–551167
- ಶೃಂಗೇರಿ ಯಾತ್ರಿ ನಿವಾಸ, ಶೃಂಗೇರಿ.
  08265–62123
- ಹೊರನಾಡು ದೇವಸ್ಥಾನದ ವಸತಿ ಸೌಕರ್ಯ, ಹೊರನಾಡು.
  08263–274614 / 269714
- ಹೋಟೆಲ್ ಪ್ರೆಸಿಡೆಂಟ್ ಪ್ಯಾಲೆಸ್, ಬಸ್‌ಸ್ಟ್ಯಾಂಡ್ ಹತ್ತಿರ, ಕೊಪ್ಪ.
  08265–477269/477268
- ಸೈಲೆಂಟ್ ವ್ಯಾಲಿ ಕರ್ಪೋರೇಟ್ ರೆಸ್ಸಾರ್ಟ್, ಕಳಸ.
  08263–274793
- ಆಶಾ ಹೋಟೆಲ್, ಬಾಳೆಹೊನ್ನೂರು.
  08266–227720
- ತೋಟಗಾರಿಕೆ ಇಲಾಖೆ, ಅತಿಥಿ ಗೃಹ, ಕೆಮ್ಮಣ್ಣುಗುಂಡಿ.
  08261–237126

- ಕೆ.ಐ.ಓ.ಕೆ.ಸಿ.ಎಲ್ ಅತಿಥಿ ಗೃಹ, ಕುದುರೆಮುಖ.

  08263–254148 / 254114

ಚಿಕ್ಕಮಗಳೂರು ಜಿಲ್ಲೆಯಲ್ಲಿ ಪ್ರವಾಸೋದ್ಯಮ ಇಲಾಖೆಗೆ ಸೇರಿದ ಯಾವುದೇ ಹೋಟೆಲ್, ವಸತಿಗೃಹಗಳು ಇರುವುದಿಲ್ಲ. ಕೆಮ್ಮಣ್ಣುಗುಂಡಿಯಲ್ಲಿರುವ ವಸತಿಗೃಹವು ತೋಟಗಾರಿಕೆ ಇಲಾಖೆ ಕರ್ನಾಟಕ ಸರ್ಕಾರಕ್ಕೆ ಸೇರಿದೆ.

**5. ಚಿಕ್ಕಮಗಳೂರು ಜಿಲ್ಲೆಯ ರೈಲ್ವೆ ಮಾಹಿತಿಗಳು**

- ಕಡೂರು ರೈಲ್ವೆ ನಿಲ್ದಾಣ

  08267–221226

- ಬೀರೂರು ರೈಲ್ವೆ ನಿಲ್ದಾಣ

  08267–255740

- ತರೀಕೆರೆ ರೈಲ್ವೆ ನಿಲ್ದಾಣ

  08261–222247

- ರೈಲ್ವೆ ಟಿಕೇಟ್ ಕಾಯ್ದಿರಿಸುವ ಕೇಂದ್ರ, ಚಿಕ್ಕಮಗಳೂರು

  08262–220324

**6. ಚಿಕ್ಕಮಗಳೂರು ಜಿಲ್ಲೆಯ ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣದ ಮಾಹಿತಿಗಳು**

- ಚಿಕ್ಕಮಗಳೂರು ಬಸ್ ನಿಲ್ದಾಣ

  08262–234018

- ಕಡೂರು ಬಸ್ ನಿಲ್ದಾಣ

  08267–221258

- ತರೀಕೆರೆ ಬಸ್ ನಿಲ್ದಾಣ

  08261–222144

- ಶೃಂಗೇರಿ ಬಸ್ ನಿಲ್ದಾಣ

  08265–250872

- ಮೂಡಿಗೆರೆ ಬಸ್ ನಿಲ್ದಾಣ

  08263–220628

## ಜಿಲ್ಲ ಪ್ರವಾಸೋದ್ಯಮ ಮಾಹಿತಿ ಕೇಂದ್ರ, ಚಿಕ್ಕಮಗಳೂರು

2017ರಲ್ಲಿ ಚಿಕ್ಕಮಗಳೂರು ಜಿಲ್ಲೆಯ ಪ್ರಮುಖ ಪ್ರವಾಸಿ ತಾಣಗಳನ್ನು ಸಂದರ್ಶಿಸಿದ ದೇಶಿ ಯಾತ್ರಿಕರು ಮತ್ತು ವಿದೇಶ ಯಾತ್ರಿಕರ ವಿವರಗಳು ಕೆಳಕಂಡಂತಿವೆ. ಈ ವಿವರಗಳನ್ನು ಜಿಲ್ಲಾ ಪ್ರವಾಸೋದ್ಯಮ ಮಾಹಿತಿ ಕೇಂದ್ರ ಚಿಕ್ಕಮಗಳೂರು ಇಲ್ಲಿ ಪಡೆಯಲಾಗಿದೆ. 2009–2017ರ ವರೆಗಿನ ಒಟ್ಟು 9 ವರ್ಷಗಳ ವಿವರಗಳನ್ನು ಪಡೆದಿದ್ದು, ಪ್ರಸ್ತುತ ನನ್ನ ಸಂಶೋಧನ ಪ್ರಬಂಧದಲ್ಲಿ 2009–2017ರ ವಿವರಗಳನ್ನು ನೀಡಿದ್ದೇನೆ. ಈ 9 ವರ್ಷಗಳಲ್ಲಿ ದೇಶಿಯ ಮತ್ತು ವಿದೇಶಿಯರ ಪ್ರವಾಸಿಗರ ಸಂಖ್ಯೆ ಗಣನೀಯವಾಗಿ ಏರಿಕೆಯಾಗಿದ್ದು, ಪ್ರವಾಸಿ ತಾಣಗಳಲ್ಲಿ ಪ್ರವಾಸಿಗರಿಗಾಗಿ ಕೈಕೊಂಡ ಕೆಲವು ಅಭಿವೃದ್ಧಿ ಕಾರ್ಯಗಳು ಕಾರಣವಾಗಿವೆ.

THE STATEMENT SHOWING THETOURIST STATISTIC FOR CHIKKAMAGALURU DISTRICT FOR THE YEAR OF-2009

| Sl. No | Year | Sringere | Kalasa | Horanadu | Balehonnur u matt | kemmannu gundi | Chikkamagal uru Local | Indian Tourist | Forein Tourist |
|---|---|---|---|---|---|---|---|---|---|
| 1 | Apr-09 | 462000 | 25000 | 130000 | 75000 | 5455 | 4253 | **701708** | 198 |
| 2 | May-09 | 450000 | 80000 | 200000 | 100000 | 11250 | 6383 | **847633** | 80 |
| 3 | Jun-09 | 165000 | 3000 | 150000 | 52000 | 8622 | 2415 | **381037** | 57 |
| 4 | Jul-09 | 320000 | 10000 | 125000 | 45000 | 5400 | 2257 | **507657** | 88 |
| 5 | Aug-09 | 350000 | 30000 | 75000 | 80000 | 4800 | 3260 | **543060** | 193 |
| 6 | Sep-09 | 265000 | 40000 | 100000 | 70000 | 9800 | 2419 | **487219** | 140 |
| 7 | Oct-09 | 320000 | 40000 | 300000 | 65000 | 11600 | 2953 | **739553** | 196 |
| 8 | Nov-09 | 211050 | 35000 | 275000 | 85000 | 8900 | 2447 | **617397** | 480 |
| 9 | Dec-09 | 500000 | 150000 | 500000 | 120000 | 15300 | 4073 | **1289373** | 227 |
| **Total** | | **3043050** | **413000** | **1855000** | **692000** | **81127** | **30460** | **6114637** | **1659** |

(ಆಧಾರ: ಜಿಲ್ಲಾ ಪ್ರವಾಸೋದ್ಯಮ ಮಾಹಿತಿ ಕೇಂದ್ರ, ಚಿಕ್ಕಮಗಳೂರು)

## THE STATEMENT SHOWING THETOURIST STATISTIC FOR CHIKKAMAGALURU DISTRICT FOR THE YEAR OF-2010

| Sl. No | Year | Sringere | Kalasa | Horanadu | Balehonnuru matt | kemmannu gundi | Chikkamagaluru Local | Indian Tourist | Forein Tourist |
|---|---|---|---|---|---|---|---|---|---|
| 1 | Jan-10 | 250000 | 110000 | 300000 | 140532 | 10750 | 2176 | **813458** | 51 |
| 2 | Feb-10 | 280000 | 15000 | 224000 | 290000 | 7250 | 1664 | **817914** | 66 |
| 3 | Mar-10 | 250000 | 30000 | 150000 | 120000 | 10600 | 1600 | **562200** | 21 |
| 4 | Apr-10 | 460000 | 75000 | 150000 | 180000 | 14550 | - | **879550** | 20 |
| 5 | May-10 | 450000 | 75000 | 300000 | 200000 | 13450 | 3462 | **1041912** | 116 |
| 6 | Jun-10 | 220000 | 35000 | 125000 | 90000 | 8950 | 2550 | **481500** | 35 |
| 7 | Jul-10 | 160000 | 20000 | 120000 | 80000 | 7600 | 2557 | **390157** | 73 |
| 8 | Aug-10 | 145000 | 80000 | 100000 | 120000 | 8850 | 2855 | **456705** | 230 |
| 9 | Sep-10 | 165000 | 30000 | 120000 | 80000 | 11350 | 3343 | **409693** | 79 |
| 10 | Oct-10 | 670000 | 30000 | 220000 | 105000 | 15160 | 6313 | **1046473** | 122 |
| 11 | Nov-10 | 320000 | 7000 | 250000 | 120000 | 7800 | 2364 | **707164** | 473 |
| 12 | Dec-10 | 450000 | 50000 | 325000 | 120000 | 20150 | 9617 | **974767** | 1327 |
| **Total** | | **3820000** | **557000** | **2384000** | **1645532** | **136460** | **38501** | **8581493** | **2613** |

(ಆಧಾರ: ಜಿಲ್ಲಾ ಪ್ರವಾಸೋದ್ಯಮ ಮಾಹಿತಿ ಕೇಂದ್ರ, ಚಿಕ್ಕಮಗಳೂರು)

## THE STATEMENT SHOWING THE TOURIST STATISTIC FOR CHIKKAMAGALURU DISTRICT FOR THE YEAR OF-2011

| Sl. No | Year | Sringere | Kalasa | Horanadu | Balehonnuru matt | Datta peeta | kemmann gundi | Chikamagalur Local | Indian Tourist | Forein Tourist |
|---|---|---|---|---|---|---|---|---|---|---|
| 1 | Jan-11 | 346,000 | 45,000 | 3,00,000 | 1,25,000 | 13,050 | 12,236 | 3,737 | **845023** | 137 |
| 2 | Feb-11 | 300,000 | 30,000 | 2,00,000 | 1,13,014 | 9,328 | 7,800 | 2,433 | **662575** | 811 |
| 3 | Mar-11 | 180,000 | 15,000 | 2,00,000 | 60,000 | 13,656 | 9,300 | 3,170 | **481126** | 198 |
| 4 | Apr-11 | 400,000 | 2,00,000 | 2,30,000 | 162,000 | 20,866 | 11,390 | 3,138 | **1027394** | 115 |
| 5 | May-11 | 500,000 | 1,10,000 | 2,70,000 | 65,000 | 25,138 | 1,1,200 | 3,186 | **984524** | 28 |
| 6 | Jun-11 | 250,000 | 46,000 | 60,000 | 60,000 | 11,920 | 6,750 | 3,349 | **438019** | 67 |
| 7 | Jul-11 | 225,000 | 50,000 | 95,000 | 55,000 | 10,556 | 7,800 | 1,681 | **4,45,037** | 97 |
| 8 | Aug-11 | 420,000 | 35,000 | 1,75,000 | 1,25,000 | 10,500 | 7,320 | 2,106 | **774926** | 139 |
| 9 | Sep-11 | 250,000 | 30,000 | 1,00,000 | 1,05,000 | 13,826 | 6,480 | 1,713 | **5,07,019** | 55 |
| 10 | Oct-11 | 626,000 | 50,000 | 3,00,000 | 90,000 | 23,590 | 2,576 | 14,200 | **11,06,366** | 159 |
| 11 | Nov-11 | 200,000 | 1,50,000 | 1,75,000 | 80,000 | 15,100 | 7,800 | 2,779 | **6,30,679** | 162 |
| 12 | Dec-11 | 640,000 | 2,00,000 | 4,00,000 | 1,60,000 | 12,116 | 16,500 | 2,069 | **14,30,685** | 244 |
| Total | | **4,337,000** | **761000** | **2505000** | **1200014** | **179,646** | **107152** | **43561** | **93,33,373** | **2,212** |

(ಆಧಾರ: ಜಿಲ್ಲಾ ಪ್ರವಾಸೋದ್ಯಮ ಮಾಹಿತಿ ಕೇಂದ್ರ, ಚಿಕ್ಕಮಗಳೂರು)

| THE STATEMENT SHOWING THE TOURIST STATISTIC FOR CHIKKAMAGALURU DISTRICT FOR THE YEAR OF-2012 | | | | | | | | | | |
|---|---|---|---|---|---|---|---|---|---|---|
| Sl. No | Year | Sringere | Kalasa | Horanadu | Balehonnuru matt | Datta peeta | kemmannu gundi | Chikkamagalur Local | Indian Tourist | Forein Tourist |
| 1 | Jan-12 | 3,00,000 | 40,000 | 2,10,000 | 1,00,000 | 9,300 | 11,200 | 3,498 | **6,73,998** | 338 |
| 2 | Feb-12 | 2,80,000 | 75,000 | 1,50,000 | 1,00,000 | 11,438 | 5,560 | 1,758 | **6,23,756** | 643 |
| 3 | Mar-12 | 2,50,000 | 45,000 | 1,20,000 | 30,000 | 18,422 | 6,608 | 2,542 | **4,72,572** | 246 |
| 4 | Apr-12 | 5,50,000 | 75,000 | 1,50,000 | 1,15,000 | 20,092 | 5,600 | 6,266 | **9,21,958** | 176 |
| 5 | May-12 | 5,50,000 | 1,00,000 | 2,40,000 | 1,20,000 | 19,440 | 8,100 | 2,796 | **10,40,336** | 53 |
| 6 | Jun-12 | 2,00,000 | 40,000 | 1,80,000 | 80,000 | 17,994 | 7,600 | 3,310 | **5,28,904** | 117 |
| 7 | Jul-12 | 2,80,000 | 70,000 | 1,90,000 | 75,000 | 14,932 | 5,900 | 1,316 | **6,37,148** | 46 |
| 8 | Aug-12 | 2,60,000 | 30,000 | 2,50,000 | 90,000 | 17,108 | 7,726 | 2,877 | **6,57,711** | 132 |
| 9 | Sep-12 | 3,00,000 | 75,000 | 3,00,000 | 80,000 | 10,282 | 7,950 | 2,796 | **7,76,028** | 94 |
| 10 | Oct-12 | 7,00,000 | 40,000 | 3,50,000 | 1,20,000 | 25,774 | 6,820 | 2,895 | **12,45,489** | 389 |
| 11 | Nov-12 | 3,70,000 | 1,00,000 | 1,50,000 | 1,50,000 | 15,870 | 400 | 1,696 | **7,87,966** | 303 |
| 12 | Dec-12 | 7,50,000 | 50,000 | 5,00,000 | 1,60,000 | 22,086 | 2,880 | 4,506 | **14,89,472** | 309 |
| Total | | **47,90,000** | **7,40,000** | **27,90,000** | **12,20,000** | **2,02,738** | **76,344** | **36,256** | **98,55,338** | **2,846** |

(ಆಧಾರ: ಜಿಲ್ಲಾ ಪ್ರವಾಸೋದ್ಯಮ ಮಾಹಿತಿ ಕೇಂದ್ರ, ಚಿಕ್ಕಮಗಳೂರು)

| THE STATEMENT SHOWING THETOURIST STATISTIC FOR CHIKKAMAGALURU DISTRICT FOR THE YEAR OF-2013 | | | | | | | | | | |
|---|---|---|---|---|---|---|---|---|---|---|
| Sl. No | Year | Sringere | Kalasa | Horanadu | Balehonnuru matt | Datta peeta | kemmannu gundi | Chikkamagal uru Local | Indian Tourist | Forein Tourist |
| 1 | Jan-13 | 400,000 | 150,000 | 310,000 | 60,000 | 18,000 | 5,622 | 3,018 | 946,640 | 462 |
| 2 | Feb-13 | 285,000 | 80,000 | 155,000 | 85,000 | 12,000 | 1,060 | 2,032 | 620,092 | 443 |
| 3 | Mar-13 | 250,000 | 45,000 | 120,000 | 50,000 | 22,358 | 540 | 3,382 | 491,280 | 579 |
| 4 | Apr-13 | 375,000 | 75,000 | 150,000 | 75,000 | 20,590 | 3,670 | 1,947 | 701,207 | 171 |
| 5 | May-13 | 555,000 | 38,000 | 245,000 | 90,000 | 19,500 | 8,000 | 2,366 | 957,866 | 65 |
| 6 | Jun-13 | 210,000 | 25,000 | 180,000 | 78,000 | 17,950 | 7,200 | 2,062 | 520,212 | 32 |
| 7 | Jul-13 | 180,000 | 60,000 | 100,000 | 50,000 | 12,550 | 3,625 | 1,400 | 407,575 | 38 |
| 8 | Aug-13 | 240,000 | 102,000 | 200,000 | 90,000 | 17,200 | 4,200 | 2,900 | 656,300 | 123 |
| 9 | Sep-13 | 280,000 | 80,000 | 200,000 | 60,000 | 16,500 | 6,650 | 2,193 | 645,343 | 70 |
| 10 | Oct-13 | 620,000 | 120,000 | 300,000 | 113,000 | 11,060 | 10,393 | 2,738 | 1,177,191 | 143 |
| 11 | Nov-13 | 270,000 | 100,000 | 150,000 | 110,000 | 14,750 | 8,000 | 3,406 | 656,156 | 505 |
| 12 | Dec-13 | 425,000 | 150,000 | 350,000 | 180,000 | 20,000 | 12,000 | 2,344 | 1,139,344 | 280 |
| Total | | **40,90,000** | **1,025,000** | **24,60,000** | **1,041,000** | **202,458** | **70,960** | **29,788** | **8,959,206** | **2,911** |

(ಆಧಾರ: ಜಿಲ್ಲಾ ಪ್ರವಾಸೋದ್ಯಮ ಮಾಹಿತಿ ಕೇಂದ್ರ, ಚಿಕ್ಕಮಗಳೂರು)

THE STATEMENT SHOWING THETOURIST STATISTIC FOR CHIKKAMAGALURU DISTRICT FOR THE YEAR OF-2014

| Sl. No | Year | Sringere | Kalasa | Horanadu | Balehonnuru matt | Datta peeta | kemmannu gundi | Chikkamagaluru Local | Indian Tourist | Forein Tourist |
|---|---|---|---|---|---|---|---|---|---|---|
| 1 | Jan-14 | 350,000 | 130,000 | 300,000 | 100,000 | 18,100 | 11,000 | 2,035 | 911,135 | 404 |
| 2 | Feb-14 | 250,000 | 90,000 | 150,000 | 90,000 | 12,200 | 10,000 | 2,150 | 604,350 | 450 |
| 3 | Mar-14 | 240,000 | 35,000 | 140,000 | 150,000 | 21,000 | 10,000 | 1,310 | 597,310 | 420 |
| 4 | Apr-14 | 280,000 | 30,000 | 175,000 | 125,000 | 20,500 | 11,000 | 2,780 | 644,280 | 155 |
| 5 | May-14 | 400,000 | 50,000 | 300,000 | 110,000 | 20,000 | 15,000 | 4,400 | 899,400 | 84 |
| 6 | Jun-14 | 420,000 | 26,000 | 200,000 | 86,000 | 19,000 | 10,000 | 3,213 | 764,213 | 210 |
| 7 | Jul-14 | 180,000 | 25,000 | 250,000 | 75,000 | 15,100 | 12,000 | 2,500 | 559,600 | 30 |
| 8 | Aug-14 | 300,000 | 85,000 | 150,000 | 130,000 | 16,000 | 7,000 | 2,245 | 690,245 | 180 |
| 9 | Sep-14 | 310,000 | 50,000 | 125,000 | 95,000 | 16,200 | 8,200 | 2,790 | 607,190 | 40 |
| 10 | Oct-14 | 300,000 | 150,000 | 300,000 | 180,000 | 17,000 | 12,500 | 3,777 | 963,277 | 106 |
| 11 | Nov-14 | 190,000 | 120,000 | 250,000 | 80,000 | 16,500 | 12,400 | 2,373 | 671,273 | 198 |
| 12 | Dec-14 | 375,000 | 100,000 | 300,000 | 150,000 | 20,000 | 13,000 | 2,810 | 960,810 | 238 |
| Total | | **3,595,000** | **891,000** | **2,640,000** | **1,371,000** | **2,11,600** | **132,100** | **88,73,083** | **8,629,100** | **2,515** |

(ಆಧಾರ: ಜಿಲ್ಲಾ ಪ್ರವಾಸೋದ್ಯಮ ಮಾಹಿತಿ ಕೇಂದ್ರ, ಚಿಕ್ಕಮಗಳೂರು)

THE STATEMENT SHOWING THETOURIST STATISTIC FOR CHIKKAMAGA LURU DISTRICT FOR THE YEAR OF-2015

| Sl. No | Year | Sringere | Kalasa | Horanadu | Balehonnuru matt | Datta peeta | kemmannu gundi | Chikamagaluru Local | Indian Tourist | Forein Tourist |
|---|---|---|---|---|---|---|---|---|---|---|
| 1 | Jan-15 | 300000 | 100000 | 200000 | 110000 | 19000 | 11500 | 2470 | **742970** | 403 |
| 2 | Feb-15 | 260000 | 85000 | 150000 | 90000 | 12500 | 9000 | 1626 | **608126** | 458 |
| 3 | Mar-15 | 250000 | 40000 | 150000 | 155000 | 21300 | 12000 | 1100 | **629400** | 439 |
| 4 | Apr-15 | 290000 | 46000 | 180000 | 130000 | 20800 | 16500 | 2800 | **686100** | 148 |
| 5 | May-15 | 410000 | 50000 | 305000 | 110000 | 20100 | 10000 | 3864 | **908964** | 92 |
| 6 | Jun-15 | 420000 | 30000 | 230000 | 95000 | 19500 | 10100 | 3000 | **807600** | 175 |
| 7 | Jul-15 | 260000 | 35000 | 150000 | 95000 | 15000 | 10700 | 3985 | **569685** | 32 |
| 8 | Aug-15 | 190000 | 35000 | 290000 | 135000 | 15500 | 13000 | 1745 | **680245** | 50 |
| 9 | Sep-15 | 330000 | 50000 | 130000 | 90000 | 16500 | 10000 | 2850 | **629350** | 55 |
| 10 | Oct-15 | 500000 | 100000 | 400000 | 95000 | 17100 | 20000 | 3880 | **1135980** | 245 |
| 11 | Nov-15 | 200000 | 50000 | 150000 | 120000 | 16000 | 11200 | 2100 | **549300** | 115 |
| 12 | Dec-15 | 500000 | 50000 | 300000 | 100000 | 21000 | 23000 | 2950 | **9,96,950** | 250 |
| MIÄÖ | | **3910000** | **671000** | **2635000** | **1325000** | **214300** | **157000** | **32370** | **7947720** | **2462** |

(ಆಧಾರ: ಜಿಲ್ಲಾ ಪ್ರವಾಸೋದ್ಯಮ ಮಾಹಿತಿ ಕೇಂದ್ರ, ಚಿಕ್ಕಮಗಳೂರು)

## THE STATEMENT SHOWING THETOURIST STATISTIC FOR CHIKKAMAGALURU DISTRICT FOR THE YEAR OF-2016

| Sl. No | Year | Sringere | Kalasa | Horanadu | Balehonnur u matt | Datta peeta | kemmann u gundi | Chikama galur | Indian Tourist | Forein Tourist |
|---|---|---|---|---|---|---|---|---|---|---|
| 1 | Jan-16 | 18,000 | 50,000 | 210,000 | 120,000 | 19,500 | 12,000 | 2,377 | **733,877** | 378 |
| 2 | Feb-16 | 300,000 | 50,000 | 200,000 | 97,000 | 18,000 | 10,000 | 2,335 | **677,335** | 100 |
| 3 | Mar-16 | 300,000 | 20,000 | 121,150 | 150,000 | 17,590 | 11,500 | 2,206 | **622,446** | 370 |
| 4 | Apr-16 | 420,000 | 25,000 | 220,000 | 126,000 | 19,850 | 11,500 | 2,290 | **824,640** | 65 |
| 5 | May-16 | 350,000 | 20,000 | 400,000 | 145,000 | 19,000 | 15,000 | 6,877 | **955,877** | 55 |
| 6 | Jun-16 | 242,000 | 25,000 | 190,000 | 90,000 | 21,000 | 12,000 | 3,150 | **583,150** | 8 |
| 7 | Jul-16 | 220,000 | 20,000 | 200,000 | 21,500 | 19,000 | 12,800 | 1,080 | **494,380** | 236 |
| 8 | Aug-16 | 350,000 | 30,000 | 250,000 | 120,000 | 17,000 | 8,300 | 1,395 | **776,695** | 83 |
| 9 | Sep-16 | 120,000 | 15,000 | 70,000 | 120,000 | 14,000 | 300 | 2,577 | **341,877** | 110 |
| 10 | Oct-16 | 500,000 | 7,000 | 210,000 | 100,000 | 7,500 | 4,500 | 6,000 | **835,000** | 88 |
| 11 | Nov-16 | 300,000 | 15,000 | 125,000 | 85,000 | 8,500 | 7,000 | 5,250 | **545,750** | 99 |
| 12 | Dec-16 | 450,000 | 40,000 | 250,000 | 150,000 | 25,000 | 17,430 | 5,750 | **938,180** | 251 |
| Total | | **3,570,000** | **317,000** | **2,446,150** | **1,324,500** | **205,940** | **122,330** | **41,287** | **8,329,207** | **1,843** |

(ಆಧಾರ: ಜಿಲ್ಲಾ ಪ್ರವಾಸೋದ್ಯಮ ಮಾಹಿತಿ ಕೇಂದ್ರ, ಚಿಕ್ಕಮಗಳೂರು)

## THE STATEMENT SHOWING THETOURIST STATISTIC FOR CHIKKAMAGALURU DISTRICT FOR THE YEAR OF-2017

| Sl. No | Year | Sringere | Kalasa | Horanadu | Balehonnur u matt | Datta peeta | kemmannu gundi | Chikamagalur Local | Indian Tourist | Forein Tourist |
|---|---|---|---|---|---|---|---|---|---|---|
| 1 | Jan-17 | 350,000 | 15,000 | 250,000 | 150,000 | 17,000 | 13,800 | 2,890 | 798,690 | 332 |
| 2 | Feb-17 | 220,000 | 25,000 | 150,000 | 123,000 | 15,000 | 6,118 | 1,994 | 541,112 | 407 |
| 3 | Mar-17 | 200,000 | 20,000 | 130,000 | 115,000 | 12,000 | 5,000 | 1,600 | 483,600 | 30 |
| 4 | Apr-17 | 400,000 | 28,000 | 230,000 | 140,000 | 17,000 | 9,043 | 4,662 | 828,705 | 101 |
| 5 | May-17 | 485,000 | 15,000 | 500,000 | 120,000 | 15,000 | 8,000 | 4,156 | 1,147,156 | 30 |
| 6 | Jun-17 | 422,000 | 30,000 | 40,000 | 80,000 | 13,000 | 7,000 | 4,062 | 596,062 | 15 |
| 7 | Jul-17 | 350,000 | 25,000 | 12,000 | 75,000 | 30,000 | 6,500 | 2,160 | 500,660 | 55 |
| 8 | Aug-17 | 210,000 | 15,000 | 100,000 | 70,000 | 28,000 | 6,000 | 2,246 | 431,446 | 116 |
| 9 | Sep-17 | 580,000 | 25,000 | 300,000 | 80,000 | 35,000 | 8000 | 3,200 | 1,031,200 | 23 |
| 10 | Oct-17 | 350,000 | 35,000 | 400,000 | 70,000 | 30,000 | 7,000 | 1851 | 543,851 | 130 |
| 11 | Nov-17 | 350,000 | 15,000 | 300,000 | 65,000 | 25,000 | 6,000 | 3,192 | 414,192 | 271 |
| 12 | Dec-17 | 570,000 | 50,000 | 410,000 | 40,000 | 42,000 | 8,000 | 2,734 | 1,122,734 | 278 |
| Total | | 4,487,000 | 298,000 | 2,822,000 | 1,128,000 | 279,000 | 90,461 | 34,747 | 8,439,408 | 1,788 |

(ಆಧಾರ: ಜಿಲ್ಲಾ ಪ್ರವಾಸೋದ್ಯಮ ಮಾಹಿತಿ ಕೇಂದ್ರ, ಚಿಕ್ಕಮಗಳೂರು)

## ಅಡಿ ಟಿಪ್ಪಣಿಗಳು

1. ದೀಪಿಕಾ ಕಚ್ಚಲ್ (ಸಂಪಾದಕರು) – ಯೋಜನಾ ಅಭಿವೃದ್ಧಿ ಮಾಸ ಪತ್ರಿಕೆ (ಮೇ 2015) – ಪ್ರಕಾಶನ ವಿಭಾಗ, ಸಮಾಚಾರ ಮತ್ತು ಪ್ರಸಾರ ಸಚಿವಾಲಯ. ಭಾರತ ಸರ್ಕಾರ, ಬೆಂಗಳೂರು – 2015. ಪು. 2.
2. ಅದೇ...
3. ಅಶ್ವಸ್ಥಪ್ಪ ಕೆ.ಎನ್. – ಭಾರತದಲ್ಲಿ ಪ್ರವಾಸೋದ್ಯಮ ಇತಿಹಾಸ – ಸುಭಾಷ್ ಸ್ಟೋರ್ಸ್, ಬೆಂಗಳೂರು, 2012. ಪು. 2.
4. Singhal G.D. Awadh Tiwary and Meera Agrawal – Glimpses of Tourisom in India, New Delhi, 2004. P. 1.
5. ಅಶ್ವಸ್ಥಪ್ಪ ಕೆ.ಎನ್. – ಪೂರ್ವೋಕ್ತ – ಪು. 31.
6. ನಾಗಪತಿ ಕೆ.ಎಸ್. – ಪ್ರವಾಸೋದ್ಯಮ ಅಭಿವೃದ್ಧಿ ಒಂದು ಹೊಸ ಆಯಾಮ – ಅನನ್ಯ ಪ್ರಕಾಶನ – ಮೈಸೂರು, 2012, ಪು. 4.
7. ಅದೇ. ಪು. 6.
8. ಸಿಂಘಾಲ್ – ಪೂರ್ವೋಕ್ತ, 2004. ಪು. 16–19.
9. Sudesh Lahari – India Tourism Destination for all Sea Sons, 2004. P. 30-34
10. ಅಶ್ವತ್ಥಪ್ಪ ಕೆ.ಎನ್. – ಪೂರ್ವೋಕ್ತ, ಪು. 37.
11. ಸ್ವಾಮಿ.ಲ.ನ. – ಪ್ರಾಗ್ ಇತಿಹಾಸ ಕಾಲದಲ್ಲಿ ಕರ್ನಾಟಕದ ಸಾಗರೋತ್ತರ ಸಂಬಂಧಗಳು – ಇತಿಹಾಸ ದರ್ಪಣ ತ್ರೈಮಾಸಿಕ (ಸಂ) ಎಸ್.ಕೆ. ಆರುಣಿ ಮತ್ತು ಇತರರು. ಸಂಪುಟ 12–13, 2012. ಪು. 109–129.
12. ಸ್ವಾಮಿ.ಲ.ನ. – ಮ್ಯಾರಿಟೈಮ್ ಹಿಸ್ಟರಿ ಆಫ್ ಏನ್‌ಷಿಯಂಟ್ ಇಂಡಿಯಾ. ನವದೆಹಲಿ – 2000. ಪು. 20–27.
13. ಅಶ್ವತ್ಥಪ್ಪ ಕೆ.ಎನ್. – ಪೂರ್ವೋಕ್ತ, ಪು. 41.
14. ಸ್ವಾಮಿ.ಲ.ನ. – ಪೂರ್ವೋಕ್ತ, 2000, ಪು. 51.
15. ಅಶ್ವತ್ಥಪ್ಪ ಕೆ.ಎನ್. – ಪೂರ್ವೋಕ್ತ, ಪು. 42.
16. ಅದೇ... ಪು. 43.

17. ಅದೇ...

18. ಅದೇ...

19. ದೀಪಿಕಾ ಕಚ್ಚಲ್ (ಸಂಪಾದಕರು) – ಪೂರ್ವೋಕ್ತ, ಪು. 44.

20. ಅದೇ..

21. ದೇಜಗೌ – ಕರ್ನಾಟಕದ ರೂವಾರಿ, ಪು. 1–6.

22. ಕಾಶೀ ವಿಶ್ವನಾಥಶೆಟ್ಟಿ – ಚಿಕ್ಕಮಗಳೂರು ಜಿಲ್ಲಾ ದರ್ಶನ – 1978

23. ತಿಪ್ಪೇರುದ್ರಪ್ಪ ಬಿ (ಸಂಪಾದಕರು) – ಹಸಿರು ಸಿರಿ – ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ. ಚಿಕ್ಕಮಗಳೂರು – 2015, ಪು. 8.

24. ಅದೇ..

25. ಅದೇ..

# ಅಧ್ಯಾಯ – 4

## ಚಿಕ್ಕಮಗಳೂರು ಜಿಲ್ಲೆಯ ನೈಸರ್ಗಿಕ ಪ್ರವಾಸಿ ತಾಣಗಳು

### ಪೀಠಿಕೆ

ಚಿಕ್ಕಮಗಳೂರು ಪ್ರಕೃತಿಯ ಸೊಬಗನ್ನು ಹೊದ್ದುಮಲಗಿಹ ಸೀಮೆ. ನಿಸರ್ಗದ ಸಿರಿಯಂತೆ ಕಂಗೊಳಿಸುತ್ತಿರುವ ಈ ಜಿಲ್ಲೆಯಲ್ಲಿ ನಿತ್ಯಹರಿದ್ವರ್ಣದ ಕಾಡುಗಳಿವೆ. ಜೀವನದಿಗಳಿವೆ, ಝರಿ ತೊರೆಗಳಿವೆ, ಘಟ್ಟ ಪ್ರದೇಶಗಳಿವೆ, ಅಪರೂಪದ ಶೋಲಾ ಅರಣ್ಯದ ಕಣಿವೆಗಳಿವೆ, ನವ ನವೋನ್ಮೇಶ ಶಾಲಿನಿಯಾದ ಹಸಿರನ್ನು ಉಟ್ಟ ಗಿರಿಶಿಖರಗಳಿವೆ.[1] ಈ ಕಾರಣದಿಂದ ನಮ್ಮ ನಾಡಿನ ಹೆಮ್ಮೆಯ ಕವಿ, ರಸಋಷಿ, ಕುವೆಂಪುರವರು ಪ್ರಕೃತಿಯ ಚೆಲುವನ್ನು ಆಸ್ವಾದಿಸುವ ಸಹೃದಯತೆ ಉಳ್ಳವರಿಗೆ **“ಮಲೆನಾಡಿಗೆ ಬಾ”** ಎಂಬ ಆಮಂತ್ರಣ ನೀಡುತ್ತಾರೆ.

ಗಿರಿ ಕಂದರಗಳು, ಬೆಟ್ಟಗುಡ್ಡಗಳು, ಕಾಡುಮೇಡುಗಳು, ನದಿ, ಜಲಪಾತಗಳು ಪಡುವಣ ಭಾಗದ ಬೆಡಗಾದರೆ, ವಿಸ್ತಾರವಾದ ಬಯಲು ಸೀಮೆ ಮೂಡಣ ಭಾಗದ ಬಿನ್ನಾಣ, ಮಲೆನಾಡು ಮತ್ತು ಬಯಲು ಸೀಮೆಗಳು ಈ ಜಿಲ್ಲೆಯಲ್ಲಿವೆ.

ಚಂದ್ರದ್ರೋಣ ಪರ್ವತ ಶ್ರೇಣಿ ಇಲ್ಲಿದೆ. ಪಶ್ಚಿಮಘಟ್ಟಗಳು ಉತ್ತರಾಭಿಮುಖವಾಗಿ ಹಬ್ಬಿವೆ. ಈ ಗಿರಿ ಶ್ರೇಣಿಯಲ್ಲಿ, ರಾಜ್ಯದಲ್ಲಿಯೂ ಅತಿ ಎತ್ತರದ ಶಿಖರ ಮುಳ್ಳಯ್ಯನ ಗಿರಿ. ಅದರ ಬಳಿವಿಡಿದು ಬರುವ ದತ್ತಪೀಠ ಹೊಂದಿರುವ ಬಾಬಾಬುಡನ್‌ಗಿರಿ, ದೇವಿರಮ್ಮನಬೆಟ್ಟ ಹಾಗೂ ಬೇಸಿಗೆಯ ಗಿರಿಧಾಮ ಕೆಮ್ಮಣ್ಣುಗುಂಡಿ, ಜಾಗರ ಕಣಿವೆಗಳಿವೆ. ಕಾಫಿಯಕಂಪು, ಏಲಕ್ಕಿಯ ಸೊಂಪು, ತೆಂಗು, ಕಂಗುಗಳಿಂದ ಕಂಗೊಳಿಸುವ ಈ ಜಿಲ್ಲೆ ರಾಜ್ಯದ ಸ್ವಿಡ್ಜರ್‌ಲ್ಯಾಂಡ್ ಎಂಬ ಪರ್ಯಾಯವನ್ನು ಪಡೆದಿದೆ. ಜಿಲ್ಲೆಯ ಪಶ್ಚಿಮ ಭಾಗದಲ್ಲಿ ಅತ್ಯಂತ ಎತ್ತರವಾದ ಪಶ್ಚಿಮ ಘಟ್ಟಗಳು ಹಬ್ಬಿದ್ದು, ದಕ್ಷಿಣಕನ್ನಡ ಜಿಲ್ಲೆಗೂ, ಈ ಜಿಲ್ಲೆಗೂ ಮಧ್ಯ ಗೋಡೆಯನ್ನು ನಿರ್ಮಿಸಿದಂತಿದೆ. ಈ ಶಿಖರಗಳು ಬಲ್ಲಾಳರಾಯನ ದುರ್ಗದಿಂದ ಪ್ರಾರಂಭವಾಗಿ, ಕಳಸದ ಹತ್ತಿರವಿರುವ ಮೆರ್ತಿಗುಡ್ಡ, ಕೊಪ್ಪ ದುರ್ಗಗಳವರೆಗೆ ಹಬ್ಬಿದ್ದು, ತುಂಗಾ ಮತ್ತು ಭದ್ರಾನದಿಗಳ ಜಲಾನಯನ ಪ್ರದೇಶಗಳನ್ನು ಬೇರ್ಪಡಿಸುತ್ತವೆ. ಸಮುದ್ರದಂಡೆಯಿಂದ ನೋಡಿದಾಗ ಕುದುರೆ ಮುಖದಂತೆ ಕಾಣುವ, ಕುದುರೆಮುಖಶಿಖರ ಸಮುದ್ರಮಟ್ಟದಿಂದ 6215 ಅಡಿಗಳ ಎತ್ತರದಲ್ಲಿದೆ. ಬಲ್ಲಾಳ ರಾಯನ ದುರ್ಗ 4910 ಅಡಿ ಎತ್ತರವಿದ್ದರೆ, ಮೆರ್ತಿಗುಡ್ಡ 5451 ಅಡಿಗಳ ಎತ್ತರವಿದೆ.

ವರಾಹ ಪರ್ವತವೆಂದು ಪ್ರಸಿದ್ಧಿ ಪಡೆದಿರುವ 'ಗಂಗಾಮೂಲ' ಶಿಖರ 4781 ಅಡಿಗಳ ಎತ್ತರದಲ್ಲಿದೆ.[2] ಇಲ್ಲಿ ತುಂಗ, ಭದ್ರಾ, ನೇತ್ರಾವತಿ ನದಿಗಳು ಉಗಮಿಸುತ್ತವೆ.

**ಬಾಬಾಬುಡನ್‌ಗಿರಿ**

ಬಾಬಾಬುಡನ್‌ಗಿರಿಯು ಚಿಕ್ಕಮಗಳೂರು ತಾಲ್ಲೂಕಿನಲ್ಲಿರುವ ಒಂದು ಪರ್ವತ. ಪಶ್ಚಿಮಘಟ್ಟ ಶ್ರೇಣಿಯಿಂದ ಒಳಚಾಚಿರುವ ಬೆಟ್ಟಗಳ ಸಾಲಿಗೆ ಈ ಗಿರಿಯು ಸೇರಿದ್ದು ಚಿಕ್ಕಮಗಳೂರು ಪಟ್ಟಣದ ಉತ್ತರ ದಿಕ್ಕಿನಲ್ಲಿ ಹರಡಿಕೊಂಡಿದೆ. ಇದರ ಎತ್ತರ ಸಮುದ್ರ ಮಟ್ಟದಿಂದ 1894 ಮೀಟರ್‌ಗಳು. ಚಿಕ್ಕಮಗಳೂರು ಜಿಲ್ಲೆಯಲ್ಲಿ ಹುಟ್ಟುವ ಅನೇಕ ನದಿಗಳನ್ನು ಬಲ್ಲಾಳರಾಯನದುರ್ಗ ಮತ್ತು ಬಾಬಾಬುಡನ್‌ಗಿರಿ ಪರ್ವತಗಳು ಇಬ್ಭಾಗವಾಗಿ ಹರಿಯುವಂತೆ ಮಾಡಿವೆ.[3]

ಬಾಬಾಬುಡನ್‌ಗಿರಿ ಕುದುರೆಯ ಲಾಳದ ಆಕಾರದಲ್ಲಿದ್ದು ವಾಯುವ್ಯ ದಿಕ್ಕಿನ ಕಡೆಗೆ ತೆರೆದಿದೆ(ಚಿತ್ರಸಂಖ್ಯೆ1). ಈ ಗಿರಿಯ ಪೂರ್ವಕ್ಕೆ ಭೂಮಿಯ ಮಟ್ಟ ಥಟ್ಟನೆ ಇಳಿದಿದೆ. ಗಿರಿ ಕಡಿದಾದ ಕಣಿವೆಗಳಿಂದಲೂ ಹಾಗೂ ಹುಲ್ಲು ಮೈದಾನಗಳಿಂದಲೂ ಕೂಡಿದೆ. ಇವುಗಳ ಮಧ್ಯೆ ನೀರಿನ ಚಿಲುಮೆಗಳು ನಿರಂತರವಾಗಿ ಹರಿಯುತ್ತವೆ. ಬಾಬಾಬುಡನ್‌ಗಿರಿ ಧಾರವಾಡದ ವಿಶಾಲವಾದ ಬಯಲು ಪ್ರದೇಶ ಫಲವತ್ತಾದ ಕಪ್ಪು ಮಣ್ಣಿನಿಂದ ಕೂಡಿದ್ದು ಕಾಫಿ ಬೆಳೆಗೆ ಅನುಕೂಲಕರವಾಗಿದೆ. ಈ ಗಿರಿಯ ಅಕ್ಕಪಕ್ಕದ ಇಳಿಜಾರು ಪ್ರದೇಶ ದಟ್ಟವಾದ ಕಾಡುಗಳಿಂದ ಕೂಡಿದೆ. ಈ ಕಾಡುಗಳ ಮಧ್ಯೆ ಕಾಫಿ ತೋಟಗಳಿವೆ. ಬಾಬಾಬುಡನ್‌ಗಿರಿಯು ದಕ್ಷಿಣ ಭಾರತದ ಕಾಫಿ ಬೆಳೆಯ ತೊಟ್ಟಿಲು ಎನಿಸಿಕೊಂಡಿದೆ. ಈ ಗಿರಿ ಔಷಧೋಪಯುಕ್ತ ಗಿಡಮೂಲಿಕೆಗಳಿಗೆ ಹೆಸರಾಗಿದ್ದು ದೇಶದ ನಾನಾ ಕಡೆಗಳಿಂದ ವೈದ್ಯರು ಬಂದು ಗಿಡಮೂಲಿಕೆಗಳನ್ನು ಸಂಗ್ರಹಿಸಿಕೊಂಡು ಹೋಗುತ್ತಾರೆ.

**ಚಾರಿತ್ರಿಕ ಹಿನ್ನೆಲೆ**

ಹಿಂದೂ ಪುರಾಣಗಳಲ್ಲಿ ಈ ಗಿರಿಯನ್ನು ಚಂದ್ರದ್ರೋಣ ಪರ್ವತ ಎಂದು ಕರೆಯಲಾಗಿದೆ. ಇದು ಕರ್ನಾಟಕದ ಅತ್ಯಂತ ಎತ್ತರದ ಪರ್ವತ ಶ್ರೇಣಿಯಾಗಿದ್ದು, ಇದರ ಎತ್ತರ ಸಮುದ್ರ ಮಟ್ಟದಿಂದ 1894 ಮೀಟರುಗಳು. ಇದು ಚಿಕ್ಕಮಗಳೂರು ಪಟ್ಟಣದಿಂದ ಉತ್ತರಕ್ಕೆ 28 ಕಿ.ಮೀ. ದೂರದಲ್ಲಿದೆ. ಕುದುರೆ ಲಾಳದ ರೀತಿಯಲ್ಲಿ ಸರಪಳಿಯಂತಿರುವ ಈ ಸ್ಥಳವು ಈಶಾನ್ಯ

ದಿಕ್ಕಿನಲ್ಲಿ ಪ್ರವೇಶ ದ್ವಾರವನ್ನು ಹೊಂದಿದೆ. ಮುಸ್ಲಿಂ ಸನ್ಯಾಸಿ ಬಾಬಾಬುಡನ್ ಎಂಬುವರು ಯಮನ್‌ನಿಂದ ತಂದಿದ್ದ ಕಾಫಿ ಬೀಜಗಳಿಂದ ಕಾಫಿ ಸಸಿಗಳನ್ನು ನೆಟ್ಟು ಬೆಳೆಸಿದ್ದರಿಂದ ಈ ಗಿರಿಗೆ ಬಾಬಾಬುಡನ್‌ಗಿರಿ ಎಂಬ ಹೆಸರು ಬಂದಿದೆ ಎಂದು ಹೇಳಲಾಗಿದೆ. ಇನಾಂ ದತ್ತಾತ್ರೇಯ ಪೀಠ ಹಿಂದೂ ಮುಸ್ಲಿಂರ ಭಾವೈಕ್ಯತೆ ಕೇಂದ್ರ, ಪಶ್ಚಿಮ ಘಟ್ಟ ಸಾಲಿನ ಚಂದ್ರದ್ರೋಣ ಪರ್ವತ ಶ್ರೇಣಿಯ ನಯನ ಮನೋಹರ ಪರಿಸರದಲ್ಲಿ ಸ್ಥಾಪಿತವಾಗಿರುವ ಈ ಪೀಠ ದೇಶವ್ಯಾಪ್ತಿ ಪ್ರಸಿದ್ಧಿ ಪಡೆದಿದೆ. ಈ ಸ್ಥಳದಲ್ಲಿ ಲ್ಯಾಡ್‌ರೈಟ್ ಶಿಲೆಯ ಗುಹೆ ಇದೆ. ದತ್ತಾತ್ರೇಯರು ಗುಹೆಯಲ್ಲಿ ತಪಸ್ಸು ಮಾಡಿದರೆಂಬ ನಂಬಿಕೆಯಿಂದ ಹಿಂದೂಗಳು ತಮ್ಮ ಪವಿತ್ರ ಸ್ಥಳವೆಂದು ಪೂಜಿಸಿದರೆ, ಬಾಬಾಬುಡನ್ ಎಂಬ ಸಂತ ಗುಹೆಯಲ್ಲಿ ನೆಲೆಸಿದರೆಂಬ ನಂಬಿಕೆಯಲ್ಲಿ ಮುಸ್ಲಿಮರು ತಮ್ಮ ಪವಿತ್ರ ಸ್ಥಳವೆಂದು ಪೂಜಿಸುತ್ತಿದ್ದಾರೆ. ಹಿಂದೂ ಮುಸ್ಲಿಂರ ಶ್ರದ್ಧಾ ಭಕ್ತಿ, ಭಾವೈಕ್ಯತೆ ಕೇಂದ್ರ ದತ್ತಾತ್ರೇಯರ ಪೀಠ(ಚಿತ್ರಸಂಖ್ಯೆ2). ಗುಹಾಂತರ ದೇವಾಲಯದಲ್ಲಿ ದತ್ತಾತ್ರೇಯರ ಪಾದುಕೆಗಳು ಮತ್ತು ಗೋರಿಗಳು ಇವೆ(ಚಿತ್ರಸಂಖ್ಯೆ3–4). ಮಳೆಯಿಂದ ಗುಹೆ ಕುಸಿದ ಹಿನ್ನೆಲೆಯಲ್ಲಿ ಜಿಲ್ಲಾ ಆಡಳಿತದವರು ಜೀರ್ಣೋದ್ಧಾರ ಮಾಡಿಸಿದ್ದಾರೆ. ಪ್ರತಿ ವರ್ಷ ಡಿಸೆಂಬರ್ ತಿಂಗಳಲ್ಲಿ ಹಿಂದೂಗಳು ದತ್ತಾತ್ರೇಯರ ಜಯಂತಿಯನ್ನು ಮುಸಲ್ಮಾನರು ಉರುಸ್ ಜಾತ್ರೆಯನ್ನು ಅದ್ದೂರಿಯಾಗಿ ನಡೆಸಿಕೊಂಡು ಹೋಗುತ್ತಿದ್ದಾರೆ. ಈ ವೇಳೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪ್ರವಾಸಿಗಳು ಬರುತ್ತಾರೆ. ಚಿಕ್ಕಮಗಳೂರಿನಿಂದ ಬಾಬಾಬುಡನ್‌ಗಿರಿಗೆ ಉತ್ತಮ ರಸ್ತೆ ಇದೆ. ಈ ಪ್ರದೇಶ ತಂಪಾದ ತಾಣವಾಗಿ ಪ್ರವಾಸಿಗರನ್ನು ಆಕರ್ಷಿಸುತ್ತಿದೆ.

ಭಾರತದ ನಕ್ಷೆಯಲ್ಲಿ ಪಶ್ಚಿಮ ಘಟ್ಟಗಳು ವಿಶೇಷ ಸ್ಥಾನವನ್ನು ಪಡೆದಿವೆ. ದಕ್ಷಿಣ ಭಾರತದ ಅದರಲ್ಲೂ ಕರ್ನಾಟಕದ ಅರ್ಧದಷ್ಟು ಭೂಭಾಗದ ಮೇಲೆ ಪಶ್ಚಿಮ ಕರಾವಳಿಯಿಂದ ಹಾದುಹೋಗುವ ಮಾರುತಗಳು ತಮ್ಮ ಪ್ರಭಾವವನ್ನು ಬೀರಿವೆ. ಇಳೆಗೆ ಮಳೆ ಉಣಿಸಿ ಆ ಮೂಲಕ ಕಾಫಿ, ಏಲಕ್ಕಿ, ಕರಿಮೆಣಸು, ಅಡಿಕೆ, ಬಾಳೆ, ಭತ್ತ ಮುಂತಾದ ಆರ್ಥಿಕ ಬೆಳೆಗಳನ್ನು ಬೆಳೆಯುವಂತೆ ಮಾಡಿ ಈ ಭಾಗದ ಜನರ ಆರ್ಥಿಕ ಮಟ್ಟವನ್ನು ಸುಧಾರಿಸಿದೆ. ರಾಜ್ಯದ ಖ್ಯಾತಿಯನ್ನು ದೇಶ ವಿದೇಶದಲ್ಲಿ ಹರಡುವಂತೆ ಮಾಡಿದೆ. ಜಿಲ್ಲಾ ಕೇಂದ್ರ ಚಿಕ್ಕಮಗಳೂರು ನಗರದಿಂದ ಕೆಮ್ಮಣ್ಣುಗುಂಡಿಗೆ ಹೋಗುವ ಮಾರ್ಗದಲ್ಲಿ ಸುಮಾರು 32 ಕಿ.ಮೀ. ಅಂತರದಲ್ಲಿ ಬಾಬಾಬುಡನ್‌ಗಿರಿ ಶಿಖರವಿದೆ. ಚಿಕ್ಕಮಗಳೂರಿನಿಂದ 6 ಕಿ.ಮೀ.ಗಳಷ್ಟು ದೂರ ಕ್ರಮಿಸಿದರೆ ಕೈಮರ ಸಿಗುತ್ತದೆ. ಅಲ್ಲಿಂದ ಎಡಕ್ಕೆ ತಿರುಗಿ ಕಾಫಿ ತೋಟಗಳ ತಿರುವುಗಳನ್ನು ದಾಟುತ್ತಾ ಹೋದಂತೆ ಇಕ್ಕೆಲಗಳಲ್ಲೂ ಬೆಳೆದಿರುವ ಗಗನಚುಂಬಿ ಮರಗಳ ನಡುವೆ ಸುಮಾರು ದೂರ

ಕ್ರಮಿಸಿದರೆ ನಿಧಾನವಾಗಿ ಚಂದ್ರದ್ರೋಣ ಪರ್ವತದ ಒಡಲನ್ನು ಛೇದಿಸಿಕೊಂಡು ಸಾಗುವ ಏರುಮುಖ ರಸ್ತೆ ನೂರಾರು ತಿರುವುಗಳ ಮೂಲಕ ಪ್ರವಾಸಿಗರನ್ನು ಬಾಬಾಬುಡನ್‌ಗಿರಿಗೆ ಕೊಂಡೊಯ್ಯುತ್ತದೆ.[4]

ದಾರಿಯಲ್ಲಿ ಗೋಡೆಯಂತೆ ದುತ್ತೆಂದು ಎದುರಾಗುವ ಕವಿ ಕಲ್ಗಂಡಿ ಶ್ರೇಣಿಯ ಪ್ರಾರಂಭದ ಎತ್ತರದ ವೇದಿಕೆಯಂತಹ ದಿಬ್ಬದ ತಿರುವಿನಲ್ಲಿ 'ವೀಕ್ಷಣ ಬಿಂದು' ಸಿಗುತ್ತದೆ. ಆ ಗುಡ್ಡದ ತಲೆಯ ಮೇಲೆ ನಿಂತು ಸುತ್ತಲೂ ಕಣ್ಣಾಡಿಸಿದರೆ ದಕ್ಷಿಣಕ್ಕೆ ಚಿಕ್ಕಮಗಳೂರು ನಗರ ಹಾಗೂ ಬಯಲು ಪ್ರದೇಶ ಮನೋಹರವಾಗಿ ನೂರಾರು ಕಿ.ಮೀ. ಗಳವರೆಗೂ ಕಾಣಿಸುತ್ತದೆ. ಪೂರ್ವಕ್ಕೆ ತಲೆ ಎತ್ತಿ ನಿಂತ ಬಾಬಾಬುಡನ್‌ಗಿರಿಯ ಶಿಖರಾಗ್ರ. ಉತ್ತರದ ಕಡೆ ಸುಮಾರು 80 ಕಿ.ಮೀ.ಗಳಷ್ಟು ದೂರದಲ್ಲಿರುವ ಭದ್ರಾ ನದಿಯ ಹಿನ್ನೀರು ನೂರಾರು ಮಲೆಗಳ ತಲೆಗಳ ನಡುವಿನ ದೋಣೀಯಾಕಾರದ ಕಣಿವೆಗಳ ನಡುವೆ ಥಳಥಳಿಸುತ್ತದೆ. ಮನಮೋಹಕವಾದ ದೃಶ್ಯ ಕಾವ್ಯವನ್ನು ಬಿಡಿಸಿದಂತೆ ಭಾಸವಾಗುತ್ತದೆ.

ಪಶ್ಚಿಮಕ್ಕೆ ಅತಿ ಎತ್ತರದ ಮುಳ್ಳಯ್ಯನಗಿರಿ. ಕಿರೀಟ ತೊಟ್ಟಂತೆ ಇರುವ ಭೂರಮೆಯ ಸೌಂದರ್ಯವನ್ನು ವರ್ಣನೆ ಮಾಡುವುದು ಅಷ್ಟು ಸುಲಭದ ಮಾತಲ್ಲ. ಇದನ್ನು ನೋಡಿಯೇ ಆನಂದಿಸಿರಬೇಕು. ಈ ಪರ್ವತದ ಉತ್ತರ ಭಾಗದ ಮಗ್ಗುಲಲ್ಲೆ ಇಳಿಯುತ್ತಾ, ಏರುತ್ತಾ, ಬಳುಕುತ್ತಾ ಸಾಗುವ ದಾರಿಯಲ್ಲಿ ಮುಂದೆ ಸಾಗಬೇಕು. ಪರ್ವತದ ಒಡಲು ತುಂಬಾ ನಾನಾ ವರ್ಣದ, ನಾನಾ ನಮೂನೆಯ ಕಲ್ಲುಗಳು ಪದರ ಪದರವಾಗಿ ಜೋಡಿಸಿಟ್ಟ ನೋಟಿನ ಕಂತೆಯಂತೆ ಇಣುಕುತ್ತವೆ.

ಅರಿಶಿನ ಕುಂಕುಮದ ಲೇಪನದಂತೆ ಒಂದೆಡೆ ಕಂಡರೆ ಕಲ್ಲಿದ್ದಲು, ಕಬ್ಬಿಣ, ಮ್ಯಾಂಗನೀಸ್‌ನ್ನು ಜ್ಞಾಪಕಕ್ಕೆ ತರುವ ಬೂದುಬಣ್ಣ, ಕಂದು ಬಣ್ಣಗಳು ಕಣ್ಣಮುಂದೆ ಕುಣಿಯುತ್ತವೆ. ದೂರದಲ್ಲಿ ಕಾಣುವ ಬೆಟ್ಟಗಳ ನಡುವಿನ ಕಣಿವೆಯಾಕಾರದ ಇಳಿಜಾರಿನಲ್ಲಿ ಅಂದರೆ ಶೋಲೆಗಳಲ್ಲಿ ಬೆಳೆದ ಅಸಂಖ್ಯ ಹಸಿರಿನ ವನರಾಶಿ ಕಣ್ಣಿಗೆ ಮುದನೀಡಿದರೆ ಬೆಟ್ಟದ ತುದಿಯಲ್ಲಿ ತೇಲಿ ಹೋಗುವ, ಹಾದು ಹೋಗುವ ಮಾರುತಗಳು, ಧಣಿದ ದೇಹಕ್ಕೆ ತಂಪು ನೀಡಿ ಮನಕ್ಕೆ ಆನಂದವನ್ನು ಈಯುತ್ತವೆ. ತುಸು ದೂರ ಸಾಗಿದರೆ ಒಂದು ತಿರುವಿನಲ್ಲಿ ತನ್ನೆಡೆಗೆ ಸೆಳೆಯುವ ಅಪರೂಪದ ಜಲಪಾತ (ಹೊನ್ನಮ್ಮನಳ) ಬೆಳ್ನೊರೆಗರೆಯುತ್ತಾ ಆಕಾಶದಿಂದ ಪಾತಾಳಕ್ಕೆ ಇಳಿಯುತ್ತಿರುವ ಭಗೀರಥನ ಜಟೆಯಿಂದ ಸುರಿಯುವ ಗಂಗೆಯ ನೆನಪನ್ನು ತಾರದೇ ಇರದು.

ವಾಹನಗಳನ್ನು ಇಲ್ಲಿ ನಿಲ್ಲಿಸಿ ಕೆಳಗಿಳಿದು ಬಳಿ ಸಾಗಿದರೆ ಮುಂದೆ ಅಕ್ಕಿಗುಂಡಿ ಎಂಬ ಜನವಸತಿ ಇರುವ ಒಂದು ಪುಟ್ಟ ಗ್ರಾಮ ಸಿಗುತ್ತದೆ. ಅದನ್ನು ದಾಟಿ ಮುಂದೆ ಸಾಗಿದರೆ ಅಲ್ಲಲ್ಲಿ ಮುಗಿಲುಗಳು ಸೂರ್ಯನ ಜತೆ ನಡೆಸಿರುವ ಕಣ್ಣುಮುಚ್ಚಾಲೆಯಿಂದ ಆಗಾಗ ನಿರ್ಮಾಣ ಆಗುವ ನೆರಳು ಬೆಳಕಿನ ಆಟದ ನಡುವೆ ಹೋಗಿ ತಲುಪುವುದೇ ಬಾಬಾಬುಡನ್ ಹಾಗೂ ಇನಾಂ ದತ್ತಾತ್ರೇಯ ಪೀಠವಿರುವ ಧಾರ್ಮಿಕ ಸ್ಥಳಕ್ಕೆ.

ಇಲ್ಲಿಂದ ಕೇವಲ 1 ಕಿ.ಮೀ. ಉತ್ತರಕ್ಕೆ ಹೋದರೆ ಸುಂದರವಾದ ಗಾಳಿಕೆರೆ ಸಿಗುತ್ತದೆ. ಇನ್ನು ಪೀಠದಿಂದ ಆಗ್ನೇಯ ದಿಕ್ಕಿಗೆ ಕೇವಲ 2 ಕಿ.ಮೀ.ಗಳಷ್ಟು ಕ್ರಮಿಸಿದರೆ ಬಾಬಾಬುಡನ್‌ಗಿರಿಯ ಶೃಂಗ(ಚಿತ್ರಸಂಖ್ಯೆ5). ಇಲ್ಲಿ ವಾಹನ ನಿಲುಗಡೆಗೆ ಜಾಗವನ್ನು ಮಾಡಲಾಗಿದೆ. ಇದರ ಎದುರು ಕಿರೀಟಪ್ರಾಯವಾಗಿ ಗಗನಕ್ಕೆ ತಲೆಎತ್ತಿ ನಿಂತಿರುವ ದೇವೀರಮ್ಮನ ಬೆಟ್ಟ ಕಾಣಿಸುತ್ತದೆ. ಇದು ಹೂಗಳತೆಯಲ್ಲಿ ಇದೆ ಎಂದು ಕಂಡುಬಂದರೂ ಅಲ್ಲಿಗೆ ನಡೆದು ಹೋಗಲು ಹಾವಿನಾಕಾರದ ಕಾಲುದಾರಿ ಇದೆ. ಇದು ಚಾರಣಪ್ರಿಯರಿಗೆ ಹೇಳಿ ಮಾಡಿಸಿದ ದಾರಿ. ಶ್ರೀ ದೇವೀರಮ್ಮನ ದೇವಾಲಯದ ಬಾಗಿಲು ಪ್ರತಿ ವರ್ಷಕ್ಕೊಮ್ಮೆ ದೀಪಾವಳಿಯಲ್ಲಿ ತನ್ನ ತಾನೆ ತೆರೆದುಕೊಳ್ಳುವುದು ವಿಶೇಷ. ಇಲ್ಲಿ ಆ ಸಮಯದಲ್ಲಿ ಜಾತ್ರೆ ನಡೆಸುವುದು ವಾಡಿಕೆ.

ಸುಮಾರು 10 ರಿಂದ 15 ಸಾವಿರ ಜನ ಭಕ್ತರು ಇಲ್ಲಿಗೆ ಭೇಟಿ ನೀಡಿ ಅಮ್ಮನವರ ಕೃಪೆಗೆ ಪಾತ್ರರಾಗುತ್ತ ನಿಲ್ದಾಣದಿಂದ ಗಿರಿಯ ಮತ್ತೊಂದು ಮಗ್ಗುಲಲ್ಲಿ ಇರುವ ನೂರಾರು ಮೆಟ್ಟಿಲುಗಳನ್ನು ಇಳಿದು ಪಶ್ಚಿಮಕ್ಕೆ ಚಲಿಸಬೇಕು. ನೂರಾರು ಅಡಿಗಳಿಂದ ಆಕಾಶಗಂಗೆಯಂತೆ ಋಷಿಯ ಜಟೆಯಿಂದ ಇಳಿದು ಬರುವಂತೆ ಒಂದು ಹೆಬ್ಬಂಡೆಯನ್ನು ಆಧರಿಸಿ ತೂಗುತ್ತಿರುವ ದರ್ಭೆ ಹುಲ್ಲಿನ ಬೇರಿನಿಂದ ಮಾಣಿಕ್ಯದ ಹರಳುಗಳಂತೆ, ಮುತ್ತಿನ ಮಣಿಗಳಂತೆ ಧಾರೆ ಧಾರೆಯಾಗಿ ಉರುಳುತ್ತಿರುವ ನೀರ ಹನಿಗಳು. ಇದಕ್ಕೆ ಮಾಣಿಕ್ಯಧಾರೆ ಎಂದು ಕರೆಯುತ್ತಾರೆ. ನೂರಾರು ಗಿಡಮೂಲಿಕೆಗಳ ಬೇರಿನಿಂದ ನುಸುಳಿ ಬರುವ ಜಲಧಾರೆಯಲ್ಲಿ ಔಷಧ ಗುಣಗಳಿದ್ದು, ಇದರಲ್ಲಿ ಮೀಯುವವರಿಗೆ ಮಾನಸಿಕ ಸ್ಥಿಮಿತ ಹಾಗೂ ಆರೋಗ್ಯದಲ್ಲಿ ಸುಧಾರಣೆ ಆಗುತ್ತದೆ ಎಂಬ ನಂಬಿಕೆ ಇದೆ.[5] ಹೀಗಾಗಿ ದಿನನಿತ್ಯ ನೂರಾರು ಜನ ಯಾತ್ರಿಗಳು, ಪ್ರವಾಸಿಗರು ಇಲ್ಲಿಗೆ ಬರುತ್ತಾರೆ. ಇಲ್ಲಿನ ಜಲಧಾರೆಯಲ್ಲಿ ಮಿಂದು ಹೋಗುತ್ತಾರೆ.

ಬಾಬಾಬುಡನಗಿರಿಯನ್ನು ಸಂಜೀವಿನಿ ಪರ್ವತ ಅಥವಾ ಜಲಮೇರು ಪರ್ವತ ಎನ್ನುವುದಕ್ಕೆ ಅನ್ವರ್ಥವಾಗಿದೆ. ಏಕೆಂದರೆ ಇದು ಹಲವಾರು ಕಾಯಿಲೆಗಳನ್ನು ಗುಣಪಡಿಸುವ

ಸಾವಿರಾರು ಜಾತಿಯ ಗಿಡಮೂಲಿಕೆಗಳ ಘನಿಯಾಗಿದೆ. ಇಂದಿಗೂ ಇಲ್ಲಿ ಈ ನಾರು ಬೇರು ಗಿಡ ಮೂಲಿಕೆಗಳನ್ನು ರಾಶಿ ಹಾಕಿಕೊಂಡು ಮಾರುವ ಹಕೀಮರು ಇಲ್ಲಿ ಕಾಣ ಸಿಗುತ್ತಾರೆ.

**ಪ್ರವಾಸಿಗರಿಗಿರುವ ಅನಾನುಕೂಲಗಳು ಮತ್ತು ಅವುಗಳನ್ನು ಸರಿಪಡಿಸಲು ಕೈಗೊಳ್ಳುವ ಕ್ರಮಗಳು**

1) ಬಾಬಾಬುಡನ್‌ಗಿರಿಗೆ ಚಿಕ್ಕಮಗಳೂರು (ಕೆ.ಎಸ್.ಆರ್.ಟಿ.ಸಿ) ಕ.ರಾ.ರ.ಸಾ.ನಿ. ಬಸ್ ನಿಲ್ದಾಣದಿಂದ ಯಾವುದೇ ಬಸ್ ಸೌಲಭ್ಯವಿಲ್ಲ, ಹಾಗಾಗಿ ಪ್ರವಾಸೋದ್ಯಮ ಇಲಾಖೆ, ಕರ್ನಾಟಕ ರಾಜ್ಯಸರ್ಕಾರ. ಚಿಕ್ಕಮಗಳೂರಿನಿಂದ ಬಾಬಾಬುಡನ್‌ಗಿರಿಗೆ ಕ.ರಾ.ರ.ಸಾ.ನಿ. ವತಿಯಿಂದ ಬಸ್ ಸೌಲಭ್ಯ ಕಲ್ಪಿಸಿದರೆ ಹೆಚ್ಚಿನ ಸಂಖ್ಯೆಯಲ್ಲಿ ಪ್ರವಾಸಿಗರು ಬರಲು ಸಾಧ್ಯವಾಗುತ್ತದೆ.
2) ಈ ತಾಣಕ್ಕೆ ಬರುವ 90% ಪ್ರವಾಸಿಗರು ಸ್ವಂತವಾಹನ ಇಲ್ಲವೇ. ಬಾಡಿಗೆ ಕಾರುಗಳಲ್ಲಿ ಬರುತ್ತಾರೆ, ಖಾಸಗಿ ಬಸ್ ಸೌಲಭ್ಯವಿದ್ದರೂ ಅದೂ ದಿನಕ್ಕೆ 2 ಅಥವಾ ಮೂರು ಬಾರಿ ಮಾತ್ರ. ಆದುದರಿಂದಾಗಿ ಸಾಮಾನ್ಯ ಜನರು ಈ ಪ್ರವಾಸಿ ತಾಣಗಳ ಸೊಬಗನ್ನು ಸವಿಯಲು ಸಾಧ್ಯವಾಗುತ್ತಿಲ್ಲ. ಇದರತ್ತ ಪ್ರವಾಸೋದ್ಯಮ ಇಲಾಖೆ ಸಾಮಾನ್ಯ ಜನರಿಗೆ ಕೈಗೆಟುಕುವ ದರ ನಿಗಧಿಪಡಿಸಿ ವಾಹನ ವ್ಯವಸ್ಥೆಯನ್ನು ಮಾಡಬೇಕಾಗುತ್ತದೆ.
3) ಬಾಬಾಬುಡನ್‌ಗಿರಿ ಬಸ್ ನಿಲ್ದಾಣದಲ್ಲಿ ಸಾರ್ವಜನಿಕ ಶೌಚಾಲಯ ಸೌಲಭ್ಯವಿದ್ದರೂ ಅದರ ನಿರ್ವಹಣೆ ಉತ್ತಮವಾಗಿಲ್ಲ. ಅದನ್ನು ಇನ್ನೂ ಅಭಿವೃದ್ಧಿಗೊಳಿಸಬೇಕು.
4) ಹೋಟೆಲ್ ಅಂಗಡಿಗಳಿದ್ದರೂ ಪ್ರವಾಸಿಗರು ಉಳಿದುಕೊಂಡು ಇಲ್ಲಿನ ಪ್ರಕೃತಿ ಸೊಬಗನ್ನು ಸವಿಯಲು ವಸತಿ (ಲಾಡ್ಜ್) ಸೌಲಭ್ಯಗಳಿಲ್ಲ. ಲಾಡ್ಜ್‌ಗಳನ್ನು ನಿರ್ಮಿಸಬೇಕಾಗುತ್ತದೆ.
5) ಬಾಬಾಬುಡನ್‌ಗಿರಿ ಪ್ರವಾಸಿ ತಾಣಗಳಿಗೆ ಬರುವ ಪ್ರವಾಸಿಗರು ಭಾನುವಾರ ಹಾಗೂ ರಜಾದಿನಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಬರುವುದರಿಂದ, ಬರುವ ಪ್ರವಾಸಿಗರು ಊಟತಿಂಡಿ, ಮಾಡಿ ಪ್ಲಾಸ್ಟಿಕ್ ಕವರ್‌ಗಳನ್ನು ಎಲ್ಲೆಂದರಲ್ಲಿ ಬಿಸಾಡಿ ಹೋಗುತ್ತಾರೆ. ಹಾಗೆಯೇ ಕೆಲವು ಸ್ಥಳಗಳಲ್ಲಿ ಸಿಗರೇಟ್‌ಪ್ಯಾಕ್ ಹಾಗೂ ಸಾರಾಯಿ ಬಾಟಲುಗಳನ್ನು ಕುಡಿದು ಖಾಲಿ ಬಾಟಲಿಗಳನ್ನು ಬಿಸಾಡಿಹೋಗಿರುತ್ತಾರೆ, ಗಾಜಿನ ಚೂರುಗಳು ಮಳೆ ಬಂದಾಗ ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಂಚರಿಸಿ ಬರಿಗಾಲಲ್ಲಿ ನಡೆದಾಡುವ ಪ್ರವಾಸಿಗರಿಗೆ ತೊಂದರೆಯಾಗಬಹುದು. ಆದ್ದರಿಂದ ಈ ಪ್ರವಾಸಿ ತಾಣಗಳ ಸುತ್ತಮುತ್ತ ಕಸದ ಡಬ್ಬಿಗಳನ್ನು ಇಡಬೇಕು.

6) ಮದ್ಯಪಾನ, ಧೂಮಪಾನ ಮಾಡುವವರಿಗೆ ದಂಡವಿಧಿಸಬೇಕು ಹಾಗೂ ಪ್ರವಾಸಿಗರಿಗೆ ರಕ್ಷಣೆ ಒದಗಿಸಲು ರಕ್ಷಣಾ ಸಿಬ್ಬಂದಿಗಳನ್ನು ನೇಮಿಸಬೇಕು.

ಈ ಮೇಲ್ಕಂಡ ಎಲ್ಲಾ ಅನಾನುಕೂಲಗಳನ್ನು ಸರಿಪಡಿಸಿ ಕೆಲವುಅಭಿವೃದ್ಧಿ ಯೋಜನೆಗಳನ್ನು ಹಮ್ಮಿಕೊಂಡರೆ ಈ ಪ್ರವಾಸಿ ತಾಣವು ಹೆಚ್ಚು ಜನಪ್ರಿಯತೆಗಳಿಸಿ, ಸಾಮಾನ್ಯ ಜನರು ಸವಿಯಬಹುದಾದ ಪ್ರವಾಸಿ ತಾಣವಾಗುತ್ತದೆ.

**ಮಾರ್ಗಸೂಚಿ**

ಬೆಂಗಳೂರಿನಿಂದ – 256 ಕಿ.ಮೀ.

ಮಂಗಳೂರಿನಿಂದ – 112 ಕಿ.ಮೀ.

ಬೇಲೂರಿನಿಂದ – 28 ಕಿ.ಮೀ.

ಕಡೂರಿನಿಂದ – 30 ಕಿ.ಮೀ

ಗುಹೆಗಳು, ನೀರಿನ ತೊರೆಗಳು, ವೃಕ್ಷಗಳು ಸಂಗಮಗೊಂಡಿರುವ ಈ ಕ್ಷೇತ್ರ ಧಾರ್ಮಿಕ ಆಸಕ್ತರ ಪುಣ್ಯ ಕ್ಷೇತ್ರವಾಗಿದೆ.

## ಮುಳ್ಳಯ್ಯನಗಿರಿ

ಪಶ್ಚಿಮಘಟ್ಟಗಳ ಗಿರಿ ಪಂಕ್ತಿಯಲ್ಲಿ ಹೊನ್ನ ಕಳಶವಿಟ್ಟಂತೆ ದಕ್ಷಿಣ ಭಾರತದಲ್ಲೇ ಅತಿ ಎತ್ತರದ ಮುಳ್ಳಯ್ಯನ ಗಿರಿ(ಚಿತ್ರಸಂಖ್ಯೆ6) ಇರುವುದು ಚಿಕ್ಕಮಗಳೂರು ಜಿಲ್ಲೆಯ ಚಂದ್ರದ್ರೋಣ ಪರ್ವತ ಶ್ರೇಣಿಯಲ್ಲಿ ಸದಾ ಹಸಿರಿನಿಂದ ತುಂಬಿ ತುಳುಕುವ ಪಶ್ಚಿಮಘಟ್ಟಗಳ ಸಾಲಿನಲ್ಲಿ ತನ್ನ ಎತ್ತರದ ನಿಲುವಿನಿಂದ ಪ್ರವಾಸಿಗರನ್ನು ದೂರದಿಂದಲೇ ಸೂಜಿಗಲ್ಲಿನಂತೆ ತನ್ನತ್ತ ಒಮ್ಮೆಲೇ ಸೆಳೆದುಬಿಡುವ ಉತ್ತುಂಗ ಶಿಖರ ಜಿಲ್ಲಾ ಕೇಂದ್ರ ಚಿಕ್ಕಮಗಳೂರು ಪಟ್ಟಣದಿಂದ ಕೇವಲ 27 ಕಿ.ಮೀ.ಗಳಷ್ಟು ದೂರದಲ್ಲಿದೆ.

ಮುಳ್ಳಯ್ಯನಗಿರಿ ಶಿಖರವು 6317 ಅಡಿ ಎತ್ತರದಲ್ಲಿದೆ.[6] ಚಿಕ್ಕಮಗಳೂರಿನಿಂದ ತರೀಕೆರೆಗೆ ಹೋಗುವ ದಾರಿಯಲ್ಲಿ 6 ಕಿ.ಮೀ.ಗಳಷ್ಟು ಕ್ರಮಿಸಿದರೆ ಕೈಮರ ಸಿಗುತ್ತದೆ. ಅಲ್ಲಿಂದ ಎಡಕ್ಕೆ ತಿರುಗಿ ಬಾಬಾಬುಡನ್‌ಗಿರಿಗೆ ಹೋಗುವ ರಸ್ತೆಯಲ್ಲಿ 10 ಕಿ.ಮೀಗಳಷ್ಟು ಕ್ರಮಿಸಿದರೆ ಮುಂದಿರುವ ಬೆಟ್ಟದ

ಬುಡದ ಎಡಭಾಗದಲ್ಲೊಂದು ಸೀತಾಳಯ್ಯನ ಗಿರಿ ಮತ್ತು ಮುಳ್ಳಯ್ಯನಗಿರಿಗೆ ಹೋಗುವ ದಾರಿ ಎನ್ನುವ ನಾಮಫಲಕ ಕಾಣುತ್ತದೆ. ಅಲ್ಲಿಂದ ಎಡಕ್ಕೆ ತಿರುಗಿ ರಸ್ತೆಗುಂಟ ಮುಂದಕ್ಕೆ ಸಾಗಿದರೆ ಅಂಕುಡೊಂಕಾದ ರಸ್ತೆ ಏರುಮುಖವಾಗುತ್ತ ಹಲವಾರು ತಿರುವುಗಳನ್ನು ಪಡೆದುಕೊಳ್ಳುತ್ತಾ ಸಾಗುತ್ತದೆ. ಹೀಗೆ ಸುಮಾರು 8 ಕಿ.ಮೀ ಕ್ರಮಿಸಿದ ಮೇಲೆ ಒಂದು ವಿಶಾಲವಾದ ಪ್ರದೇಶ ಸಿಗುತ್ತದೆ. 2 ವಿಮಾನ ಗೋಪುರಗಳುಳ್ಳ ಸೀತಾಳಯ್ಯನ ದೇವಾಲಯ ನಮ್ಮನ್ನು ದೂರದಿಂದಲೇ ಸ್ವಾಗತಿಸುತ್ತದೆ. ಇದು ಸಮುದ್ರ ಮಟ್ಟಕ್ಕಿಂತ ಸುಮಾರು 4,347 ಅಡಿಗಳಷ್ಟು ಎತ್ತರದಲ್ಲಿದ್ದು ರುದ್ರರಮಣೀಯ ನಿಸರ್ಗಧಾಮ ಆಗಿದೆ. ಮುಳ್ಳಯ್ಯನಗಿರಿ ಬೆಟ್ಟದ ಮೇಲೆ ಮುಳ್ಳಯ್ಯಸ್ವಾಮಿ ಮಠವಿದೆ(ಚಿತ್ರಸಂಖ್ಯೆ7).

ಒಂದು ಗರ್ಭಗುಡಿಯಲ್ಲಿ ಪಾಣಿಪೀಠದ ಮೇಲೆ ಸುಂದರವಾದ ಶಿವಲಿಂಗವಿದ್ದು(ಚಿತ್ರಸಂಖೆ8). ಹೊನ್ನಿನ ಲೇಪನದ ಸುಂದರವಾದ ಶಿವನ ಮುಖವಾಡವನ್ನು ತೊಡಿಸಲಾಗಿದೆ. ಪೀಠದ ತಳಭಾಗದಲ್ಲಿ ಎಲ್ಲ ಕಾಲಮಾನದಲ್ಲೂ ಜಿನುಗುತ್ತಿರುವ ಗಂಗೆ. ಇದನ್ನೆ ಭಕ್ತರಿಗೆ ತೀರ್ಥವೆಂದು ಹಂಚಲಾಗುತ್ತದೆ. ಪಕ್ಕದ ಮತ್ತೊಂದು ಗರ್ಭಗುಡಿಯಲ್ಲಿ ವೀರಭದ್ರ ವಿರಾಜಮಾನನಾಗಿದ್ದಾನೆ. ಇಲ್ಲಿ ದೇವಾಲಯದ ಸುತ್ತಲೂ ಎತ್ತರದ ಪೌಳಿ ಇದ್ದು ಒಳಾಂಗಣದಲ್ಲಿ ಪ್ರದಕ್ಷಿಣಾ ಪಥವಿದೆ. ಇಲ್ಲಿರುವ ವಿಶಾಲವಾದ ಬಯಲಿನಲ್ಲಿ ನಿಂತು ಸುತ್ತಲೂ ಒಮ್ಮೆ ಕಣ್ಣಾಡಿಸಿದರೆ ದೃಷ್ಟಿಗೆ ನಿಲುಕುವಷ್ಟು ಅಸಂಖ್ಯ ಪ್ರಭೇದದ ಸಸ್ಯರಾಶಿಯ ತಂಪು ಹಸಿರಿನ ಮೈಸಿರಿ. ನೀಲಿಯನ್ನು ಹೊದ್ದ ಪರ್ವತದ ಸಾಲು ಸಾಲು ಪ್ರವಾಸಿಗರನ್ನು ಮೂಕ ವಿಸ್ಮಿತರನ್ನಾಗಿ ಮಾಡುತ್ತದೆ. ಈ ಸುಂದರ ಗಿರಿಧಾಮವನ್ನು ವೀಕ್ಷಿಸಲು ವರ್ಷವಿಡೀ ಪ್ರವಾಸಿಗರ ದಂಡು, ಜೊತೆಗೆ ಶೈಕ್ಷಣಿಕ ಪ್ರವಾಸ ಕೈಗೊಳ್ಳುವ ವಿದ್ಯಾರ್ಥಿಗಳ ಹಿಂಡು ಅವರೆಲ್ಲರೂ ವೈವಿಧ್ಯಮಯ ಪ್ರಕೃತಿಯನ್ನು ಕಂಡು ಧನ್ಯರಾಗುತ್ತಾರೆ.

ಇಲ್ಲಿ ಸಿಗುವ ತಣ್ಣನೆಯ ತೀರ್ಥ ಸವಿದು ಮುಂದೆ ಆಕಾಶಕ್ಕೆ ತಲೆಎತ್ತಿ ನಿಂತ ಶೃಂಗದ ಕಡೆ ಸುಮಾರು 3 ಕಿ.ಮೀ.ಗಳಷ್ಟು ದೂರ ಗಿರಿಯ ಬದುವನ್ನೆ ಕೊರೆದು ನಿರ್ಮಿಸಿರುವ ರಸ್ತೆಯ ಗುಂಟ ಸಾಗಬೇಕು. ಇಕ್ಕೆಲಗಳಲ್ಲೂ ವಿವಿಧ ಆಕಾರ ಮತ್ತು ಗಾತ್ರಗಳಲ್ಲಿ ಬೆಳೆದ ಕುಬ್ಜ ಗಿಡಗಳು, ಹುಲ್ಲು ಪೊದರುಗಳು ಭೂರಮೆಯ ಮೈದುಂಬಿ ಸಿಂಗರಿಸುವುದು ಮನಕಾನಂದವನ್ನು ವೀಯುತ್ತವೆ. ಗಿರಿಯ ತುಟ್ಟ ತುದಿಯಲ್ಲಿರುವ ನನ್ನ ಮುಟ್ಟಬಲ್ಲೆಯ ಎಂದು ಕೊನೆಯಲ್ಲಿ ಅರಳಿ ನಿಂತ ಪುಟ್ಟ ಪುಷ್ಪ ಕೇಳುವಂತೆ ಭಾಸವಾಗುತ್ತದೆ. ಭೂದೇವಿಯ ಅಂಗಕ್ಕೆ ಕವಚ ನಾನು, 12 ವಸಂತಕ್ಕೊಮ್ಮ ಅರಳುವೆ ನಾನು, ನನ್ನ ನೋಡಲು ಬರುವಿರೇನು ಎಂದು 12 ವಸಂತಗಳಿಗೊಮ್ಮೆ

ಈ ನೆಲದಲ್ಲಿ ಒಂದಂಗುಲವೂ ಜಾಗ ಬಿಡದೆ ಅರಳಿ ಇಳೆಯ ಮೈಸಿರಿ ಹೆಚ್ಚಿಸುವ ಕುರವಂಜಿ ಪುಷ್ಪ ಪ್ರವಾಸಿಗರನ್ನೇ ಪ್ರಶ್ನಿಸುವಂತಿದೆ. ಮುಗಿಲಿನ ಜೊತೆಯಲ್ಲಿ ಸರಸವಾಡುತ್ತ ಆಕಾಶದ ಎತ್ತರವನ್ನು ಅಳೆಯಲು ಅನುವಾದ.

ಗಿರಿಶಿಖರ ಮತ್ತೊಂದು ಎದುರಿಗೆ ಬಂದು ನಿಂತಂತೆ ಭಾಸವಾಗುತ್ತದೆ. ಅದರ ತಳದಲ್ಲಿ ಪ್ರವಾಸೋದ್ಯಮ ಇಲಾಖೆಯವರು ನಿರ್ಮಿಸಿರುವ ವಾಹನ ನಿಲುಗಡೆ ತಾಣದಿಂದ ಪ್ರಾರಂಭವಾಗುವ ಮೆಟ್ಟಿಲುಗಳನ್ನು ಏರಿ ಮುಂದೆ ಸಾಗಬೇಕು. ಹೀಗೆ ಸಾಗುತ್ತಾ ಸುಮಾರು 500 ಮೆಟ್ಟಿಲುಗಳನ್ನು ಏರುತ್ತಾ ಹೋದಂತೆಲ್ಲಾ ಮುಗಿಲಿಗೆ ಕೈಚಾಚಿ ನಕ್ಷತ್ರಗಳನ್ನು ಹಿಡಿಯುವ ತವಕ. ಆಕಾಶಕ್ಕೆ ಏಣಿ ಹಾಕಿ ಗಾಳಿಯನ್ನು ತಬ್ಬಿ ಹಿಡಿದು ಎತ್ತರಕ್ಕೆ ಎತ್ತರಕ್ಕೆ ಏರುವ ಹಂಬಲ. ಸುತ್ತಲೂ ಒಮ್ಮೆ ಕಣ್ಣಾಡಿಸಿದರೆ ಹೃದಯವೇ ಭೂಮಿಗೆ ಬರುವಂತೆ ಪಕ್ಕದ ಆಳವಾದ ಪ್ರಪಾತ. ಒಮ್ಮೆಲೇ ನಡುಕ ಹುಟ್ಟಿಸಿಬಿಡುತ್ತದೆ. ಆದರೂ ಭೂಮಿ, ಆಕಾಶ ಒಂದುಗೂಡಿಸುವ ಒಂದು ಕೇಂದ್ರ ಬಿಂದುವಿನಲ್ಲಿ ಪ್ರವಾಸಿಗರಿಗೆ ತಾವಿರುವ ವಾಸ್ತವ ಅರಿವಾದಾಗ ರೋಚಕತೆಯ ಜೊತೆಯಲ್ಲಿ ಒಂದು ಧನ್ಯತೆಯ ಭಾವ ಮೂಡುತ್ತದೆ. ಈಗ ಬಂದು ತಲುಪುವುದು ಮಾನವ ನಿರ್ಮಿತ. ಕೋಟೆಯೊಂದರ ಪೌಳಿಯಿಂದ ಸುತ್ತುವರೆದಿದೆ.

**ಐತಿಹಾಸಿಕ ಹಿನ್ನೆಲೆ:** ಮುಳ್ಳಯ್ಯನಗಿರಿಯು ಸುಮಾರು 6317 ಅಡಿಗಳಷ್ಟು ಎತ್ತರವಿದ್ದು ದಕ್ಷಿಣ ಭಾರತದಲ್ಲೇ ಅತಿ ಎತ್ತರದ ಪ್ರದೇಶವಾಗಿದೆ. ಈ ಗಿರಿಯಲ್ಲಿ ಸುಮಾರು 900 ವರ್ಷಗಳ ಹಿಂದೆ ಸಾಧಕರೊಬ್ಬರು ತಪಸ್ಸನ್ನು ಆಚರಿಸಿ ನಿರ್ವಿಕಲ್ಪ ಸಮಾದಿ ಹೊಂದಿದ್ದರು(ಚಿತ್ರಸಂಖ್ಯೆ9). ಇಂದಿಗೂ ಸಾವಿರಾರು ಭಕ್ತರನ್ನು ಆಕರ್ಷಿಸುತ್ತಿರುವ ಸ್ಥಳವಾಗಿದೆ ಅವರ ಹೆಸರು ಮುಳ್ಳಪ್ಪಸ್ವಾಮಿ ಎಂದು ಈ ಕಾರಣದಿಂದಲೇ ಈ ಗಿರಿಗೆ ಮುಳ್ಳಯ್ಯನಗಿರಿ ಎಂಬ ಹೆಸರು ಬಂದಿದೆ. ಈ ಗಿರಿಯಲ್ಲಿ 15 ಮೀಟರ್ ಕೆಳಗೆ ಮೂರು ವಿಶಾಲ ಸಿದ್ದರ ಗುಹೆಗಳಿವೆ. ಅವುಗಳೆಂದರೆ ಮಲ್ಲಪ್ಪಸ್ವಾಮಿ(ಮುಳ್ಳಯ್ಯ) ಮುಪ್ಪಣಸ್ವಾಮಿ ಮತ್ತು ಸೂರಂದರಪ್ಪಸ್ವಾಮಿಗಳು ಈ ಸ್ಥಳದಲ್ಲಿ ಧ್ಯಾನ ಮಾಡಿದರೆಂದು ಹೇಳಲಾಗಿದೆ. ಈ ಗಿರಿಯ ಮೇಲ್ಭಾಗದಲ್ಲಿ ಶೈವ ದೇವಾಲಯವಿದೆ. ದೇವಾಲಯವನ್ನು ಸುತ್ತಲ 80 ಹಳ್ಳಿಯ ಭಕ್ತರು ಉಭಯನಾಡು ಮತ್ತು ಮೂರು ಹಳ್ಳಿಯ ಎರಡು ಮಠದವರು ಜೀರ್ಣೋದ್ದಾರ ಮಾಡಿ ದೇವಾಲಯವನ್ನು ಇಂದಿಗೂ ಸುಸ್ಥಿತಿಯಲ್ಲಿ ಇಟ್ಟಿದ್ದಾರೆ. ಇಲ್ಲಿಗೆ ತಿಂಗಳಿಗೆ ಸುಮಾರು 2000 ರಿಂದ 3000ದ ವರೆಗೆ ಪ್ರವಾಸಿಗರು ಬಂದು ಹೋಗುತ್ತಾರೆ. ಬರುವ ಪ್ರವಾಸಿಗರಿಗೆ ನೀರು ನೆರಳಿನ ಕೊರತೆ ಇಲ್ಲ. ಈ ಗಿರಿಯು ಸುಮಾರು 50–60 ಮೈಲಿಗಳಷ್ಟು ದೂರದ ಗ್ರಾಮಗಳಿಗೂ ಗೋಚರಿಸುತ್ತದೆ.

ದಕ್ಷಿಣ ಪ್ರಸ್ಥಭೂಮಿಯ ಈ ಅತಿ ಎತ್ತರದ ಪ್ರದೇಶದಲ್ಲಿ ನಿಂತು ಒಮ್ಮೆ ಸುತ್ತಲೂ ನೋಡಬೇಕು. ಚಿಕ್ಕಮಗಳೂರು ನಗರ ಸಹಿತವಾಗಿ ನೂರಾರು ಹಳ್ಳಿಗಳು ಭೂಮಿಗಳಿಂದ ನಕ್ಷತ್ರದ ರಾಶಿಯಂತೆ ಕಂಗೊಳಿಸಿದರೆ ಕೆರೆಕುಂಟೆಗಳು, ನದಿ ತೊರೆಗಳು, ಹಳ್ಳ, ಕೊಳ್ಳ, ಹೊಳೆಗಳು, ಭತ್ತದ ಗದ್ದೆಗಳು, ಹಸಿರಿನ ಹೊಲಗಳಿಂದ ಆವೃತವಾದ ಬಯಲುಸೀಮೆಯ ಮನಮೋಹಕ ನೋಟ ಭೂದೇವಿಯ ಅಂಗಳದಲ್ಲಿ ರಂಗವಲ್ಲಿಯನ್ನು ಬಿಡಿಸಿರುವಂತೆ ಕಂಗೊಳಿಸುತ್ತದೆ.

ನೋಡನೋಡುತ್ತಿದ್ದಂತೆ ಕ್ಷಣಾರ್ಧದಲ್ಲಿ ಈ ದೃಶ್ಯಕ್ಕೆ ಅಡ್ಡಲಾಗಿ ಹಿಡಿದ ಬಿಳಿ ರೇಷ್ಮೆಯ ಪರದೆಯಂತೆ ಮುಗಿಲ ಮಾಟ ಇಲ್ಲಿ ಹಗಲು ಇರುಳು ಇದೆ ಆಟ. ಇಲ್ಲಿ ಪ್ರಕೃತಿಯೇ ಒಂದು ರಂಗಮಂದಿರದಂತೆ ಮೈತಳೆದು ಮುಗಿಲ ಪರದೆಗಳ ಏಳುಬೀಳುಗಳ ನಡುವೆ ಚಕ್ಕಂದವಾಡುವ ವರುಣ ಕಿರಣಗಳು ಅಲ್ಲಲ್ಲಿ ಮುಗಿಲ ಸಿಂಪರಣೆಗೆ ತೊಯ್ದು ವನರಾಶಿಯ ಹಸಿರು ಬಣ್ಣಕ್ಕೆ ಸ್ವರ್ಣಲೇಪ ಕೊಟ್ಟ ದೃಶ್ಯ ಪ್ರವಾಸಿಗರ ಕಣ್ಮನ ತಳಿಸಿ ಪುಳಕಿತರನ್ನಾಗಿಸುತ್ತದೆ. ದೃಷ್ಟಿ ದಿಗಂತದವರೆಗೂ ಹರಡಿಕೊಂಡಿರುವ ವನರಾಶಿ, ತಿಳಿನೀಲಿ ಹೊತ್ತ ಪದರ ಪದರವಾಗಿ ಹರಡಿಕೊಂಡಿರುವ ಗಿರಿಪಂಕ್ತಿಯ ಸಾಲು, ಗುಹಾ ಕಂದರಗಳು, ಭೋರ್ಗರೆವ ನೀರ್ಜರಿಗಳು, ದುಮ್ಮಿಕ್ಕುವ ಜಲಪಾತಗಳು ಪ್ರವಾಸಿಗರ ಮನತಣಿಸಲು ಚೇತೋಹಾರಿ ತಾಣಗಳು, ಚಾರುಣರಿಗೆ,ಪ್ರವಾಸಿಗರಿಗೆ, ಸಾಹಸಿಗರಿಗೆ, ಪ್ರಕೃತಿಪ್ರಿಯರಿಗೆ ಸ್ವರ್ಗವೆನಿಸಬಹುದಾದ ಮುಳ್ಳಯ್ಯನಗಿರಿ ಪಂಕ್ತಿಯಲ್ಲಿ ಅಲ್ಲಲ್ಲಿ ಕಾಲುದಾರಿಗಳಿದ್ದು ಇದರಲ್ಲಿ ಒಂದು ಸರ್ಪದಾರಿಯೆಂದೇ ಕರೆಯಲ್ಪಡುವ ದಾರಿ ಇದೆ. ಇದು ಮುಳ್ಳಯ್ಯನವರು ತಪಸ್ಸಿಗೆ ಕುಳಿತ್ತಿದ್ದಾಗ ಸರ್ಪವೊಂದು ಬಂದಿತ್ತು ಎನ್ನಲಾದ ದಾರಿ. ಮುಳ್ಳಯ್ಯನವರು ಪೂರ್ವ ದಿಕ್ಕಿಗೆ ಸುಮಾರು 4–5 ಕಿ.ಮೀ. ದೂರದಲ್ಲಿರುವ ಕವಿ ಕಲ್ಲಂಡಿ ಪರ್ವತಶ್ರೇಣಿಗೆ ಈ ಸರ್ಪದಾರಿಯೇ ಸಂಪರ್ಕಸೇತು.

ಕವಿ ಕಲ್ಲಂಡಿ ಪರ್ವತ ಶ್ರೇಣಿ ಪ್ರಕೃತಿ ನಿರ್ಮಿತ ವಿಶೇಷ ಶ್ರೇಣಿ. ಚಾರಣ ಪ್ರಿಯರಿಗಂತೂ ಈ ತಾರಾ ಅಪ್ಯಾಯಮಾನ.. ಒಮ್ಮೆ ನೋಡಿದರೆ ಮತ್ತೊಮ್ಮೆ ನೋಡಬೇಕೆಂಬ ಹಂಬಲವನ್ನು ಇಮ್ಮಡಿಸುವ ಈ ನಿಸರ್ಗಧಾಮ ಸದಾ ತನ್ನ ಮಡಿಲಿಗೆ ಸಾವಿರಾರು ನಿಸರ್ಗಪ್ರಿಯರನ್ನು, ಪ್ರವಾಸಿಗರನ್ನು ಸೆಳೆಯುತ್ತಲೇ ಇದೆ.

ಇಲ್ಲಿಗೆ ಬಸ್, ಕಾರುಗಳಲ್ಲಿ ನೇರವಾಗಿ ಬರಬಹುದು. ಕಡೂರಿನವರೆಗೆ ರೈಲು ಮಾರ್ಗವಾಗಿ ಬಂದು ಅನಂತರ ಬಸ್‌ನಲ್ಲಿ ಬರಬಹುದು. ಶಿವಮೊಗ್ಗದಿಂದ ಕೂಡ ಕಡೂರು ಮಾರ್ಗವಾಗಿ ಚಿಕ್ಕಮಗಳೂರಿಗೆ ಬರಬಹುದಾಗಿದೆ. ಮಂಗಳೂರಿನಿಂದ 180 ಕಿ.ಮೀ.ಗಳ ಅಂತರವಿರುವ ಚಿಕ್ಕಮಗಳೂರಿಗೆ ರಸ್ತೆ ಮಾರ್ಗವಾಗಿ ಬರಬಹುದು.

**ಪ್ರವಾಸಿಗರಿಗಿರುವ ಅನಾನುಕೂಲಗಳು**

1. ಚಿಕ್ಕಮಗಳೂರಿನಿಂದ ಮುಳ್ಳಯ್ಯನಗಿರಿಗೆ ರಾಜ್ಯ ಸರ್ಕಾರದಿಂದ ಬಸ್‌ಸೌಲಭ್ಯವಿಲ್ಲ.
2. ಪ್ರವಾಸಿಗರಿಗೆ ಹೋಟೆಲ್, ವಸತಿಗೃಹಗಳಿಲ್ಲ.
3. ಶೌಚಾಲಯ ವ್ಯವಸ್ಥೆಯಿಲ್ಲ.
4. ಕಸದ ತೊಟ್ಟಿ (Dust Bin) ಗಳಿಲ್ಲ.
5. ಭದ್ರತಾ ಸಿಬ್ಬಂದಿ (Security Guards) ಗಳಿಲ್ಲ.

**ಈ ಪ್ರವಾಸಿ ತಾಣವನ್ನು ಅಭಿವೃದ್ಧಿಗೊಳಿಸಲು ಕೈಗೊಳ್ಳಬಹುದಾದ ಕ್ರಮಗಳು:**

ಪ್ರವಾಸೋದ್ಯಮ ಸೌಕರ್ಯಗಳಿಂದ ನಡೆಯುವ ಉದ್ದಿಮೆಯಾಗಿದೆ. ಸೌಕರ್ಯಗಳು ಇಲ್ಲದಿದ್ದಲ್ಲಿ ಪ್ರವಾಸೋದ್ಯಮ ನಡೆಯಲಾರದು. ಸೌಕರ್ಯಗಳು ಪ್ರವಾಸೋದ್ಯಮದ ಆಧಾರ ಸ್ಥಂಭವಾಗಿದೆ. ಪ್ರವಾಸೋದ್ಯಮವನ್ನು ಅಭಿವೃದ್ಧಿಪಡಿಸಿ ಒಂದು ಬಲಶಾಲಿ ಉದ್ದಿಮೆಯಾಗಿ ರೂಪಿಸಲು ಸೌಕರ್ಯಗಳನ್ನು ಹೆಚ್ಚಿಸಬೇಕಾಗಿದೆ.

1. ಮೂಲಸೌಕರ್ಯಗಳಾದ ಸಾರಿಗೆ, ವಸತಿ, ಆಹಾರವ್ಯವಸ್ಥೆ ತುಂಬಾ ಮುಖ್ಯ. ಮುಳ್ಳಯ್ಯನಗಿರಿಗೆ ಪ್ರವಾಸಿಗರು ಹೆಚ್ಚಿನ ಸಂಖ್ಯೆಯಲ್ಲಿ ಸ್ವಂತವಾಹನ ಅಥವಾ ಬಾಡಿಗೆವಾಹನಗಳಲ್ಲೇ ಬರುವವರು ಜಾಸ್ತಿ. ಇಲ್ಲಿಗೆ ಚಿಕ್ಕಮಗಳೂರಿನಿಂದ ಸರ್ಕಾರಿ ಅಥವಾ ಖಾಸಗಿ ಬಸ್‌ಸೌಲಭ್ಯಗಳ ಕೊರತೆಯಿದೆ. ಸಾವಿರಾರು ರೂಪಾಯಿ ಖರ್ಚುಮಾಡಿ ಬಾಡಿಗೆ ವಾಹನದಲ್ಲಿ ಬರಲು ಶಕ್ತರಿಲ್ಲದ ಸಾಮಾನ್ಯ ಜನರು ಇಂತಹ ಪ್ರವಾಸಿ ತಾಣಗಳಿಂದ ದೂರ ವಿದ್ದಾರೆ, ಹಾಗಾಗಿ ರಾಜ್ಯ ಸರ್ಕಾರ ಸಾಮಾನ್ಯ ವ್ಯಕ್ತಿಗೂ ಸಾಧ್ಯವಾಗುವಂತೆ ಬಸ್‌ಸೌಲಭ್ಯವನ್ನು ಕಲ್ಪಿಸಬೇಕು.
2. ಪ್ರವಾಸಿ ತಾಣದಲ್ಲಿ ಶೌಚಾಲಯಗಳ ವ್ಯವಸ್ಥೆಯಿಲ್ಲದ ಕಾರಣ ಪ್ರವಾಸಿಗರು ಮೂತ್ರವಿಸರ್ಜನೆ, ಮಲವಿಸರ್ಜನೆಯನ್ನು ಪ್ರವಾಸಿ ತಾಣದ ಅಕ್ಕಪಕ್ಕದಲ್ಲಿ ಮಾಡುತ್ತಾರೆ, ಹಾಗಾಗಿ ಶೌಚಾಲಯ ನಿರ್ಮಿಸುವ ಅವಶ್ಯಕತೆಯಿದೆ.
3. ಚಿಕ್ಕಮಗಳೂರಿನಿಂದ ಬರುವ ಪ್ರವಾಸಿಗರು ಇಲ್ಲಿ ಹೋಟೆಲ್ ವ್ಯವಸ್ಥೆಯಿಲ್ಲದ ಕಾರಣ ತಾವು ತಂದ ತಿಂಡಿ–ತಿನಿಸುಗಳನ್ನು ತಿಂದು ಪ್ಲಾಸ್ಟಿಕ್‌ಕವರ್‌ಗಳನ್ನು, ಪೇಪರ್‌ಗಳನ್ನು ನೀರಿನ ಬಾಟಲಿಗಳನ್ನು ಎಲ್ಲೆಂದರಲ್ಲಿ ಬಿಸಾಡಿ ಹೋಗುತ್ತಾರೆ, ಇದರಿಂದ ಪ್ರವಾಸಿ

ತಾಣದ ಸುತ್ತಮುತ್ತ ಕಸಕಡ್ಡಿಗಳು ಕಾಣಿಸುತ್ತವೆ. ಇದನ್ನು ತಪ್ಪಿಸಲು ಪ್ರವಾಸಿ ತಾಣದ ಸುತ್ತಮುತ್ತ ಕಸದ ಡಬ್ಬಿಗಳನ್ನು ಇಡಬೇಕು, ಹೋಟಲ್‌ಗಳನ್ನು ನಿರ್ಮಿಸಬೇಕಾಗುತ್ತದೆ.

4. ಕರ್ನಾಟಕದ ಅತ್ಯಂತ ಎತ್ತರದ ಶಿಖರ ಎಂಬ ಪ್ರಖ್ಯಾತಿಯಿರುವ ಸುಂದರ ಪ್ರವಾಸಿ ತಾಣವಾಗಿರುವುದರಿಂದ ಪ್ರವಾಸಿಗರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚು. ಚಿಕ್ಕಮಗಳೂರಿನಿಂದ ಮುಳ್ಳಯ್ಯನಗಿರಿಗೆ ಬರುವ ಪ್ರವಾಸಿಗರು ಅದೇ ಮಾರ್ಗದಲ್ಲಿ ಹೊನ್ನಮ್ಮನ ಆಳ ಎಂಬ ಜಲಪಾತವನ್ನು ಸೀತಾಳಯ್ಯನಗಿರಿಯನ್ನು ನೋಡಿಕೊಂಡು ಇಲ್ಲಿಗೆ ಬರುತ್ತಾರೆ. ಹಾಗೇ ಹೋಗುವಾಗ ಸೀತಾಳಯ್ಯನಗಿರಿಯಿಂದ ಮತ್ತೆ ಬಾಬಾಬುಡನ್‌ಗಿರಿ, ಮಾಣಕ್ಯಧಾರಾ ಜಲಪಾತಗಳನ್ನು ನೋಡಿಕೊಂಡು ಹೋಗುವುದುಂಟು ಹಾಗಾಗಿ ಸುತ್ತುಮುತ್ತ ಐದಾರು ಪ್ರಮುಖ ಪ್ರವಾಸಿ ತಾಣಗಳಿರುವುದರಿಂದ ಇಲ್ಲಿ ವಸತಿಗೃಹ(ಲಾಡ್ಜ್)ಗಳನ್ನು ನಿರ್ಮಿಸಿದರೆ ಇಲ್ಲಿನ ಪ್ರಕೃತಿಯ ಸವಿಯನ್ನು ಸೂರ್ಯೋದಯದಿಂದ ಸೂರ್ಯಾಸ್ತದವರೆಗೆ ಸವಿಯಲು ಅವಕಾಶಮಾಡಿದಂತಾಗುತ್ತದೆ, ಹಾಗೆಯೇ ಪ್ರವಾಸಿಗರ ಸಂಖ್ಯೆಯು ಹೆಚ್ಚುತ್ತದೆ.

5. ಈ ಪ್ರವಾಸಿ ತಾಣದ ಸಮೀಪ ಹೋಟೆಲ್, ವಸತಿಗೃಹಗಳ ಭದ್ರತಾ ಸಿಬ್ಬಂದಿಗಳ ನೇಮಕ, ಶೌಚಾಲಯ ನಿರ್ಮಾಣ, ಪಾರ್ಕಿಂಗ್ ಸೌಲಭ್ಯ ಹಾಗೂ ಪ್ರವೇಶ ದರನಿಗದಿಪಡಿಸಿದರೆ ಹಲವಾರು ನಿರುದ್ಯೋಗಿಗಳಿಗೆ ಕೆಲಸ ಸಿಗುತ್ತದೆ. ಪ್ರವಾಸಿಗರಿಗೆ ಅನುಕೂಲ ವಾತಾವರಣ ನಿರ್ಮಾಣವಾಗುತ್ತದೆ, ಹಾಗೆಯೇ ಸರ್ಕಾರಕ್ಕೂ ಆದಾಯ ಸಿಗುತ್ತದೆ, ಎಂಬುದು ನನ್ನ ಸಂಶೋಧನೆಯಲ್ಲಿ ಕಂಡುಕೊಂಡ ಅಭಿಪ್ರಾಯವಾಗಿದೆ.

## ಮುತ್ತೋಡಿ ಅರಣ್ಯಧಾಮ

ಮಾನವನ ವಿಕಾಸ ಪ್ರಾರಂಭವಾದದ್ದೆ ಕಾಡುಕಣಿವೆಗಳು ಹಾಗೂ ನದಿ ಬಯಲುಗಳಲ್ಲಿ. ಮಾನವನ ಪ್ರಗತಿ ಆದಂತ್ತೆಲ್ಲ ಅವನು ವಾಸಿಸುತ್ತಿದ್ದ ಹಸಿರು ಪರಿಸರ ಮಾಯಾವಾಗುತ್ತ ಕಾನನದಲ್ಲಿ ವಾಸವಾಗಿದ್ದ ಸಾವಿರಾರು ಜಾತಿಯ ಪ್ರಾಣಿ ಪಕ್ಷಿಗಳು, ಅಲ್ಲಿ ಬೆಳೆದ ಬೆಲೆ ಬಾಳುವ ಮರಗಳು, ಮಾನವನ ಇಂಗದ ದಾಹಕ್ಕೆ ಬಲಿಯಾಗಿ ಇಂದು ಜಾಗತಿಕ ಮಟ್ಟದಲ್ಲಿ ಊರ್ಧ್ವ ಮುಖವಾಗುತ್ತಿರುವ ಉಷ್ಣಾಂಶದಿಂದ ಪ್ರಾಕೃತಿಕ ಅಸಮತೋಲನವಾಗಿ ಈ ಭೂಮಿಯ ಮೇಲೆ ಮುಂದಿನ ಬದುಕು ಅಸಹನೀಯವಾಗಲಿರುವ ಅಂಶ ಎಚ್ಚರಿಕೆಯ ಗಂಟೆಯನ್ನು ಭಾರಿಸಲು ಪ್ರಾರಂಭಿಸಿದೆ.

ಪ್ರಗತಿಯ ಹೆಸರಿನಲ್ಲಿ ಪ್ರಕೃತಿದೇವಿಯ ಹಸಿರು ಕವಚವನ್ನೇ ಕತ್ತರಿಸಿ ಬೆತ್ತಲುಗೊಳಿಸುವುದನ್ನು ಹಲವಾರು ಪ್ರಜ್ಞಾವಂತರು, ಪರಿಸರ ವಾದಿಗಳು, ಪ್ರಕೃತಿ ಪ್ರೇಮಿಗಳು, ತಡೆಯುವ ಪ್ರಯತ್ನ ಮಾಡುತ್ತಿರುವುದು ಇಂದು ಕಂಡುಬರುತ್ತಿದೆ. ಹಸಿರಿನಿಂದಲೇ ನಮ್ಮ ಉಸಿರು ಎಂದು ಮನಗಂಡು ಪ್ರತಿಯೊಬ್ಬರು ಇಂದು ಹಸಿರಿನ ಬನಸಿರಿಯನ್ನು ಉಳಿಸುವ ಹಾಗೂ ಬೆಳೆಸುವ ಪ್ರಯತ್ನವನ್ನು ತೀವ್ರಗತಿಯಲ್ಲಿ ಮಾಡಬೇಕಾಗಿದೆ. ಹಾಗೆಂದ ಮಾತ್ರಕ್ಕೆ ಹಸಿರೇ ಇಲ್ಲ ಎಂದಲ್ಲ. ಇದರ ಪ್ರಮಾಣ ಕಡಿಮೆ ಆಗುವುದನ್ನು ತಡೆಗಟ್ಟಬೇಕಾಗಿದೆ ಹಾಗೂ ಅಳಿದುಳಿದ ಸಸ್ಯ ಪ್ರಬೇಧಗಳು ಹಾಗೂ ಪ್ರಾಣಿ ಪ್ರಭೇದಗಳನ್ನು ಉಳಿಸಿ ಪೋಷಣೆ ಮುಂದಿನ ಪೀಳಿಗೆಯ ಋಣ ತೀರಿಸಿ ಹೋಗಬೇಕಾಗುತ್ತದೆ. ಇಲ್ಲದೆ ಹೋದ ಪಕ್ಷದಲ್ಲಿ ನಮ್ಮ ಹೊಣಗೇಡಿತನದ ಜವಾಬ್ದಾರಿಯನ್ನು ನಾವೇ ಹೊರಬೇಕಾಗುತ್ತದೆ.

ಕರ್ನಾಟಕದಲ್ಲಿ ಹಲವಾರು ಕಡೆ ಅಲ್ಲಲ್ಲಿ ಕಾಡುಗಳು ಉಳಿದುಕೊಂಡು ಬಂದಿವೆ. ಶಿವಮೊಗ್ಗ, ಚಿಕ್ಕಮಗಳೂರು, ಕೊಡಗು ಜಿಲ್ಲೆಗಳಲ್ಲಿ ತನ್ನ ಚಾಪನ್ನು ಮೂಡಿಸಿರುವ ಪಶ್ಚಿಮ ಘಟ್ಟಗಳ ಶ್ರೇಣಿ ಇಂದಿಗೂ ಹಲವಾರು ಸಸ್ಯ ಪ್ರಭೇದಗಳ ವನ್ಯಜೀವಿಗಳ ತಾಣವಾಗಿ ಪರಿಣಮಿಸಿದೆ. ಈ ಕಾರಣದಿಂದಲೆ ಪಶ್ಚಿಮ ಘಟ್ಟಗಳಲ್ಲಿ ಅತಿ ಪ್ರಮುಖವಾದ ಚಿಕ್ಕಮಗಳೂರು ಜಿಲ್ಲೆಯ ಭದ್ರಾ ಅಭಯಾರಣ್ಯವನ್ನು 4 ವಿಭಾಗಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ, ಮುತ್ತೋಡಿ, ಲಕ್ಕವಳ್ಳಿ, ತೆರಿಗೆ ಬಯಲು, ಹೆಬ್ಬಿ ರೇಂಜ್.

ಪರಿಸರ ಪ್ರೇಮಿಗಳಿಗೆ, ಮಕ್ಕಳಿಗೆ, ಆಸಕ್ತರಿಗೆ ಈ ಅರಣ್ಯ ಪ್ರದೇಶವನ್ನು ಅದರಲ್ಲೂ ವಿಶೇಷವಾಗಿ ಮುತ್ತೋಡಿ ಹಾಗೂ ಲಕ್ವಳ್ಳಿ ಅರಣ್ಯಧಾಮಗಳನ್ನು ವೀಕ್ಷಿಸುವ ಅವಕಾಶವನ್ನು ಕಲ್ಪಿಸಲಾಗಿದೆ.

ಚಿಕ್ಕಮಗಳೂರು ಜಿಲ್ಲೆಯ ಅದೇ ತಾಲ್ಲೂಕಿನಲ್ಲಿರುವ ಒಂದು ಅರಣ್ಯಧಾಮ(ಚಿತ್ರ ಸಂಖ್ಯೆ10). ಚಿಕ್ಕಮಗಳೂರಿನಿಂದ ನೈಋತ್ಯಕ್ಕೆ ಸು. 48 ಕಿ.ಮೀ. ದೂರದಲ್ಲಿರುವ ಭದ್ರಾ ಅಭಯಾರಣ್ಯಕ್ಕೆ ಸೇರಿದೆ.[7] ಶಿವಮೊಗ್ಗ ಜಿಲ್ಲೆಯ ಲಕ್ಕವಳ್ಳಿಯಿಂದ 33 ಕಿ.ಮೀ. ದೂರದಲ್ಲಿದೆ.

ಪಶ್ಚಿಮಘಟ್ಟ ಶ್ರೇಣಿಗಳ ತಪ್ಪಲಿನಲ್ಲಿ ತಟ್ಟೆಯಾಕಾರದಲ್ಲಿ ಹರಡಿಕೊಂಡಿರುವ ಈ ಅಭಯಾರಣ್ಯದ ಸುತ್ತ ಮುಳ್ಳಯ್ಯನಗಿರಿ, ಬಾಬಾಬುಡನ್‌ಗಿರಿ, ಹೆಬ್ಬೆಗಿರಿ, ಗಂಗೇಗಿರಿ ಪರ್ವತ ಸಾಲುಗಳು ಇವೆ. ಭದ್ರಾನದಿಯ ಪಾತ್ರದಲ್ಲೇ ಬರುವ ಮುತ್ತೋಡಿಯಲ್ಲಿ ತಡವೆಹಳ್ಳ, ಸೋಮವಾಹಿನಿ, ವಾಟೆಹಳ್ಳ, ಹೆಬ್ಬೆಹಳ್ಳಗಳು ಹರಿಯುತ್ತವೆ. ಈ ಅರಣ್ಯ ಭಾಗ 1998 ನವಂಬರ್

19 ರಂದು ಹುಲಿ ಸಂರಕ್ಷಣಾ ಯೋಜನೆಗೆ ಸೇರ್ಪಡೆಗೊಂಡಿತು. ಇಲ್ಲಿ ಹುಲಿ, ಚಿರತೆ, ಕಾಡುಬೆಕ್ಕು, ಕರಡಿ, ಕಾಟಿ ಸೀಳುನಾಯಿ, ಸಿಂಗಳೀಕ, ನರಿ, ಅಪಾರ ಸಂಖ್ಯೆಯ ಜಿಂಕೆ, ಸಾಂಬಾರ್, ಕಾಡುಹಂದಿ, ಕಾಡುಕುರಿ, ಕಾಡುಪಾಪ, ಹಾರುವ ಓತಿ, ಹಾರುವ ಕೆಂಜಳಿಲು, ಚಿಪ್ಪಿನ ಆಮೆ, ಮುಳ್ಳಹಂದಿ, ಸಾಮಾನ್ಯ ನೀರುನಾಯಿ ಮೊದಲಾದ ಪ್ರಾಣಿವರ್ಗ ಕಂಡುಬರುತ್ತದೆ. ಹೊನ್ನೆ, ಮತ್ತಿ, ನಂದಿ, ಬೀಟೆ, ತೇಗ, ತಾರೆ, ಅಳಲೆ, ನೆಲ್ಲಿ ಮೊದಲಾದ ಮರಗಳಿಂದ ಸಮೃದ್ಧವಾಗಿದೆ. ಬೃಹತ್ ಗಾತ್ರದ ಸು. 5.2 ಮೀ ಸುತ್ತಳತೆಯ ಸು.300 ವರ್ಷಗಳಷ್ಟು ಹಳೆಯದಾದ ತೇಗದ ಮರ ಇಲ್ಲಿನ ಪ್ರಮುಖ ಆಕರ್ಷಣೆ(ಚಿತ್ರಸಂಖ್ಯೆ11).

ಇಲ್ಲಿನ ಕಣಿವೆಗಳಲ್ಲಿರುವ ಮರಗಳು ಎತ್ತರವಾಗಿ ಬೆಳೆದು ಸೂರ್ಯನಿಗೆ ತೆರೆದುಕೊಂಡಿರುವ ದೃಶ್ಯ ರುದ್ರರಮಣೀಯವಾಗಿ ಕಾಣುತ್ತದೆ. ಈ ಸ್ಥಳ ಅಂತರರಾಷ್ಟ್ರೀಯ ಖ್ಯಾತಿಯ ಪಕ್ಷಿ ತಜ್ಞ ಸಲೀಂ ಅಲಿ ಅವರಿಂದ 'ಪಕ್ಷಿಗಳ ಸ್ವರ್ಗ' ಎಂಬ ಪ್ರಶಂಸೆಗೆ ಪಾತ್ರವಾಗಿದೆ. ಇಲ್ಲಿ 250ಕ್ಕೂ ಹೆಚ್ಚಿನ ಪಕ್ಷಿಪ್ರಭೇದಗಳನ್ನು ವೀಕ್ಷಿಸಬಹುದಾಗಿದೆ.

ಚಿಕ್ಕಮಗಳೂರಿನಿಂದ ಮಲ್ಲಂದೂರು ಮಾರ್ಗವಾಗಿ ಹೋದರೆ ಮುತ್ತೋಡಿ ಅಭಯಾರಣ್ಯಕ್ಕೆ ಕೇವಲ 32 ಕಿ.ಮೀ.ಗಳು ಚಿಕ್ಕಮಗಳೂರಿನಿಂದ ಪ್ರಾರಂಭವಾಗುವ ಕಾಫಿ ತೋಟಗಳು, ಎತ್ತರದ ಬೆಟ್ಟಗುಡ್ಡಗಳ ಸಾಲುಗಳು, ಹಸುರಿನ ನಡುವೆ ಅಂಕುಡೊಂಕಾದ ರಸ್ತೆಯಲ್ಲಿ ಸಾಗಿದರೆ ಅಲ್ಲಲ್ಲಿ ಸಣ್ಣ ಸಣ್ಣ ಹಳ್ಳಿಗಳು ಇಣುಕು ಹಾಕುತ್ತಾ ಮಾನವನ ನೆಲೆಯನ್ನು ಪ್ರತಿಪಾದಿಸುತ್ತವೆ. ಹಾಗೆಯೇ ಮುಂದೆ ಸಾಗಿದರೆ ಮಲ್ಲಂದೂರು ಎಂಬ ಸ್ವಲ್ಪ ದೊಡ್ಡದಾದ ಗ್ರಾಮವೊಂದು ಸಿಗುತ್ತದೆ. ಅದನ್ನು ದಾಟಿ ಮುಂದೆ ಸುಮಾರು 14 ಕಿ.ಮೀ. ಗಳಷ್ಟು ಕ್ರಮಿಸಬೇಕು. ಕಾಫಿ ತೋಟಗಳ ದಟ್ಟ ಮರಗಳ ನಡುವೆ ನುಸುಳಿ ಹೋದರೆ ಪ್ರವಾಸಿಗರ ಕಿವಿಗೆ ನಿಧಾನವಾಗಿ ಕೇಳಿಬರುವುದು ಸೋಮವಾಹಿನಿ ನದಿಯ ಜುಳು ಜುಳು ಮಂಜುಳ ನಿನಾದ. ಅತ್ತಿತ್ತ ತಿರುಗುವುದರೊಳಗೆ ಮುತ್ತೋಡಿಯ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿಯ ಮುಂಭಾಗಕ್ಕೆ ತಲುಪುವುದರಿಂದ ಆನೆ, ಹುಲಿ, ಚಿರತೆ, ಕೆಂಜಳಿಲು, ಬಾರ್ಕಿಂಗ್ ಡೀರ್ ಮುಂತಾದ ಪ್ರಾಣಿಗಳಿರುವ ಫಲಕಗಳು ಸೆಳೆಯುತ್ತವೆ.

**ಪ್ರವಾಸಿಗರಿಗಿರುವ ಅನುಕೂಲಗಳು**

ವೀಕ್ಷಣೆಗಾಗಿ ಬರುವ ಪ್ರವಾಸಿಗರಿಗಾಗಿ ಇಲ್ಲಿ ತಂಗಲು ಅನುಕೂಲವನ್ನು ಮಾಡಲಾಗಿದೆ. ಸುಮಾರು 8 ಹಾಸಿಗೆಗಳುಳ್ಳ ಡಾರ್ಮೆಂಟರಿ, 2 ಫ್ಯಾಮಿಲಿ ಕಾಟೇಜುಗಳು ಹಾಗೂ ಸಾಹಸಿಗರಿಗೆ ಮತ್ತು ಹೊರ ಆವರಣದಲ್ಲಿ ಪ್ರಕೃತಿಯ ಮಡಿಲಿನಲ್ಲಿ ಮಲಗಿ ಆನಂದಿಸಲು ಬಯಸುವ ಆಸಕ್ತರಿಗೆ ಡೇರಿಗಳ (ಟೆಂಟ್‌ಗಳ) ವ್ಯವಸ್ಥೆಯನ್ನು ಮಾಡಲಾಗಿದೆ. ಇದು ಎಂತಹ ಸುಂದರ ತಾಣದಲ್ಲಿದೆ ಎಂದರೆ ಪಕ್ಕದಲ್ಲಿ ಕೆಲವೇ ಕೆಲವು ಮೆಟ್ಟಿಲುಗಳನ್ನು ಇಳಿದರೆ ಭೋರ್ಗರೆವ ಗಾಳಿಯ ಜೊತೆ ಮೇಳೈಸಿದಂತೆ ತನ್ನ ಜುಳು ಜುಳು ಇನಿದನಿಯನ್ನು ಸೇರಿಸಿರುವ ಸೋಮವಾಹಿನಿ ತಣ್ಣಗೆ ಹರಿಯುತ್ತಿದ್ದಾಳೆ. ಇಚ್ಛೆಯುಳ್ಳವರು ಅದರಲ್ಲಿ ಮಿಂದು ಆನಂದಿಸಬಹುದು.

ಇಲ್ಲಿಂದ ತುಸು ದೂರದಲ್ಲಿರುವ ಸೀಗೇಖಾನ್ ಗುಡ್ಡದಲ್ಲಿ ಸುಂದರವಾದ ಗೆಸ್ಟ್‌ಹೌಸ್ ಕೂಡ ಇದೆ. ಇಲ್ಲಿ ಒಂದು ವೀಕ್ಷಣ ಗೋಪುರವು ಇದೆ. ಅಲ್ಲಿ ನಿಂತು ಸುತ್ತಲು ಕಣ್ಣಾಡಿಸಿದರೆ ಪಶ್ಚಿಮ ಘಟ್ಟಗಳ ಮೈಸಿರಿಯನ್ನು, ಸಮೃದ್ಧವಾದ ವನಸಿರಿಯನ್ನು ನೋಡಿ ಪುಳಕಿತರಾಗಬಹುದು. ಸ್ವಂತ ವಾಹನಗಳಲ್ಲಿ ಹೋದರೆ ಇನ್ನು ಚೆನ್ನ. ಇಲ್ಲವಾದಲ್ಲಿ ಟ್ಯಾಕ್ಸಿ, ಬಸ್‌ಗಳ ಸೌಲಭ್ಯವಿದೆ.

ಕೆಮ್ಮಣ್ಣುಗುಂಡಿ ಮಾರ್ಗವಾಗಿ ಕೂಡ ಮುತ್ತೋಡಿಗೆ ಬರಬಹುದಾಗಿದೆ. ಬೆಳಿಗ್ಗೆ 6 ರಿಂದ 9ರ ವರೆಗೆ ಹಾಗೂ ಸಂಜೆ 4 ರಿಂದ 6ರವರೆಗೆ ಪ್ರಾಣಿಗಳನ್ನು ವೀಕ್ಷಿಸಲು ಗೊತ್ತುಪಡಿಸಿದ ಹಾದಿಯಲ್ಲಿ ಕಾಡಿನ ಒಳಭಾಗಕ್ಕೆ ಪ್ರವಾಸಿಗರನ್ನು ಅರಣ್ಯ ಇಲಾಖೆಯ ವಾಹನಗಳಲ್ಲಿ ಕರೆದೊಯ್ಯಲಾಗುತ್ತದೆ. ಈ ಸಫಾರಿಗೆ ಹೋಗಲು  ಒಬ್ಬರಿಗೆ 450 ರೂಗಳು ನಿಗದಿರಡಿಸಿರುತ್ತಾರೆ, ಈ ವೀಕ್ಷಣೆಯ ಸಂದರ್ಭದಲ್ಲಿ ಪ್ರಾಣಿಗಳಿಗಾಗಲೀ, ವೀಕ್ಷಕರಿಗಾಗಲೀ ಯಾವ ತೊಂದರೆಯು ಉಂಟಾಗದಂತೆ ಎಚ್ಚರವನ್ನು ವಹಿಸಲಾಗುತ್ತದೆ. ಮುಖ್ಯವಾಗಿ ಇಲ್ಲಿ ಬರುವ ಪ್ರವಾಸಿಗರಿಗೆ ಒಂದೇ ಒಂದು ಭಿನ್ನಹವೆಂದರೆ ನಿಶ್ಯಬ್ಧವಾಗಿ ಪ್ರಾಣಿಗಳನ್ನು ವೀಕ್ಷಿಸಬೇಕು.

ವೀಕ್ಷಣಾ ವಾಹನ ಕಾಡಿನೊಳಕ್ಕೆ ಪ್ರವೇಶಿಸುತ್ತಿದ್ದಂತೆ ಸಾರಂಗ(ಚಿತ್ರಸಂಖ್ಯೆ12–13) ಆನೆ, ಹುಲಿ, ಜಿಂಕೆ, ಕಡವೆ, ಕಾಡೆಮ್ಮೆ, ತೋಳ, ನರಿ, ಬರ್ಕಿನ ಬೆಕ್ಕು, ಬಾರ್ಕಿಂಗ್‌ಡೀರ್, ಸಾಂಬಾರ್, ಕಾಡುಕೋಳಿ, ನವಿಲು, ಆಮೆ, ಮೊಲ, ಮುಳ್ಳುಹಂದಿ, ಹಾರುವ ಬೆಕ್ಕು, ಕೆಂಜಳಿಲು, ಕಾಡುಕುರಿ, ಪುನಗಿನ ಬೆಕ್ಕು, ಗೂಬೆ, ಇಲಿ, ಪಾರಿವಾಳ, ಕಾಜಾಣ, ಬಾವಲಿ, ಮಂಗ, ಉಡ ಹೀಗೆ ಯಾವುದಾದರೂ ಸರಿ ಪ್ರಾಣಿ ಪಕ್ಷಿಗಳು ಕಣ್ಣಿಗೆ ಬೀಳುತ್ತ. ಪ್ರವಾಸಿಗರನ್ನು ಆನಂದ ತನ್ಮಯರನ್ನಾಗಿ ಮಾಡಿದರೆ ಇನ್ನೊಂದು ಕಡೆ ಕತ್ತಲುಗಟ್ಟುವ ನಾನಾರೀತಿಯ ವನರಾಶಿ. ಮತ್ತಿ,

ಮುತ್ತುಗ, ಮಣಿವಾರ, ಬಿದಿರು, ಬೋರುಗ, ಅರಳಿ, ಆಲ, ಗೋಣಿ ಬೇಲ, ಬೋರೆ, ಕಾರೆ, ನೀಲಿ, ತೇಗ, ಬೀಟೆ, ಹೊನ್ನೆ, ನಂದಿ, ಹಾಲುಹೊನ್ನೆ, ಸಾಗುವಾನಿ, ಶ್ರೀಗಂಧ, ಜಗಳಗಂಟಿ, ಬೆಂಡೆ, ಕಕ್ಕೆ, ಎಕ್ಕ, ಗಿಡದಪೊದೆಗಳು ಮರಗಳ ಬುಡದಿಂದಲೇ ತುದಿಯವರೆಗೆ ಬೆಳೆದ ನಾನಾ ಜಾತಿಯ ಬಳ್ಳಿಗಳು, ಆನೆ ಹುಲ್ಲು ಹಾಗೂ ಹೇರಳವಾಗಿ ಬೆಳೆದಿರುವ ಅಂಚಿಹುಲ್ಲುಗಳು ಹೀಗೆ ಹತ್ತು ಹಲವು ಜಾತಿಯ ಹಸಿರು ವನದೇವಿಯನ್ನು ಮೈದುಂಬಿ, ಸಿಂಗರಿಸಿ ಕಾಡಿನ ಘನತೆಯನ್ನು ಹೆಚ್ಚಿಸಿರುವುದು ಸೋಜಿಗವೆನಿಸುತ್ತದೆ.

ಇಲ್ಲಿ ಮತ್ತೊಂದು ವಿಶೇಷತೆ ಎಂದರೆ 300 ವಸಂತಗಳನ್ನು ಕಂಡಿರುವ ಭಾರಿಗಾತ್ರದ, ಬಾರಿ ಎತ್ತರದ ತೇಗದ ಮರ. ಇಲ್ಲಿ ಇದನ್ನು ಸಂರಕ್ಷಿಸಲಾಗಿದೆ. ಇದನ್ನು ನೋಡಲೆಂದೇ ದೇಶ ವಿದೇಶಗಳಿಂದ ಕೂಡ ಪ್ರವಾಸಿಗರು ಆಗಾಗ ಬರುವುದುಂಟು.

**ಅನಾನುಕೂಲಗಳು**

1. ಬಸ್ಸು ಸೌಲಭ್ಯ ಕಡಿಮೆ ಇದೆ.
2. ಬೆಳಿಗ್ಗೆ 9 ರಿಂದ ಸಾಯಂಕಾಲ 4ರ ಒಳಗೆ ಬರುವ ಪ್ರವಾಸಿಗರಿಗೆ ಸಫಾರಿ ವ್ಯವಸ್ಥೆ ಇಲ್ಲ. ಹಾಗಾಗಿ ಶೈಕ್ಷಣಿಕ ಪ್ರವಾಸ ಮಾಡುವವರು ಇಲ್ಲಿಗೆ ಬರುವುದು ಕಡಿಮೆ.

## ರತ್ನಗಿರಿ ಬೋರೆ

ಮಲೆನಾಡಿನ ಮದುಮಗಳು ಚಿಕ್ಕಮಗಳೂರು ಪ್ರವಾಸಿಗರ ಸ್ವರ್ಗ. ಕಾಡಿನೊಳಗೊಂದು ನಾಡೊ, ನಾಡಿನೊಳಗೊಂದು ಕಾಡೊ ಎಂಬ ಸಂಶಯ ಈ ಜಿಲ್ಲೆಯನ್ನು ಸುತ್ತಿ ನೋಡಿ ಬಂದವರಿಗೆ ಬಾರದೇ ಇರದು. ಈ ಜಿಲ್ಲೆಯ ಉದ್ದಗಲಕ್ಕೂ ದಟ್ಟವಾಗಿ ಕಂಡುಬರುವ ವನರಾಶಿ, ಮುಗಿಲು ಮುಟ್ಟುವ ಸಾಲು ಸಾಲು ಮೊಗ್ಗಲು ಮೊಗ್ಗಲಾಗಿ ನೂರಾರು ಕಿ.ಮೀ.ನಷ್ಟು ಚಾಚಿಕೊಂಡಿರುವ ಗಿರಿಪಂಕ್ತಿಗಳು, ಅಲ್ಲಲ್ಲಿ ಕಾಡಿನ ಸೆರಗಿನ ಮಳೆಯಲ್ಲಿ ತಲೆ ಮರಸಿಕೊಂಡಿರುವ ಸಣ್ಣ ಸಣ್ಣ ಹಳ್ಳಿಗಳು, ಕಾಫಿ, ಏಲಕ್ಕಿ, ಕರಿಮೆಣಸು ಹಾಗೂ ಸಾವಿರಾರು ಜಾತಿಯ ಗಿಡಮರಗಳಿಂದ ಸುತ್ತುವರೆದ ಈ ಪಟ್ಟಣ ವಾಣಿಜ್ಯ ನಗರಿಯೂ ಹೌದು.

ಒಂದು ಕಡೆ ವಿಶಾಲವಾದ ದೊಡ್ಡಕೆರೆ, ಮತ್ತೊಂದು ಕಡೆ ಕಡಿದಾದ ಪರ್ವತ ಶ್ರೇಣಿಯ ಗೋಡೆ, ಮತ್ತೊಂದೆಡೆ ಹಸಿರು ಚ್ಛಾದಿತ ಕಾಫಿ ತೋಟಗಳಿಂದ, ಗಗನ ಚುಂಬಿ ಮರಗಳಿಂದ

ಆವೃತವಾದ ವನಸಿರಿ. ಪಂಚತಾರಾ ಹೋಟೆಲ್‌ಗಳು, ವಸತಿ ಗೃಹಗಳು, ಆಡಳಿತ ಕಛೇರಿಗಳು ಇವೆ.

ಇದರಲ್ಲಿ ಮಹತ್ತರವಾದ ವಿಶೇಷವೆಂದರೆ ಸ್ವಾತಂತ್ರ್ಯ ಚಳುವಳಿಯಲ್ಲಿ ಮಹಾತ್ಮಗಾಂಧೀಜಿಯವರು ಚಿಕ್ಕಮಗಳೂರಿಗೆ ಭೇಟಿ ನೀಡಿ ಇಲ್ಲಿಯ ಜನರನ್ನು ಉದ್ದೇಶಿಸಿ ಮಾತನಾಡಿದ ಸಂದರ್ಭವನ್ನು ಇಂದಿಗೂ ನೆನಪಿಗೆ ತರುವ ಜಿಲ್ಲಾಡಳಿತದ ಮುಖ್ಯ ಕಛೇರಿ ಸಂಕೀರ್ಣ ಕಟ್ಟಡ ಇರುವುದು ಇದೇ ಚಿಕ್ಕಮಗಳೂರಿನಲ್ಲಿ. ನಾಲ್ಕು ದಿಕ್ಕುಗಳಿಂದಲೂ ಆವೃತವಾದ ಈ ಕಟ್ಟಡದ ನಡುವೆ ನಿರ್ಮಿಸಲಾಗಿದ್ದ ವಿಶಾಲವಾದ ವೇದಿಕೆಯ ಮೇಲೆ ಗಾಂಧೀಜಿಯವರು ಕುಳಿತು ಅಂದು ಭಾಷಣ ಮಾಡಿದ್ದು ಈ ಆವರಣವನ್ನು ಇಂದಿಗೂ ಉಳಿಸಿಕೊಂಡು ಬರಲಾಗಿದೆ.[8]

ಚಿಕ್ಕಮಗಳೂರಿನ ಬಸ್ ನಿಲ್ದಾಣದಿಂದ ಕೇವಲ 2 ಕಿ.ಮೀ ನಷ್ಟು ಕ್ರಮಿಸಿದರೆ ತರೀಕೆರೆಗೆ ಅಥವಾ ಬಾಬಾಬುಡನ್‌ಗಿರಿಗೆ ಹೋಗುವ ದಾರಿಯಲ್ಲಿ ಎದುರಿಗೆ ರತ್ನಗಿರಿ ಬೋರೆ ಅಥವಾ ಗಾಂಧಿ ಉದ್ಯಾನವನ ನಾಮಫಲಕ ನೋಡುತ್ತೇವೆ(ಚಿತ್ರಸಂಖ್ಯೆ14). ಅದರ ಬಲಕ್ಕೆ ತಿರುಗಿ ಸುಮಾರು ಅರ್ಧ ಫರ್ಲಾಂಗ್‌ನಷ್ಟು ದೂರವನ್ನು ಕ್ರಮಿಸಿದರೆ ತನ್ನ ಮೈತುಂಬಾ ಬಳ್ಳಿಯಿಂದಲೂ ಅರಳಿದ ಹೂಗಳಿಂದಲೂ ಸಾಲಂಕೃತವಾದ ಸುಂದರವಾದ ಕಮಾನು ಪ್ರವಾಸಿಗರನ್ನು ದೂರದಿಂದಲೇ ಕೈಬೀಸಿ ಕರೆಯುತ್ತದೆ. ಇಕ್ಕೆಲಗಳಲ್ಲೂ ಸುಂದರವಾದ ನಾನಾ ಜಾತಿಯ, ನಾನಾ ಪುಷ್ಪಗಳು ಅಲಂಕರಿಸಲ್ಪಟ್ಟು ಗಿಡಮರಗಳು ಪ್ರವಾಸಿಗರನ್ನು ಕಂಡು ಮುಗುಳ್ನಗುವಂತೆ ಭಾಸವಾಗುತ್ತದೆ. ಒಳಗೆ ಹೆಜ್ಜೆ ಇಡುತ್ತಿದ್ದಂತೆಯೇ ಎದುರಿಗೆ ಪುಟಾಣಿ ರೈಲು ಶಿಳ್ಳೆ ಹೊಡೆಯುತ್ತಾ ಓಡಾಡುತ್ತದೆ.

ನಾಲ್ಕಾರು ಹೆಜ್ಜೆಗಳಷ್ಟು ಮುಂದೆ ಹೋದಂತೆ ಆಕಾಶದ ಎತ್ತರಕ್ಕೆ ಚಿಮ್ಮುವ ಕಾರಂಜಿ ಪ್ರವಾಸಿಗರ ಮನಸ್ಸಿಗೆ ಮುದ ನೀಡಿ ರಂಜಿಸುತ್ತದೆ. ಇನ್ನು ಸ್ವಲ್ಪ ಎತ್ತರಕ್ಕೆ ಚಿಮ್ಮುವ ಕಾರಂಜಿ ಪ್ರವಾಸಿಗರ ಮನಸ್ಸಿಗೆ ಮುದ ನೀಡಿ ರಂಜಿಸುತ್ತದೆ. ಇನ್ನು ಸ್ವಲ್ಪ ಎತ್ತರಕ್ಕೆ ತಲೆಯಾನಿಸಿ ನೋಡಿದರೆ ಸುಂದರವಾದ ಪುಟಾಣಿ ಜಲಪಾತ. ಹಲವಾರು ಜಾತಿಯ ಬಿದಿರು ಪೊದರೆಗಳು, ಮಾವು, ಬೇವು, ಸಂಪಿಗೆ, ಹೊಂಗೆ, ಆಲ, ಬೇಲ, ನೆಲ್ಲಿಕಾಯಿ ಹೀಗೆ ಜಾತಿ ವಿಜಾತಿಯ ಮರಗಳಿಂದಲೂ ನಾನಾ ಬಗೆಯ ಅಲಂಕಾರಿಕ ಸಸ್ಯವರ್ಗದಿಂದಲೂ ಕೂಡಿದ ಸಸ್ಯರಾಶಿಯ ನಡುವೆ ನುಗ್ಗಿ ಮುಂದೆ ಸಾಗಿದರೆ ಮುಂದೆ ಬೃಹತ್ತಾದ ಹುತ್ತ ಕಾಣಿಸುತ್ತದೆ. ಕುತೂಹಲ

ತಣಿಸಲು ಒಳಗೆ ಪ್ರವೇಶಿಸಿದರೆ ಹಲವಾರು ತಿರುವುಗಳುಳ್ಳ ಹುತ್ತದ ಒಡಲಾಳದಲ್ಲಿ ಮತ್ತೊಂದು ಬಿಲದಿಂದ ಹೊರಬರಬಹುದು.

ಇನ್ನು ಮುಂದೆ ಕಾಣುವ ಗ್ಲೋಬಾಕೃತಿ, ಮಕ್ಕಳ ಆಟದ ಮೈದಾನ ಎಳನೀರನ್ನು ಕೊಚ್ಚಿಕುಡಿಯಲು ಅನುವು ಮಾಡಿಕೊಟ್ಟಂತೆ ಇಡಲ್ಪಟ್ಟಿರುವ ನೀರಿನ ಟ್ಯಾಂಕಿಗೆ ಅಳವಡಿಸಿರುವ ಮಕ್ಕಳ ಖುಷಿಗೆ ಪಾರವೇ ಇಲ್ಲ. ಮಕ್ಕಳ ಆಟದ ಮೈದಾನದಲ್ಲಿ ಎಲ್ಲ ಸವಲತ್ತುಗಳಿದ್ದು ತನಕ ಪರಿಕರಗಳಿವೆ. ಇಲ್ಲಿ ಸುಂದರವಾದ ಮಕ್ಕಳ ಗ್ರಂಥಾಲಯವು ಇದೆ. ನೋಡ ನೋಡುತ್ತ ಪುಟ್ಟ ಕಾಡಿನ ನಡುವೆ ಗುಡ್ಡದ ತುದಿಯನ್ನು ತಲುಪಿದರೆ ಮಹಾಕಾಳಿ ಮಾತೇ ದೇವಾಲಯ. ಅಲ್ಲಿ ನಮಸ್ಕರಿಸಿ ಮುಂದೆ ಸಾಗಿದರೆ ಥಿಯೇಟರ್ ಅಂದರೆ ಗ್ರೀಸ್ ರಂಗಭೂಮಿಯನ್ನು ನೆನಪಿಗೆ ತರುವ ಬಯಲು ರಂಗಮಂದಿರ. ಕಾಣುತ್ತದೆ.

ಇಳಿಜಾರಿನಲ್ಲಿ ಮೆಟ್ಟಿಲುಗಳಿದ್ದು ಮುಂದಿನ ಬಯಲಿನಲ್ಲಿ ಎತ್ತರದ ವೇದಿಕೆ. ಸುತ್ತಲಿನ ಇಳಿಜಾರಿನಲ್ಲಿ ಹಂತ ಹಂತವಾಗಿ ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ. ಅದು ಪ್ರೇಕ್ಷಕರು ಕುಳಿತುಕೊಳ್ಳುವ ಗ್ಯಾಲರಿ. ಈ ಥಿಯೇಟರ್‌ನಲ್ಲಿ ಹೆಚ್ಚಾಗಿ ಮಕ್ಕಳ ಹುಟ್ಟು ಹಬ್ಬಗಳನ್ನು ಆಚರಿಸಲಾಗುತ್ತದೆ. ಅಲ್ಲಿಂದ ಬೆಟ್ಟವನ್ನು ಬಳಸಿ ನಿರ್ಮಿಸಿರುವ ಪುಟಾಣಿ ರೈಲು ಮಾರ್ಗವನ್ನು(ಚಿತ್ರಸಂಖ್ಯೆ15) ದಾಟಿ ನಡೆದರೆ ಪಕ್ಕದಲ್ಲೇ ರಾಶಿವನ, ನಕ್ಷತ್ರವನ, ನವಗ್ರಹಗಳ ವನವನ್ನು ಕಾಣಬಹುದು. ಆಯಾ ರಾಶಿಗೆ ತಕ್ಕಂತೆ, ಆಯಾ ನಕ್ಷತ್ರಕ್ಕೆ ತಕ್ಕಂತೆ, ಆಯಾ ಗ್ರಹಗಳಿಗೆ ತಕ್ಕಂತೆ ಮರಗಳನ್ನು ಬೆಳೆಸಲಾಗಿದೆ. ಇದು ಸಾಲದೆಂಬಂತೆ ಆಬಾಲ ವೃದ್ಧರಾಗಿ ಏರಿ ಸಂಭ್ರಮಿಸುವ ಪುಟಾಣಿ ರೈಲಿಗೆ ಸುರಂಗ ಮಾರ್ಗವನ್ನು ಸಹ ಮಾಡಲಾಗಿದೆ. ಇದು ಮಕ್ಕಳ ಹರ್ಷವನ್ನು ತಾರಕಕ್ಕೇರಿಸುತ್ತದೆ.

ಪ್ರವಾಸೋದ್ಯಮ ಇಲಾಖೆ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಜಿಲ್ಲಾಡಳಿತ, ಇವುಗಳಲ್ಲದೇ ಅಲ್ಲಿನ ಪರಿಸರ ಪ್ರಿಯರು ಸೇರಿ ರತ್ನಗಿರಿ ಗಾರ್ಡನ್ ಟ್ರಸ್ಟ್ ಸ್ಥಾಪಿಸಿಕೊಂಡು ಆ ಮೂಲಕ ಈ ಉದ್ಯಾನವನದ ಅಭಿವೃದ್ಧಿಯನ್ನು ಕೈಗೊಂಡಿದ್ದಾರೆ.

**ಪ್ರವಾಸಿಗರಿಗಿರುವ ಅನುಕೂಲಗಳು**

1. ಪ್ರತಿದಿನ ಇಲ್ಲಿಯ ನಾಗರೀಕರು ಬೆಳಿಗ್ಗೆ ಮತ್ತು ಸಂಜೆ ಸಮಯದಲ್ಲಿ ವಾಯುವಿಹಾರಕ್ಕೆ ಬರುತ್ತಾರೆ. ಅವರಿಗಾಗಿ ಈ ಉದ್ಯಾನದಲ್ಲಿ ವಾಕಿಂಗ್ ಪಾತ್ ಅನ್ನು ಕೂಡ ನಿರ್ಮಿಸಲಾಗಿದೆ.

2. ಇಲ್ಲಿಗೆ ಬರುವ ಸಾವಿರಾರು ಮಕ್ಕಳಿಗೆ, ಪ್ರವಾಸಿಗರಿಗೆ ಬಿಸಿ ಬಿಸಿ ತಿಂಡಿ ತಿನಿಸುಗಳನ್ನು ನೀಡಲು ಸುಂದರವಾದ ಉಪಹಾರ ಮಂದಿರವು ಸುಸಜ್ಜಿತವಾಗಿದೆ.
3. ಈ ಉದ್ಯಾನವನಕ್ಕೆ ಸ್ವಂತ ವಾಹನಗಳಲ್ಲಿ ಬರಬಹುದು. ಅಲ್ಲದೇ ಆಟೋ, ಟ್ಯಾಕ್ಸಿ ಬಸ್ ಮುಂತಾದ ಸೌಕರ್ಯವೂ ಇದೆ.
4. ಉತ್ತಮವಾದ ಶೌಚಾಲಯ ವ್ಯವಸ್ಥೆ ಕೂಡ ಇದೆ.

ಒಟ್ಟಾರೆಯಾಗಿ ಚಿಕ್ಕಮಗಳೂರು ಪಟ್ಟಣದ ಕಿರೀಟಪ್ರಾಯವಾದ ಈ ರತ್ನಗಿರಿ ಬೋರೆ ಅಥವಾ ಮಹಾತ್ಮಗಾಂಧಿ ಉದ್ಯಾನವನ ಚಿಕ್ಕಮಗಳೂರು ಮಕುಟಕ್ಕೆ ಮಣಿದಂತೆ ಕಂಗೊಳಿಸುತ್ತದೆ.

## ಕೆಮ್ಮಣ್ಣುಗುಂಡಿಯ ಕೃಷ್ಣರಾಜೇಂದ್ರ ಗಿರಿಧಾಮ

ಗಾವುದ ಗಾವುದ ಹರಡಿಕೊಂಡಿರುವ ಪರ್ವತ ಶ್ರೇಣಿಗಳು, ಭೂಮಿ–ಆಕಾಶವನ್ನು ಬೆಸೆಯುವ ದಿಗಂತ ಪಂಕ್ತಿಗಳು ನಾಮುಂದು, ತಾಮುಂದು ಎಂದು ಸ್ಪರ್ಧೆಗೆ ಇಳಿದಂತೆ ಕಣ್ಣಿಗೆ ನಿಲುಕುವಷ್ಟು ದೂರ ದೂರಕ್ಕೆ ಚಾಚಿಕೊಂಡಿರುವ ನೀಲವರ್ಣದ ಹಸಿರು ಚ್ಛಾದಿತ ಗಿರಿಪಂಕ್ತಿಯ ಸಾಲುಗಳು, ಆಕಾಶಕ್ಕೆ ತಲೆ ಎತ್ತಿ ನಿಂತ ಗಿರಿಶೃಂಗಗಳು, ಅವುಗಳ ಕಣಿವೆ ಕಂದರಗಳಲ್ಲಿ ಬೆಳೆದು ನಿಂತ ಅಸಂಖ್ಯ ಪ್ರಬೇಧದ ಮರಗಿಡ ಬಳ್ಳಿ ಹೂಗಿಡಗಳು, ಮಹಾನ್ ವೃಕ್ಷಗಳು, ಬೋರ್ಗರೆವ ಹಳ್ಳ ಕೊಳ್ಳಗಳು, ಧುಮ್ಮಿಕ್ಕುವ ಪ್ರಪಾತಗಳು, ನಡುನಡುವೆ ಕೇಳರಿಯದ ಕಂಡರಿಯದ ವೈವಿಧ್ಯಮಯ ಜೀವರಾಶಿಗಳ ಸೆಳೆದು ಅಲ್ಲಲ್ಲಿ ಗುಪ್ತಗಾಮಿನಿಯಂತೆ ಗಿರಿ ಗುಹ್ಯಗಳ ಕಣಿವೆಗಳಲ್ಲಿ ಹರಿಯುತ್ತಿರುವ ಜೀವ ನದಿಗಳ ಬತ್ತದ ಸೆಲೆಗಳು ಮೌನವಾಗಿ ನಿಂತಂತೆ ಒಮ್ಮೆ ಕಾಣುವ ಈ ವನರಾಶಿಯ ಅಂತರಾಳ ಸದಾ ಚಟುವಟಿಕೆಯ ತಾಣ ಎನ್ನುವುದು ನಾವು ಅದರ ಒಳಹೊಕ್ಕು ಗಮನಿಸಿದಾಗಲೆ.

ಕರ್ನಾಟಕದ ಶಿವಮೊಗ್ಗ, ಉತ್ತರ ಕನ್ನಡ, ದಕ್ಷಿಣ ಕನ್ನಡ, ಚಿಕ್ಕಮಗಳೂರು, ಕೊಡಗು ಈ ಜಿಲ್ಲೆಗಳಲ್ಲಿ ವಿಶಾಲವಾಗಿ ಹರಡಿಕೊಂಡಿರುವ ಪಶ್ಚಿಮಘಟ್ಟಗಳ ಸಾಲಿನಲ್ಲಿ ಚಿಕ್ಕಮಗಳೂರು ಜಿಲ್ಲೆಯಲ್ಲಿ ಕಂಡುಬರುವ ಪರ್ವತ ಶ್ರೇಣಿಗಳು ಬಹಳ ವಿಶೇಷತೆಯನ್ನು ಪಡೆದುಕೊಂಡಿದೆ. ಭಾರತಕ್ಕೂ ಕಾಫಿ ಬೀಜವನ್ನು ತಂದು ಬಿತ್ತಿದ ಸಂತ ಬಾಬಾಬುಡನ್‌ನ ಹೆಸರಿನಿಂದಲೇ ಸಿದ್ಧವಾಗಿರುವ ಬಾಬಾಬುಡನ್‌ಗಿರಿಯ ಸಾಲು, ಕರ್ನಾಟಕದ ಅತಿ ಎತ್ತರದ ಪ್ರದೇಶವೆಂದು ಪ್ರಸಿದ್ಧವಾಗಿರುವ ಮುಳ್ಳಯ್ಯನಗಿರಿಧಾಮಗಳು. ಕರ್ನಾಟಕದ ಊಟಿ ಎಂದೆ ಹೆಸರಾಗಿರುವ

ಕೃಷ್ಣರಾಜೇಂದ್ರ ಗಿರಿಧಾಮ ಅಥವಾ ಕೆಮ್ಮಣ್ಣುಗುಂಡಿ, ಇವೆಲ್ಲವುಗಳನ್ನೇ ಮೈಗೂಡಿಸಿಕೊಂಡಿರುವ ಪರ್ವತ ಶ್ರೇಣಿಯನ್ನು ಚಂದ್ರದ್ರೋಣ ಪರ್ವತಶ್ರೇಣಿ ಎಂದು ಕರೆಯಲಾಗಿದೆ.

ಪುರಾಣ ಇತಿಹಾಸವನ್ನು ಸಾರುವ ಈ ಶ್ರೇಣಿಯ ಗಿರಿ ಪಂಕ್ತಿಗಳಲ್ಲಿ ಸಂಚರಿಸಿ ಆನಂದಿಸುವುದೆ ಒಂದು ರೋಚಕ ಅನುಭವ. ಸೃಷ್ಠಿ ಸೌಂದರ್ಯದ ಘನಿ ಎನ್ನಬಹುದಾದ ಕೆಮ್ಮಣ್ಣುಗುಂಡಿಯ ಗಿರಿಧಾಮ ಸಮುದ್ರ ಮಟ್ಟಕ್ಕಿಂತ 4,832[9] ಅಡಿಗಳಷ್ಟು ಎತ್ತರದಲ್ಲಿದೆ(ಚಿತ್ರ ಸಂಖ್ಯೆ16). ವರ್ಷದ ಎಲ್ಲ ಋತುಗಳಲ್ಲೂ ತಣ್ಣನೆಯ ವಾತಾವರಣವನ್ನು ಆಹ್ಲಾದಕರ ಹವಾಗುಣವನ್ನು ಹೊಂದಿದ್ದು, ಇದು ಊಟಿಗಿಂತಲೂ ಸುಂದರ ಹಾಗೂ ವೈವಿಧ್ಯತೆಯಿಂದ ಕೂಡಿದೆ ಎಂಬುದನ್ನು ಅಲ್ಲಿಗೆ ಭೇಟಿ ನೀಡುವ ಸಾವಿರಾರು ಪ್ರವಾಸಿಗರ ಅನುಭವದ ಮಾತು. ಮೊಲ, ಜಿಂಕೆ, ಕಾಡುಕುರಿ, ಕಡವೆ, ಕಾಡೆಮ್ಮೆ, ಕಾಡುಕೋಳಿ, ಕಾಡುಹಂದಿ, ಕೌಜು, ವಿಕಳಾರಿ, ಕಾಜಾಣ,ಕೋಗಿಲೆ, ಗಿಳಿ, ನೂರಾರು ಜಾತಿಯ ಕಾಡು ಹಕ್ಕಿಗಳು. ಚಿರತೆ, ಹುಲಿ, ಕಿರುಬ, ಕರಡಿ, ಕಾಡುಬೆಕ್ಕು, ಪುನುಗುಬೆಕ್ಕು ಕಬ್ಬೆಕುಳ ಅಳಿಲುಗಳಂತಹ ಪ್ರಾಣಿಗಳಿಗೆ ತನ್ನ ದಟ್ಟವಾದ ವೈವಿಧ್ಯಮಯ ಹಸುರಿನ ಹೊದಿಕೆಯ ಅಡಿಯಲ್ಲಿ ಸಂರಕ್ಷಣೆ ನೀಡಿ ಪೋಷಿಸಿಕೊಂಡು ಬರುತ್ತಿರುವುದು ಈ ವನದ ಒಂದು ವಿಶೇಷ.

ಚಿಕ್ಕಮಗಳೂರು ಜಿಲ್ಲೆಯ ತರೀಕೆರೆಯಿಂದ 35 ಕಿ.ಮೀ.ಗಳು ಬಿರೂರಿನಿಂದ 36 ಕಿ.ಮೀಗಳು, ಲಿಂಗದಹಳ್ಳಿಯ ಮಾರ್ಗವಾಗಿ ಬರಬೇಕು. ಹಾಗೆಯೇ ಚಿಕ್ಕಮಗಳೂರಿನಿಂದ ಬಾಬಾಬುಡನ್‌ಗಿರಿ ಶೃಂಗದ ಮಾರ್ಗವಾಗಿ ಇಲ್ಲಿಗೆ 48 ಕಿ.ಮೀ.ಗಳು ಕಡೂರಿನಿಂದ 85 ಕಿ.ಮೀ.ಗಳು ಬೆಂಗಳೂರಿನಿಂದ 251 ಕಿ.ಮೀ.ಗಳು ಈ ಗಿರಿಯಲ್ಲಿ 1920 ರಲ್ಲಿ ವಿಶ್ವೇಶ್ವರಯ್ಯ ಐರನ್ ಅಂಡ್ ಸ್ಟೀಲ್ ಲಿಮಿಟೆಡ್ ಕಾರ್ಖಾನೆಗೆ ಇಲ್ಲಿಂದ ಕಬ್ಬಿಣದ ಅದಿರನ್ನು ಸಾಗಿಸಲಾಗುತ್ತಿತ್ತು.

ಊಟಿಯಲ್ಲಿ ತಮ್ಮ ಬೇಸಿಗೆ ಅರಮನೆಯನ್ನು ಹೊಂದಿದ್ದ ಶ್ರೀಕೃಷ್ಣರಾಜೇಂದ್ರ ಒಡೆಯರು ಅವರು 1932 ರಲ್ಲಿ ಈ ಗಿರಿಧಾಮವನ್ನು ತಮ್ಮ ಬೇಸಿಗೆಯ ವಿಹಾರಧಾಮವಾಗಿ ಆರಿಸಿಕೊಂಡಿದ್ದರಿಂದ ಈ ಗಿರಿಗೆ ಕೃಷ್ಣರಾಜೇಂದ್ರ ಗಿರಿಧಾಮ ಎಂಬ ಹೆಸರು ಬಂದಿದೆ. 1932 ರಿಂದ 42 ರವರೆಗೂ ಅವರು ಈ ಸುಂದರ ತಾಣದಲ್ಲಿ ಬೇಸಿಗೆ ದಿನಗಳನ್ನು ಕಳೆಯುತ್ತಿದ್ದರಂತೆ. ಅದಕ್ಕೆ ದತ್ತಾತ್ರೇಯ ಭವನ ಎಂದು ಕರೆಯಲಾಯಿತು. ವಿಶ್ವೇಶ್ವರಯ್ಯನವರು ತಂಗಲು ಇನ್ನೊಂದು ಭವನದ ನಿರ್ಮಾಣವಾಯಿತು. ಅದರ ಹೆಸರೆ ವಿರುಪಾಕ್ಷ. 1942 ರ ನಂತರ ಈ ಸ್ಥಳವನ್ನು ವಿಐಎಸ್‌ಎಲ್ ಗೆ ಹಸ್ತಾಂತರಿಸಲಾಯಿತು. 1962 ರಲ್ಲಿ ವಿಐಎಸ್‌ಎಲ್ ನವರು ತೋಟಗಾರಿಕೆ ಇಲಾಖೆಗೆ ಹಸ್ತಾಂತರಿಸಿದರು. ಆ ಸಮಯದಲ್ಲಿ ಇದ್ದ ರಾಜ್ಯದ ರಾಜ್ಯಪಾಲರ

ಕಾಲದಲ್ಲಿ ಅವರ ಆದೇಶದ ಮೇರೆಗೆ ಕೃಷ್ಣರಾಜೇಂದ್ರ ಗಿರಿಧಾಮದ ತುಟ್ಟ ತುದಿಯಲ್ಲೊಂದು ಭವನವನ್ನು ನಿರ್ಮಾಣ ಮಾಡಲಾಯಿತು. ಅದರ ಹೆಸರು ರಾಜಭವನವೆಂದು ಕರೆಯಲಾಯಿತು. ಅಂದಿನಿಂದ ರಾಜಭವನದ ಸುತ್ತಲೂ ನೂರಾರು ಜಾತಿಯ ಪುಷ್ಪಗಳನ್ನು ಬೆಳೆಸಿ ಸುಂದರವಾದ ತೋಟವನ್ನು ಅಭಿವೃದ್ಧಿಪಡಿಸಲಾಯಿತು.

ಒಟ್ಟಾರೆ 10 ಎಕರೆಯಷ್ಟು ಜಾಗವನ್ನು ಹೊಂದಿರುವ ಈ ತಾಣದಲ್ಲಿ ತುಟ್ಟ ತುದಿಯ ರಾಜಭವನದ ಸುತ್ತಮುತ್ತ ಸುಮಾರು 4 ಎಕರೆ ಭೂ ಪ್ರದೇಶವನ್ನು ನೂರಾರು ಜಾತಿಯ ಪುಷ್ಪಸಂಕುಲ ಆಕ್ರಮಿಸಿಕೊಂಡಿದೆ(ಚಿತ್ರಸಂಖ್ಯೆ17). ಲಾಂಜ್‌ಗಳು, ವಾಕಿಂಗ್‌ಪಾತ್‌ಗಳು, ವರ್ಣರಂಜಿತ ಹೂಗಳು(ಚಿತ್ರಸಂಖ್ಯೆ18). ಮಕರಂದ ಹೀರಿಬರುವ ದುಂಬಿಗಳು, ಸುಯ್‌ಗುಡುವ ತಂಗಾಳಿ, ಆಗಾಗ ಬೆಳ್ಳಿ ಪರದೆಯ ಜರಡಿಯಿಂದ ತೂರಿ ಬರುವ ಮುತ್ತಿನಂತಹ ಹನಿಗಳ ಸಿಂಚನದಿಂದ ಮೈ ಪುಳಕಗೊಳಿಸುವ ಮುಗಿಲುಗಳು, ದೃಷ್ಟಿ ದಿಗಂತರ ಮೋರೆಯನ್ನು ದಾಟಿ ಸೊಂಡಿಲ ಮೊಗದ ಸೊಂಡಿಲ ದಾಟಿ ವಿಶಾಲ ವ್ಯೋಮದ ತೆರೆಯನ್ನೇ ಬಾಚಿ ತೆರೆತೆರೆಯಾಗಿ ದಟ್ಟ ಅರಣ್ಯದ ನಡುವೆ ಹರಡಿಕೊಂಡಿರುವ ಪರ್ವತ ಶ್ರೇಣಿ.

ಇಲ್ಲಿ ಚಾರಣಿಗರಿಗೆ ಪ್ರಿಯವಾದ ಹಲವಾರು ಸ್ಥಳಗಳಿವೆ. ಅದರಲ್ಲಿ 'ಝಡ್ ಪಾಯಿಂಟ್' ಎಂಬ ತುಟ್ಟತುದಿಯ ಪ್ರದೇಶವೂ ಒಂದು. ಇಲ್ಲಿ ನಿಂತು ಸುತ್ತಲೂ ಕಣ್ಣು ಹಾಯಿಸಿದರೆ ಕಾನನದ ಕಡಲಲ್ಲಿ ಕಳೆದುಹೋದ ಅನುಭವ ನೂರಾರು ಮೈಲುಗಟ್ಟಲೆ ಭೂ ವ್ಯೋಮದ ದಿಗಂತ ಪಂಕ್ತಿ ವರ್ಣನೆಗೆ ಪದಗಳನ್ನು ಹುಡುಕಾಡುತ್ತಿದ್ದಂತೆಯೇ ಬಾಯಿಗೆ ಬೀಗ ಬೀಳುತ್ತದೆ. ಮೌನವೇ ಮಹಾ ಸಾಮ್ರಾಟನಾಗಿ ತನ್ನ ದರ್ಬಾರು ನಡೆಸಲು ಆರಂಭಿಸಿಬಿಡುತ್ತದೆ. ಪ್ರಕೃತಿ ಸೌಂದರ್ಯಕ್ಕೆ ಮಾರುಹೋದ ಮನಸ್ಸಿಗೆ ಇದೇ ಮಹಾ ಸಾಕ್ಷಿಯಾಗಿ ನಿಲ್ಲುತ್ತದೆ.

ಕೆಮ್ಮಣ್ಣುಗುಂಡಿ ನಿಸರ್ಗಧಾಮಕ್ಕೆ ಬರುವವರ ಸಂಖ್ಯೆ ಏನೂ ಕಡಿಮೆ ಇಲ್ಲ. ಇಲ್ಲಿಯ ನಿಶ್ಕಲ್ಮಶವಾದ ತಿಳಿನೀರು ಸವಿಯೊಂದಿಗೆ ಔಷಧೀಯ ಗುಣಗಳನ್ನು ಹೊಂದಿರುವುದು ಒಂದು ವಿಶೇಷ. ಅಸಂಖ್ಯೆ ವರ್ಣದ ಅಪಾರ ಪರ್ಣದ ಔಷಧೀಯ ಸಸ್ಯಗಳು, ತೇಗ, ಬೀಟೆ, ಹೊನ್ನೆ, ಆಲ, ಹಲಸು, ಕಾಡುಮಾವು, ಹೀಗೆ ಹಲವು ವರ್ಗದ ಸಸ್ಯವರ್ಗದ ಸಾಮ್ರಾಜ್ಯವನ್ನು ವೀಕ್ಷಿಸಿದ ತೃಪ್ತಿಯಿಂದ ಮನಸ್ಸಿಲ್ಲದ ಮನಸ್ಸಿನಿಂದ ಕೆಮ್ಮಣ್ಣುಗುಂಡಿ ನಿಸರ್ಗಧಾಮವನ್ನು ಬಿಟ್ಟು ಬರುವಾಗ ದೂರದ ದಿಗಂತದಲ್ಲಿ ಗಿರಿಪಂಕ್ತಿಯ ಮಡಿಲಲ್ಲಿ ಪವಡಿಸಲು ಅನುವಾದ ರವಿ ಮೆಲ್ಲ ಮೆಲ್ಲನೆ ಜಾರುತ್ತಿದ್ದಂತೆಯೇ ನಮಗರಿವಿಲ್ಲದೆಯೇ ನಾವು ನಮ್ಮ ವಾಹನಗಳನ್ನು ಹತ್ತಿರುತ್ತೇವೆ.

ಧೂಳೆಬ್ಬಿಸುತ್ತಾ ವಾಹನಗಳು ಕಾನನದಲ್ಲಿ ಕಣ್ಮರೆಯಾದಾಗ ಮೌನವಾಂತ ಬನದೇವಿ ಧ್ಯಾನ ಸಮಾದಿಯಲ್ಲಿ ಮುಳುಗಿದಂತೆ ಎಲ್ಲೆಲ್ಲೂ ನೀರವತೆ. ಇಂತಹ ಚೇತೋಹಾರಿ ಅನುಭವವನ್ನು ಪಡೆಯುವ ಪ್ರಾಕೃತಿಕ ಸೌಂದರ್ಯದ ಇಂತಹ ತಾಣಗಳಲ್ಲದೆ ಮತ್ತೆಲ್ಲಿ ಸಾಧ್ಯ.

**ಪ್ರವಾಸಿಗರಿಗಿರುವ ಅನುಕೂಲಗಳು**

ಈ ತಾಣಕ್ಕೆ ಸ್ವಂತ ವಾಹನಗಳಲ್ಲಿ ಬರುವುದೇ ಉಚಿತ. ಉಳಿದುಕೊಳ್ಳಲು ಅತಿಥಿ ಗೃಹಗಳಿವೆ(ಚಿತ್ರಸಂಖ್ಯೆ19). ಬೆಂಗಳೂರಿನ ಲಾಲ್‌ಬಾಗ್‌ನಲ್ಲಿರುವ ತೋಟಗಾರಿಕೆ ಇಲಾಖೆ ಕಛೇರಿಯಿಂದಲೇ ಕಾಯ್ದಿರಿಸಬೇಕು. ಊಟ, ಉಪಹಾರಕ್ಕೆ ಹೋಟೆಲ್‌ಗಳಿವೆ.

**ಅನಾನುಕೂಲಗಳು**

1. ಸರ್ಕಾರಿ ಹಾಗೂ ಖಾಸಗಿ ಬಸ್ ಸೌಲಭ್ಯ ಕಡಿಮೆ.
2. ಪ್ರವಾಸಿಗರು ಉಳಿದು ಕೊಳ್ಳಲು ಕಡಿಮೆ ಬೆಲೆಯ ವಸತಿ ಗೃಹಗಳಿಲ್ಲ.

## ಕುದುರೆಮುಖ

ಭಾರತದ ಕಬ್ಬಿಣದ ಅದುರಿಗೆ ವಿದೇಶಗಳಲ್ಲಿ ಹೆಚ್ಚು ಬೇಡಿಕೆ ಇದೆ. ಭಾರತದ ಎಲ್ಲ ಕಬ್ಬಿಣದ ಅದುರು ನಿಕ್ಷೇಪಗಳೂ ರಫ್ತಿಗೆ ಅನುಕೂಲವಾಗುವ ಬಂದರುಗಳಿಂದ ಕನಿಷ್ಠ 450 ಕಿ.ಮೀ. ದೂರದಲ್ಲಿದೆ. ಅದರಿಂದಾಗಿ ಅದುರನ್ನು ನಿಕ್ಷೇಪಗಳಿಂದ ಬಂದರುಗಳಿಗೆ ಸಾಗಿಸುವುದಕ್ಕೆ ಹೆಚ್ಚು ಹಣ ಖರ್ಚಾಗುವುದು.ಈ ದಿಶೆಯಲ್ಲಿ ಕುದುರೆಮುಖದ ಅದುರುಸಾಗಣಿಕೆಗೆ ಹತ್ತಿರದ ಬಂದರಾದ ಮಂಗಳೂರು ಕೇವಲ 50 ಕಿ.ಮೀ. ದೂರದಲ್ಲಿರುವುದರಿಂದ ಇಲ್ಲಿನ ಅದುರಿನ ನಿಕ್ಷೇಪಕ್ಕೆ ಅತೀ ಹೆಚ್ಚಿನ ಮಹತ್ವ ಬಂದಿದೆ. ಕುದುರೆಮುಖದ ಅದುರಿನಲ್ಲಿ ಶೇ. 60 ಕ್ಕೂ ಹೆಚ್ಚು ಕಬ್ಬಿಣದಂಶವಿದ್ದರೂ ಬೆಣಚಿನ ಅಂಶವೂ ಸಾಕಷ್ಟು ಪ್ರಮಾಣದಲ್ಲಿರುವುದರಿಂದ ಹೊರತೆಗೆದ ಅದುರನ್ನು ನೇರವಾಗಿ ಪರದೇಶಗಳಿಗೆ ರಫ್ತು ಮಾಡುವ ದರ್ಜೆಯದಾಗಿಲ್ಲ. ಆದ್ದರಿಂದ ಅದುರನ್ನು ಸಾರೀಕರಿಸಿದ ಅನಂತರವೇ ರಫ್ತು ಮಾಡಬಹುದು.

ಅತ್ಯಂತ ಆಧುನಿಕ ತಾಂತ್ರಿಕ ಕುಶಲತೆಯಿಂದ ಪ್ರಾರಂಭದಲ್ಲಿ 40 ಲಕ್ಷ ಟನ್ ಪರಿಷ್ಕರಿಸಿದ ಅದುರನ್ನು ಉತ್ಪಾದಿಸಲು ಪ್ರಯತ್ನಗಳು ನಡೆದಿವೆ. ಈ ಪ್ರಮಾಣದಲ್ಲಿ ಪರಿಷ್ಕರಿಸಿದ ಅದುರಿನ ಉತ್ಪಾದನೆಗೆ 140 ಲಕ್ಷಟನ್[10] ಕೆಳದರ್ಜೆ ಅದುರನ್ನು ಬಳಸಬೇಕಾಗುವುದು. ಅಂದರೆ ಪ್ರತಿದಿನ

60,000 ಟನ್ ಮ್ಯಾಗ್ನಟೈಟ್ ಕ್ವಾರ್ಟ್‌ಜೈಟ್ ಅದುರನ್ನು ಹೊರತೆಗೆಯಬೇಕಾಗುವುದು. ಪರಿಷ್ಕರಿಸಿದ ಅದುರನ್ನು ನೀರಿನಲ್ಲಿ ಬೆರೆಸಿ(ಬುರುಡೆ ರಾಡಿ ಮಾಡಿ) ಕುದುರೆಮುಖದಿಂದ ಮಂಗಳೂರಿಗೆ ನೇರ ಕೊಳವೆ ಮಾರ್ಗವಾಗಿ ಹಡಗಿಗೆ ತುಂಬಿ ಸಾಗಿಸುವ ಏರ್ಪಾಡುಗಳಾಗುತ್ತಿವೆ. ಇದು ಬೃಹತ್ ಪ್ರಮಾಣದ ಗಣಿಗಾರಿಕೆ ಕಾರ್ಯ. ಈ ಯೋಜನೆಯಿಂದ ಕರ್ನಾಟಕದ ಖನಿಜೋದ್ಯಮದಲ್ಲಿ ಒಂದು ಹೊಸ ಪರ್ವ ಆರಂಭವಾಗುತ್ತದೆ.

ಇತ್ತೀಚೆಗೆ ಈ ನಿಕ್ಷೇಪಗಳ ಅದುರಿನ ಗಣಿಗಾರಿಕೆ,ಸಂಸ್ಕರಣಾಭಿವೃದ್ಧಿಯನ್ನು ಪರಸ್ಪರ ಸಹಕಾರದಿಂದ ನಿರ್ವಹಿಸಲು ಭಾರತ ಮತ್ತು ಇರಾನ್ ದೇಶಗಳು ಒಪ್ಪಂದ ಮಾಡಿಕೊಂಡಿವೆ. ಪರಿಸರ ಪ್ರೇಮಿಗಳ ಒತ್ತಾಸೆ ಹಾಗೂ ಸುಪ್ರೀಂ ಕೋರ್ಟಿನ ಆದೇಶದಂತೆ ಗಣಿಗಾರಿಕೆ ಈಗ ಸ್ಥಗಿತಗೊಂಡಿದೆ.

ವಿಶಾಲವಾಗಿ ಹಬ್ಬಿದ ಸುಂದರವಾದ ಪರ್ವತ ಶ್ರೇಣಿಗಳು ಗುಹೆಗಳು, ಕಂದಕ, ಹಳ್ಳಕೊಳ್ಳ ಮತ್ತು ಚಿಕ್ಕದೊಡ್ಡ ಬೆಟ್ಟಗಳೂ, ಕಿರಿದಾದ ಬೆಟ್ಟಗಳ ಕಾಡಿನ ಕವಲು ದಾರಿಯಲ್ಲಿ ನಡೆಯುತ್ತಾ ಹೋಗುತ್ತಿದ್ದರೆ ಜುಳುಜುಳು ಹರಿಯುವ ಶುದ್ಧತಿಳಿನೀರಿನ ಝರಿಗಳು ಎಲ್ಲೆಡೆ ಕಾಣುವ ಹಸಿರು ಹುಲ್ಲು ಗಿಡಮರಗಳು, ಚಿಲಿಪಿಲಿಗುಟ್ಟುವ ಪಕ್ಷಿಗಳ ಸದ್ದು... ಇದನ್ನೆಲ್ಲಾ ಕಾಣುವ ಬಯಕೆಯಿದ್ದರೆ ನೀವು ಚಿಕ್ಕಮಗಳೂರು ಜಿಲ್ಲೆಯ ರಮಣೀಯವಾದ ಕುದುರೆಮುಖಕ್ಕೆ ಪ್ರವಾಸ ತೆರಳಲೇಬೇಕು.

ಕುದುರೆಯ ಮುಖದಂತೆ ಕಾಣುವ ಪರ್ವತ ಶ್ರೇಣಿ ಇಲ್ಲಿರುವುದರಿಂದ ಈ ಪ್ರದೇಶಕ್ಕೆ ಕುದುರೆಮುಖ ಎಂಬ ಹೆಸರು ಬಂದಿದೆ.[11] ಕುದುರೆಮುಖದಲ್ಲಿ ಪ್ರಮುಖ ಆಕರ್ಷಣೆಯೆಂದರೆ, ಕುದುರೆಮುಖ ರಾಷ್ಟ್ರೀಯ ಉದ್ಯಾನವನವಾಗಿದೆ(ಚಿತ್ರಸಂಖ್ಯೆ20). ಚಿಕ್ಕಮಗಳೂರಿನಿಂದ 95 ಕಿ,ಮೀ, ದೂರದಲ್ಲಿರುವ ಈ ಉದ್ಯಾನವನವನ್ನು ಕುದುರೆಮುಖ, ಕೆರೆಕಟ್ಟೆ, ಕಳಸ, ಶಿವಮೊಗ್ಗ ಎಂದು ನಾಲ್ಕು ವಲಯಗಳಾಗಿ ವಿಂಗಡಿಸಲಾಗಿದೆ.

ದಕ್ಷಿಣ ಕನ್ನಡ, ಉಡುಪಿ ಮತ್ತು ಚಿಕ್ಕಮಗಳೂರಿನ ಪಶ್ಚಿಮಘಟ್ಟಗಳ ವಲಯದಲ್ಲಿ ಇರುವ ಈ ಉದ್ಯಾನವನದ ಮಧ್ಯದಲ್ಲಿ ಶೃಂಗೇರಿಯ ನರಸಿಂಹ ಪರ್ವತ, ಉತ್ತರದಲ್ಲಿ ಜಮಾಲಾಬಾದ್ ಕೋಟೆ ಇದೆ.ಸುಮಾರು 600 ಚ.ಮೀ ವಿಸ್ತೀರ್ಣದಲ್ಲಿ ಹಬ್ಬಿದ್ದು, 1987ರಲ್ಲಿ[12] ರಾಷ್ಟ್ರೀಯ ಉದ್ಯಾನವನ ಎಂದು ಘೋಷಿಸಲ್ಪಟ್ಟಿರುವ ಈ ಪ್ರದೇಶ ಸಸ್ಯ ಸಮೃದ್ಧಿಯಿಂದ ಕೂಡಿದೆ. ಇಲ್ಲಿ ಬೆಳೆಯುವ ಅಪರೂಪದ ಕಾರಂಜಿ ಹೂವು 12 ವರ್ಷಕ್ಕೊಮ್ಮೆ ಅರಳಿ ಕಂಪು ಸೂಸಿ ನೀಲ ಹಾಸು ಹೊದ್ದಂತೆ ಕಂಗೊಳಿಸುವುದು, ಪ್ರಕೃತಿಯ ಈ ಅಪರೂಪದ ಪುಷ್ಪೋತ್ಸವವನ್ನು

ಬಣ್ಣಿಸಲು ಪದಗಳೇ ಸಾಲುವುದಿಲ್ಲ, ಜೊತೆಗೆ ಹುಲಿ, ಚಿರತೆ, ಸಂಬಾರ್, ಮುಂಗುಸಿ, ಗುಳ್ಳೆನರಿ ಸೇರಿದಂತೆ ಅಳಿವಿನಂಚಿನಲ್ಲಿರುವ ಪ್ರಾಣಿ ಪಕ್ಷಿಗಳ ತಾಣವೂ ಆಗಿದೆ.

ಕುದುರೆಮುಖ ರಾಷ್ಟ್ರೀಯ ಉದ್ಯಾನವನದಲ್ಲಿ 13 ಚಾರಣ ಸ್ಥಳಗಳನ್ನು ಗುರುತಿಸಲಾಗಿದೆ.ಈ ಸ್ಥಳಗಳಿಗೆ ಹೋಗಿಬರಲು ಅನುಕೂಲವಾಗುವಂತೆ, ಹತ್ತಿರದಲ್ಲಿ ತಂಗು ದಾಣಗಳನ್ನು ನಿರ್ಮಿಸಲಾಗಿದೆ. ಪಶ್ಚಿಮ ಘಟ್ಟಗಳಿಗೆ ಹೊಂದಿಕೊಂಡಂತೆ ಇರುವ ಈ ಗಂಗಮೂಲ ಅಥವಾ ವರಹಾ ಪರ್ವತ ಸಾಲುಗಳು, ಆಭಯಾರಣ್ಯಕ್ಕೆ ಅಂಟಿಕೊಂಡಂತೆ ಇವೆ.ಇವು ಕುದುರೆಮುಖಕ್ಕೆ ತೀರಾ ಹತ್ತಿರದಲ್ಲಿವೆ. ಸಮುದ್ರಮಟ್ಟಕ್ಕಿಂತ ಸುಮಾರು 1458 ಮೀ.[13] ಎತ್ತರವಿರುವ ಈ ಗಿರಿಧಾಮದಲ್ಲಿ, ತುಂಗಾ, ಭದ್ರಾ ಮತ್ತು ನೇತ್ರವತಿ ನದಿಗಳು ಹುಟ್ಟುತ್ತದೆ,

ಸಹಜವಾಗಿ ನದಿಯ ಹಕ್ಕಪಕ್ಕದಲ್ಲಿ ದಟ್ಟವಾದ ಅರಣ್ಯವಿದೆ(ಚಿತ್ರಸಂಖ್ಯೆ21), ಭದ್ರಾನದಿಯನ್ನು ಸೇರುವ ಉಪನದಿ ಲಕ್ಯಾಗೆ ಅಡ್ಡವಾಗಿ ಅಣೆಕಟ್ಟು ಕಟ್ಟಲಾಗಿದೆ 100 ಮೀ, ಎತ್ತರವಿದ್ದು, ಅಕ್ಕಪಕ್ಕದ ದೃಶ್ಯ, ಬೆಟ್ಟಗುಡ್ಡ ಕಣಿವೆಗಳು, ಶಿಖರ, ಘಟ್ಟ ಪ್ರದೇಶದ ತಗ್ಗು ನೋಡಲು ರಮಣೀಯವಾಗಿದೆ.

1913ರಲ್ಲಿ ಮೈಸೂರಿನ ಭೂ ಶೋಧಕ ಸಂಪತ್ ಅಯ್ಯಂಗಾರ್ ಎಂಬುವರು ಕುದುರೆಮುಖ ಬೆಟ್ಟದಲ್ಲಿ ಕಬ್ಬಿಣದ ಅಂಶವಿರುವ ಅದಿರನ್ನು ಪತ್ತೆ ಹಚ್ಚಿದರು ಎಂಬುದು ದಾಖಲೆಗಳಿಂದ ತಿಳಿದುಬರುತ್ತದೆ. ಕುದುರೆಮುಖ ಹೆಚ್ಚು ಬೆಳಕಿಗೆ ಬಂದಿದ್ದು 1976ರ ನಂತರವೇ.[14]

ಕುದುರೆಮುಖದಿಂದ ಸುಮಾರು 20 ಕಿ,ಮೀ ದೂರದಲ್ಲಿ ಕಳಸ ಎಂಬ ಊರಿದೆ. ಪಂಚತೀರ್ಥ, ವಸಿಷ್ಠತೀರ್ಥ, ಅಂಬಾತೀರ್ಥ, ವರಹಾತೀರ್ಥ, ನಾಗತೀರ್ಥ ಎಂಬ 5 ತೀರ್ಥಗಳಿಂದ ಸುತ್ತುವರಿದ ಈ ತಾಣ ಬಹಳ ಮುದ ಕೊಡಲಿದೆ. ರುದ್ರ ತೀರ್ಥಕ್ಕೆ ಸಮೀಪದಲ್ಲಿ ಶಿಲಾ ಶಾಸನವಿದೆ.ಅದರ ಮೇಲೆ ಸಂಸ್ಕೃತ ಭಾಷೆಯಲ್ಲಿ ಬರೆದಿರುವ ಪ್ರಕಾರ ಮಧ್ವಾಚಾರ್ಯ ಯತಿಗಳು ಇಲ್ಲಿ ಆ ಶಾಸನವನ್ನು ಸ್ಥಾಪಿಸಿದರೆಂಬ ವಿಷಯ ತಿಳಿದುಬರುತ್ತದೆ.ಕುದುರೆಮುಖದಿಂದ 28 ಕಿ.ಮೀ ದೂರದಲ್ಲಿ ಹೊರನಾಡು ಅನ್ನಪೂರ್ಣೇಶ್ವರಿ ದೇವಾಲಯವಿದೆ. ಇದು ಬಿಟ್ಟರೆ ಕಳೇಶ್ವರ ದೇವಸ್ಥಾನ, ಗಿರಿಜಾಂಬ ದೇವಸ್ಥಾನಗಳು ಮುಖ್ಯವಾದವುಗಳು.

ದೀಪಾವಳಿಯ ಸಮಯದಲ್ಲಿ ಕಳಸೇಶ್ವರಸ್ವಾಮಿ ಹಾಗೂ ಗಿರಿಜಾಂಬ ದೇವಿಯ ವಿವಾಹ, ಗಿರಿಜಾ ಕಲ್ಯಾಣೋತ್ಸವ ಮೂರು ದಿನಗಳ ಕಾಲ ವಿಜೃಂಭಣೆಯಿಂದ ಜರುಗಲಿದೆ. ಇದನ್ನು ವೀಕ್ಷಿಸಲು ರಾಜ್ಯ ಸೇರಿದಂತೆ ಹೊರರಾಜ್ಯಗಳಿಂದಲೂ ಜನರು ಬರುತ್ತಾರೆ.

**ನಂದನವನ**

ಇದು ಕುದುರೆಮುಖ ಕಬ್ಬಿಣದ ಸಂಸ್ಥೆಯವರು ಬೆಳೆಸಿರುವ ಸಿಂಗಾರ ತೋಟ, ಈ ತೋಟ ಅದ್ಭುತ. ವಿವಿಧ ವರ್ಗದ ಹೂಗಿಡಗಳು, ವಿವಿಧ ಬಣ್ಣದ ಕ್ರೋಟನ್, ಆಳೆತ್ತರದ ಕಮಾನು ಬಳ್ಳಿಗಳು, ಹುಲ್ಲು ಹಾಸಿನ ಮೃದು ಭೂಮಿಯ ಆಕರ್ಷಣೆ ಇದೆ. ತಾಳೆಮರದ ಜಾತಿಯ ಗಿಡಗಳಿವೆ. ಅಲ್ಲಲ್ಲಿ ಕವಿವಾಣಿಯ ಫಲಕಗಳನ್ನು ತೂಗುಹಾಕಿದೆ. ಪ್ರತಿಸಂಜೆ ನವುರಾಗಿ ಭಾವಗೀತೆಗಳ ಲಹರಿ ಕೇಳಿಬರುತ್ತದೆ. ಹೀಗಾಗಿ ಇದು ಪರಿಸರ ಸಂಸ್ಥೆಯೊಂದು ನಿರ್ಮಿಸಿದ ಸುಂದರ ಕ್ಷೇತ್ರ.

ಮಂಗಳೂರಿನಿಂದ 110 ಕಿ.ಮೀ. ಕಾರ್ಕಳದಿಂದ 48 ಕಿ.ಮೀ. ಕಳಸದಿಂದ 20 ಕಿ.ಮೀ. ಬೆಂಗಳೂರಿನಿಂದ 316 ಕಿ.ಮೀ. ಚಿಕ್ಕಮಗಳೂರಿನಿಂದ 80 ಕಿ.ಮೀ. ಕುದುರೆ ಮುಖಕ್ಕೆ ಪ್ರವಾಸ ಹೊರಡುವ ಪ್ರವಾಸಿಗರಿಗೆ ನಂದನವನವು ಪ್ರವಾಸಿಗರ ಮನಸ್ಸಿಗೆ ಅಹ್ಲಾದವನ್ನುಂಟುಮಾಡುತ್ತದೆ.

**ಕುದುರೆಮುಖ ವನಾರಣ್ಯ**

ಇದು 600 ಚ.ಕಿ.ಮೀ. ವಿಸ್ತೀರ್ಣವನ್ನು ಆಕ್ರಮಿಸಿರುವ ಕರ್ನಾಟಕದ ಅಭಯಾರಣ್ಯಗಳಲ್ಲಿ ಒಂದು. ಇದು ಪಶ್ಚಿಮಘಟ್ಟದ ಭಾಗವಾಗಿದ್ದು 1800 ಮೀ. ಎತ್ತರವಾಗಿದೆ. ಇಲ್ಲಿ ಕಾಣುವ ಪ್ರಾಣಿ ಪಕ್ಷಿ, ಗಿಡ ಪ್ರಭೇದಗಳು, ಹೆಸರುವಾಸಿ. ಪ್ರಾಣಿ, ಕೀಟ, ಹುಳು ಹುಪ್ಪಟೆ, ಮೀನು ಮತ್ತು ಉಭಯ ಜೀವಿ ಸಸ್ತನಿಗಳಿಗೆ ಆಶ್ರಯತಾಣ. ನೂರಾರು ಸಸ್ಯವರ್ಗದ ತಳಿಗಳಿಗೆ ತೌರುಮನೆ, ಪುಷ್ಪ ವೈವಿಧ್ಯಕ್ಕೆ ಹೆಸರಾಂತ ಸ್ಥಳ. ಇಲ್ಲಿ ಅರಣ್ಯ ವಸತಿ ಗೃಹವಿದ್ದು, ಪ್ರವಾಸಿಗರ ಉತ್ತಮ ವೀಕ್ಷಣೆಯ ಕಾಲ: ಸೆಪ್ಟೆಂಬರ್‌ನಿಂದ ಮೇ ತಿಂಗಳಾಗಿದೆ. ಇಲ್ಲಿಗೆ ತಲುಪುವ ದಾರಿ: ಚಿಕ್ಕಮಗಳೂರಿನಿಂದ 96 ಕಿ.ಮೀ. ಮೂಡುಗೆರೆಯಿಂದ 88 ಕಿ.ಮೀ. ಕಳಸದಿಂದ 25 ಕಿ.ಮೀ.

**ಜಲಪಾತಗಳು**

ಜಲಪಾತ ಎಂದೊಡನೆ ನಮಗೆ ನೆನಪಾಗುವುದು ಶಿವಮೊಗ್ಗದ ಜೋಗದ ಜಲಪಾತ. ಅಲ್ಲಿರುವಂತೆ ರಮ್ಯ ಮನೋಹರವಾದಂತಹ ಹಲವಾರು ಜಲಪಾತಗಳು ಚಿಕ್ಕಮಗಳೂರು ಜಿಲ್ಲೆಯಲ್ಲಿದೆ. ಅವುಗಳತ್ತ ಒಂದು ಅವಲೋಕನ ಈ ಕೆಳಕಂಡಂತಿದೆ.

**ಸಿರಿಮನೆ ಜಲಪಾತ**

ಶೃಂಗೇರಿಯಿಂದ ಸುಮಾರು 14 ಕಿ.ಮೀ. ಅಂತರದಲ್ಲಿ ಸಿರಿಮನೆ ಎಂಬ ಸುಮಾರು 50 ಮನೆಗಳಿರುವ ಗ್ರಾಮವಿದೆ. ಗ್ರಾಮದ ಪ್ರವೇಶಕ್ಕೆ ಸ್ವಲ್ಪ ಮೊದಲೇ ರಸ್ತೆ ಎಡಕ್ಕೆ ಸಿರಿಮನೆ ಜಲಪಾತಕ್ಕೆ ದಾರಿ ಎಂಬ ನಾಮಫಲಕ ಕಾಣಿಸುತ್ತದೆ. ಅದರ ಜಾಡು ಹಿಡಿದು 100 ಮೀಟರ್‌ಗಳಷ್ಟು ಎಡಕ್ಕೆ ತಿರುಗಿಕೊಂಡರೆ ಸುಂದರ ವನರಾಶಿಯ ನಡುವೆ ಈ ಎಕೊ ಟೋರಿಸಂ ಎಂಬ ಫಲಕ ಕಾಣಿಸುತ್ತಿದೆ.

ಹಾಗೆಯೇ ಅರಣ್ಯ ಇಲಾಖೆಯವರು ಒಂದು ಪುಟ್ಟ ಹೆಂಚಿನ ಕೋನಾಕೃತಿಯ ಕೊಠಡಿಯನ್ನು ನಿರ್ಮಿಸಿರುವುದು ಪ್ರವಾಸಿಗರನ್ನು ಸೆಳೆಯುತ್ತದೆ. ಟಿಕೆಟ್ ಕೌಂಟರ್‌ನಲ್ಲಿ 5 ರೂ.ಗಳ ಪ್ರವೇಶದ ಟಿಕೆಟ್ ಪಡೆದು ಪಕ್ಕದಲ್ಲೇ ನಿರ್ಮಿಸಲಾಗಿರುವ 100–150 ಮೆಟ್ಟಿಗಳನ್ನು ಇಳಿದರೆ ಸುಂದರವಾದ ಸ್ಫಟಿಕದಂಥ ಜಲರಾಶಿಯು ಶಿವನ ಜಡೆಯಿಂದ ಶಾಂತವಾಗಿ ನಿಧಾನವಾಗಿ ಕಲ್ಲುಗಳಿಂದ ಸುಮಾರು 75–85 ಅಡಿ ಎತ್ತರದಿಂದ ಜಲಪಾತವಾಗಿ ಹರಿದು ಬರುತ್ತಾಳೊ ಎನ್ನುವಂತೆ ಭಾಸವಾಗುತ್ತದೆ(ಚಿತ್ರಸಂಖ್ಯೆ22). ನೋಡುಗರಿಗೆ ಅದು ದಿವ್ಯವಾದ ಅನುಭೂತಿಯನ್ನೇ ನೀಡುತ್ತದೆ. ಇದು ತುಂಗ ನದಿಯ ಉಪನದಿಯಾಗಿದ್ದು ಸಮುದ್ರ ಮಟ್ಟಕ್ಕಿಂತ 2408 ಅಡಿಗಳಷ್ಟು ಎತ್ತರವಿದೆ, ಈ ಜಲಪಾತವು ವರ್ಷದ ಎಲ್ಲಾ ಋತುಗಳಲ್ಲೂ ಒಂದೇ ಸಮನೆ ಧುಮ್ಮಿಕ್ಕುವ ಈ ಜಲಧಾರೆ ಸಿರಿಮನೆ ಜಲಪಾತ ಎಂದು ಪ್ರಸಿದ್ಧಿಯನ್ನು ಪಡೆದಿದೆ. ಸಿರಿಮನೆ ಎನ್ನುವ ಊರಿನ ಪಕ್ಕದಲ್ಲಿರುವುದರಿಂದ ಈ ಜಲಪಾತಕ್ಕೆ ಹೀಗೆ ಹೆಸರು ಬಂದಿದೆ(ಚಿತ್ರಸಂಖ್ಯೆ23).

ಪ್ರವಾಸಿಗರು ಹಾಸುಬಂಡೆಯ ಮೇಲೆ ಕುಳಿತು ತಣ್ಣನೆಯ ನೀರಿನಲ್ಲಿ ಕಾಲುಗಳನ್ನು ಇಳಿಬಿಟ್ಟು ಕೆಲವರು ಸಂತೋಷಪಟ್ಟರೆ ಇನ್ನು ಕೆಲವರು ಜಲಪಾತದ ಅಡಿಯಲ್ಲಿ ಧುಮ್ಮಿಕ್ಕುವ

ಜಲಧಾರೆಗೆ ಎದುರಾಗಿ ನಿಂತು ಸ್ನಾನ ಮಾಡಿ ಸಂಭ್ರಮಿಸುತ್ತಾರೆ. ಆಬಾಲವೃದ್ಧರಾದಿಯಾಗಿ ಪ್ರತಿಯೊಬ್ಬ ತಳದವರಿಗೂ ಯಾವುದೇ ತೊಂದರೆ ಇಲ್ಲದೆ ಇಳಿಯಬಹುದಾಗಿದೆ.

ಸುತ್ತಲೂ ನಾಗಸಂಪಿಗೆ, ರಂಜದ ಮರ, ಮಾವು, ವಾಟೆ, ನೇರಳೆ, ಪನ್ನೇರಳೆ, ಮಡ್ಡಿಧೂಪ, ಹೆಬ್ಬಲಸು, ಹಲಸು, ಬೀಟೆ, ಹೊನ್ನೆ, ಬಿಳಪ, ಮಳ್ಳೆ,ಮುರುಗನ ಹುಳಿ ಹಾಗೂ ಹಲವಾರು ಜಾತಿಯ ಗಗನಚುಂಬಿ ಕಾಡುಮರಗಳಿಂದ ಸಮೃದ್ಧವಾದ ವನಸಿರಿ.

ಸಿರಿಮನೆ ಎನ್ನುವ ಊರಿನ ಪಕ್ಕದಲ್ಲಿರುವುದರಿಂದ ಈ ಜಲಪಾತಕ್ಕೆ ಹೀಗೆ ಹೆಸರು ಬಂದಿದೆಯಂತೆ. ನಿಜಕ್ಕೂ ಆ ಊರಿನಿಂದ ಇದಕ್ಕೆ ಆ ಹೆಸರು ಬಂದಿದೆಯೋ ಬಿಟ್ಟಿದೆಯೇ ಗೊತ್ತಿಲ್ಲ. ಆದರೆ ಹೆಸರೇ ಹೇಳುವಂತೆ ಇದು ಸಂಪತ್ತಿನ ಸಿರಿಮನೆಗೆ ಸೈ.. ಅಲ್ಲಿಗೆ ಹೋದರೆ ಸಾಕು ಎಲ್ಲವನ್ನೂ ಮರೆಯುತ್ತೇವೆ. ನಿಬ್ಬೆರಗಾಗಿ ತಲ್ಲೀನತೆಗೆ ಒಳಗಾಗುತ್ತೇವೆ.

ಸಿರಿಮನೆ ಎನ್ನುವುದು ಇಲ್ಲಿರುವ ಮನೆತನದ ಹೆಸರು. ಜಲಪಾತದ ಸನಿಹದಲ್ಲಿ ಬೆರಳೆಣಿಕೆಯಷ್ಟು ಮನೆಗಳಿದ್ದು, ಈ ಜಲಪಾತದಿಂದ ಈ ಊರಿನವರು ತಮ್ಮೂರಿಗೆ ಬೇಕಾಗುವಷ್ಟು ವಿದ್ಯುತ್ತನ್ನು ಪಡೆದುಕೊಳ್ಳಲು ಪರ್ಯಾಯ ವ್ಯವಸ್ಥೆಗಾಗಿ ಸಣ್ಣದಾದ ಜಲವಿದ್ಯುತ್ ಘಟಕವನ್ನು ಸ್ಥಾಪಿಸಿಕೊಂಡಿದ್ದಾರೆ. ಇದು ನಿಜಕ್ಕೂ ಮಾದರಿ ಕೆಲಸ.[15]

ಶೃಂಗೇರಿಯಿಂದ ಕಿಗ್ಗ ಎನ್ನುವ ಸ್ಥಳದವರೆಗೆ ಸಾಕಷ್ಟು ಬಸ್ಸಿನ ಸೌಲಭ್ಯವಿದೆ. ಅಲ್ಲಿಂದ ಸುಮಾರು 7 ಕಿ.ಮೀ. ದೂರದಲ್ಲಿರುವ ಈ ಜಲಪಾತಕ್ಕೆ ಹೋಗಲು ಮಣ್ಣಿನ ಕಚ್ಚಾರಸ್ತೆ ಇದೆ. ಸ್ವಂತವಾಹನವಿದ್ದರೆ ಒಳ್ಳೆಯದು. ಇಲ್ಲವೆಂದರೆ ಅಲ್ಲಿ ಸಿಗುವ ವಾಹನವನ್ನು ಬಾಡಿಗೆಗೆ ಪಡೆದುಕೊಂಡು ಹೋಗಬಹುದು.

**ಅನಾನುಕೂಲಗಳು**

1. ಸಿರಿಮನೆ ಜಲಪಾತಕ್ಕೆ ಹೋಗುವ ಪ್ರವಾಸಿಗರಿಗೆ ಶೃಂಗೇರಿಯಿಂದ ಕಿಗ್ಗದವರೆಗೆ ಹೋಗಲು ಮಾತ್ರ ಬಸ್ ಸೌಲಭ್ಯವಿದೆ. ಅಲ್ಲಿಂದ ಬಸ್ ಸೌಲಭ್ಯವಿಲ್ಲ. ಖಾಸಗಿ ವಾಹನಗಳಲ್ಲಿಯೇ ಸಂಚರಿಸಬೇಕಾಗುತ್ತದೆ.
2. ಸಿರಿಮನೆ ಜಲಪಾತದ ಸಮೀಪ ಯಾವುದೇ ಹೋಟೆಲ್, ಲಾಡ್ಜ್ ವ್ಯವಸ್ಥೆಯಿಲ್ಲ.
3. ಜಲಪಾತದ ಪ್ರವೇಶದ್ವಾರದಲ್ಲಿ ಪುರುಷರು ಹಾಗೂ ಸ್ತ್ರೀಯರಿಗೆ ಬಟ್ಟೆ ಬದಲಿಸಲು ಪ್ರತ್ಯೇಕ ಕೊಠಡಿಗಳ ಸೌಲಭ್ಯವಿದೆ, ಆದರೆ ಶೌಚಾಲಯದ ವ್ಯವಸ್ಥೆಯಿಲ್ಲ.
4. ಕಸದ ತೊಟ್ಟಿ (ಡಬ್ಬಿ)ಗಳನ್ನು ಇಟ್ಟಿಲ್ಲದ ಕಾರಣ ಕಸಕಡ್ಡಿಗಳು ಎಲ್ಲೆಂದರಲ್ಲಿ ಕಾಣಸಿಗುತ್ತವೆ.

**ಈ ಪ್ರವಾಸಿ ತಾಣವನ್ನು ಅಭಿವೃದ್ಧಿಗೊಳಿಸಲು ಕೈಗೊಳ್ಳುವ ಕ್ರಮಗಳು:**

1. ಕಿಗ್ಗದಿಂದ ಸಿರಿಮನೆ ಜಲಪಾತಕ್ಕೆ ಬಸ್‌ಸೌಲಭ್ಯ ಕಲ್ಪಿಸಬೇಕು.
2. ಶೌಚಾಲಯಗಳನ್ನು ನಿರ್ಮಿಸಬೇಕು.
3. ಹೋಟಲ್ ಹಾಗೂ ವಸತಿಗೃಹ ನಿರ್ಮಿಸಬೇಕು.

ಮೂಲ ಸೌಕರ್ಯಗಳಾದ ಸಾರಿಗೆ, ವಸತಿ (ಹೋಟೆಲ್, ನಿವಾಸ ಸ್ಥಳಗಳು) ಹಾಗೂ ಆಹಾರ ವ್ಯವಸ್ಥೆ ಪ್ರವಾಸೋದ್ಯಮವನ್ನು ಅಭಿವೃದ್ಧಿಗೊಳಿಸುವಲ್ಲಿ ಪ್ರಮುಖಪಾತ್ರವಹಿಸುತ್ತದೆ.

## ಸೂತನಬ್ಬಿ ಜಲಪಾತ

ಕುದುರೆಮುಖದಿಂದ 18 ಕಿ.ಮೀ. ಕಳಸದಿಂದ 35 ಕಿ.ಮೀ. ಶೃಂಗೇರಿಯಿಂದ 40 ಕಿ.ಮೀ. ಕಾರ್ಕಳದಿಂದ 45 ಕಿ.ಮೀ. ದಕ್ಷಿಣ ಕನ್ನಡದ ಗಡಿಗೆ 20 ಕಿ.ಮೀ ಅಂತರದಲ್ಲಿ ಸುಂದರವಾದ ನಿಸರ್ಗಧಾಮದಲ್ಲಿ ಸೂತನಬ್ಬಿ ಜಲಪಾತವಿದೆ.[16] ಈ ಜಲಪಾತದ ಪಕ್ಕದಲ್ಲಿ ಹೆದ್ದಾರಿ ಹಾದು ಹೋಗಿರುವುದು ಪ್ರವಾಸಿಗರಿಗೆ ಪ್ರಕೃತಿ ಪ್ರಿಯರಿಗೆ ಸ್ವರ್ಗದ ಬಾಗಿಲು ತೆರೆದಂತೆ ಲಂಗೂರು (ಸಿಂಗ) ಕಡಿವೆ, ಕಾಡುಕೋಣ, ಕಾಡುಹಂದಿ, ಆನೆ, ಚಿರತೆ, ಕಪ್ಪುಚಿರತೆ ಪ್ರಾಣಿಗಳನ್ನು ಕಾಣಬಹುದು. ತುಂಗಾನದಿಯ ಮೊದಲ ಜಲಪಾತ ಇದು(ಚಿತ್ರಸಂಖ್ಯೆ24).

ಸುತ್ತಲೂ ಫಲಭರಿತವಾದ ದಟ್ಟ ಮರಗಳು ಪೊದರುಗಳಿಂದ ಆವೃತವಾದ ಹಚ್ಚ ಹಸಿರು ಕಾಡಿನ ನಡುವೆ ಮಂಜಿನ ತೆರೆ ಎಳೆದಂತೆ ಜಲಪಾತದಿಂದ ಸೃಷ್ಠಿಯಾದ ಧೂಮವು ಮುಗಿಲು ಮುಟ್ಟುವ ತವಕದಲ್ಲಿ ಸುತ್ತಮುತ್ತಲೂ ಪಸರಿಸುತ್ತಾ ಕಾಮನ ಬಿಲ್ಲಿನ ಬಣ್ಣದ ಲೋಕವನ್ನು ಸೃಷ್ಠಿಸಿ ಆಕಾಶದೆಡೆಗೆ ತೇಲಿ ಹೋಗುವುದನ್ನು ನೋಡುವುದೆ ಒಂದು ಅವರ್ಣನಿಯ ಆನಂದ.

ವರಾಹ ಪರ್ವತದ ಶಿರೋಭಾಗದ ಗಂಗಾಮೂಲ ಎಂಬಲ್ಲಿ ಭದ್ರಾ ಹಾಗೂ ನೇತ್ರಾವತಿ ನದಿಗಳ ಜೊತೆಯಲ್ಲಿ ಜನ್ಮ ಪಡೆದ ಈ ತುಂಗಾ ನದಿಯು ಉತ್ತಾರಾಭಿಮುಖವಾಗಿ ಪ್ರವಹಿಸಿ ಮುಂದೆ ಎತ್ತರವಾದ ಬಂಡೆಗಳಿಂದ ಧುಮ್ಮಿಕುತ್ತಾ ಸೂತನಬ್ಬಿ ಅಥವಾ ಹನುಮನಗುಂಡಿ ಧೂರ್ತವೆನಿಸಿದೆ. ಹೊರನಾಡು ಕುದುರೆಮುಖ ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳ ಮಧ್ಯಭಾಗದಲ್ಲಿ ರುದ್ರರಮಣೀಯ ನಿಸರ್ಗಧಾಮದಲ್ಲಿರುವ ಈ ಸೂತನಬ್ಬಿ ಜಲಪಾತವು ಆ ಮಾರ್ಗವಾಗಿ ಪ್ರಯಾಣಿಸುವ ಪ್ರತಿಯೊಬ್ಬ ರಸಿಕರನ್ನು ಕೈಬೀಸಿ ಕರೆಯುತ್ತದೆ. ಕಾರ್ಕಳ, ಮಣಿಪಾಲ್, ಮಂಗಳೂರು ಉಡುಪಿ, ಬೆಂಗಳೂರು, ಮೈಸೂರು, ಚಿಕ್ಕಮಗಳೂರು ಶಿವಮೊಗ್ಗ, ಹಾವೇರಿ,

ದಾವಣಗೆರೆ ಮುಂತಾದ ಪ್ರದೇಶಗಳಿಂದ ಪ್ರತಿದಿನವೂ ಪ್ರವಾಸಿಗರು ಪ್ರಕೃತಿಪ್ರಿಯರು ವಿದ್ಯಾರ್ಥಿಗಳು ಬರುತ್ತಲೇ ಇರುತ್ತಾರೆ.

**ಮಾಣಿಕ್ಯಧಾರಾ ಜಲಪಾತ**

ಈ ಜಲಪಾತವು ಬಾಬಬುಡನ್‌ಗಿರಿಗೆ ಮೂರು ಕಿ.ಮೀ. ದೂರದಲ್ಲಿದೆ(ಚಿತ್ರಸಂಖ್ಯೆ25). ಇಲ್ಲಿ ನೀರು 50 ಅಡಿ ಎತ್ತರದಿಂದ ಹನಿಹನಿಯಾಗಿ ಬೀಳುತ್ತದೆ. ಅದೊಂದು ವಿಸ್ಮಯಕಾರಿಯಾದ ಲೋಕವೇ ಸರಿ. ತಲೆಯೆತ್ತಿ ನೋಡಿದರೆ ವನರಾಶಿಯ ಮಧ್ಯದಲ್ಲೊಂದು ರಂದ್ರ ಕೊರೆದಂತೆ ನೀಲಾಕಾಸ ಮಾಯಾಕನ್ನಡಿಯಲ್ಲಿ ಕಾಣುವಂತೆ ತೇಲಿ ತೇಲಿ ಸಾಗುತ್ತಿರುವ ಮುಗಿಲುಗಳು. ಸೂರ್ಯಚಂದ್ರರ ಪರ್ಯಾಟನೆ ಸುತ್ತಲೂ ಬೆಸೆದು ಬೆಳೆಸಿರುವ ಗಗನಚುಂಬಿ ಹೆಮ್ಮರಗಳ ಹಚ್ಚಹಸುರಿನ ನಡುವೆ ಕೇಳಿಬರುವ ಮಧುರ ಝೇಂಕಾರ ಮಂಗಮುಷ್ಯಗಳ ಚೆಲ್ಲಾಟ, ಕಿತ್ತಾಟ ಚೀರಾಟ ದಂಡಾರಣ್ಯದ ನಡುವೆ ಸ್ವರ ಏರಿಸುತ್ತಲೇ ಉಳಿಯುತ್ತಿರುವ ಅಪರಿಚಿತ ಹಕ್ಕಿಯ ಧ್ವನಿಯಲ್ಲಿ ಏನೋ ಎಚ್ಚರಿಕೆಯ ಸೂಚನೆ. ಕ್ಷಣನೀರವ ಮೌನ, ಮರುಕ್ಷಣವೇ ಹಲವಾರು ಪಕ್ಷಿಗಳು ತಮ್ಮ ತಮ್ಮಲ್ಲಿ ಸಂಭವಿಸಿಕೊಳ್ಳುತ್ತಿರುವ ಪರಿ. ಮೌನವನ್ನು ಮುರಿದು ತಮ್ಮತ್ತ ಗಮನ ಸೆಳೆಯುತ್ತದೆ. ಅನತಿ ದೂರದಲ್ಲಿ ಸುಮಾರು 50 ಅಡಿಗಳ ಎತ್ತರದಿಂದ ಧಾರೆ ಗೋಡೆಯಂತಹ ಬಲಿಷ್ಠವಾದ ಬಂಡೆಗಳ ಒಡಲಲ್ಲಿ ಸೀಳುಕೊಂಡು ಧುಮ್ಮಿಕ್ಕುತ್ತಿರುವ ಜಲಧಾರೆ.[17]

**ಐತಿಹ್ಯ:** ನೆಲ್ಲಿಕಾಯಿತೀರ್ಥ ಅಥವಾ ಮಾಣಿಕ್ಯಧಾರಾ ಜಲಪಾತ ಪಾಂಡವರಲೊಬ್ಬನಾದ ಭೀಮನು ವನವಾಸದ ಸಂದರ್ಭದಲ್ಲಿ ತನ್ನ ತಾಯಿಯಾದ ಕುಂತಿಯ ಬಾಯಾರಿಕೆಯನ್ನು ನೀಗಿಸಲು ದೊಡ್ಡದಾದ ಕಲ್ಲು ಬಂಡೆಗೆ ತನ್ನ ಗದೆಯಿಂದ ಹೊಡೆದಾಗ ನೀರು ನೆಲ್ಲಿ ಹಣ್ಣಿನ ಗಾತ್ರದಲ್ಲಿ ಹೊರ ಬರುತ್ತದೆ. ಆ ನೀರಿನಿಂದ ತನ್ನ ತಾಯಿಯ ಬಾಯಾರಿಕೆಯನ್ನು ನೀಗಿಸಿದನಂತೆ. ಆದ್ದರಿಂದ ಈ ಜಲಪಾತಕ್ಕೆ ಮಾಣಿಕ್ಯಧಾರ ಅಥವಾ ನೆಲ್ಲೆಕಾಯಿತೀರ್ಥ ಎಂಬ ಹೆಸರು ಬಂದಿತ್ತು ಎಂದು ಹೇಳಬಹುದಾಗಿದೆ.

ಎಂಥಾದ್ದೇ ಬರಗಾಲವಿದ್ದಾಗಲೂ ನೀರು ಈ ಜಲಪಾತದಲ್ಲಿ ಹನಿ ಹನಿಯಾಗಿ ಬೀಳುವುದು ಸೋಜಿಗದ ಸಂಗತಿ. ಈ ಜಲಪಾತದ ಬಳಿ ಒಂದು ಗುಹೆ ಇದೆ, ಸ್ಥಳೀಯರ ನಂಬಿಕೆಯಂತೆ ದತ್ತಾತ್ರೇಯರು ಈ ಸ್ಥಳದಲ್ಲಿ ಘೋರ ತಪಸ್ಸನ್ನು ಆಚರಿಸಿದ್ದರೆಂಬ ಪ್ರತೀತಿ ಇದೆ. ಈ ಜಲಪಾತಕ್ಕೆ ಬರುವ ಪ್ರವಾಸಿಗರು ಈ ಜಲಪಾತದಲ್ಲಿ ಸ್ನಾನ ಮಾಡಿದರೆ ಅನೇಕ ದೋಷಗಳು

ಪಾಪಗಳು ಕಳೆಯುತ್ತವೆ ಎಂಬ ನಂಬಿಕೆಯಿಂದ ಯಾವುದೇ ಜಾತಿ, ಕೋಮು, ಧರ್ಮದ ಭಾವನೆಯಿಲ್ಲದೆ ಎಲ್ಲಾ ವರ್ಗದ ಜನರು ಮೇಲಿನಿಂದ ಧುಮ್ಮಿಕ್ಕುವ ನೀರಿನಿಂದ ಪವಿತ್ರ ಸ್ನಾನ ಮಾಡುತ್ತಾರೆ(ಚಿತ್ರಸಂಖ್ಯೆ26). ಜಲಪಾತದ ಆಸು ಪಾಸಿನಲ್ಲಿ ಬಿದ್ದಿರುವ ಹಳೆಯ ಬಟ್ಟೆಗಳನ್ನು ಕಂಡು ಆಶ್ಚರ್ಯಗೊಂಡು ಸ್ಥಳೀಯರನ್ನು ವಿಚಾರಿಸಿದಾಗ “ತಾವು ಧರಿಸಿದ ಅಂಗಿಯನ್ನು ಸ್ನಾನ ಮಾಡಿದ ನಂತರ ಅಲ್ಲೇ ಬಿಟ್ಟು ಹೋದರೆ ತಾವು ಮಾಡಿದ ಪಾಪ ಕಳೆಯುತ್ತವೆ ಎಂಬ ನಂಬಿಕೆ ಜನರಲ್ಲಿರುವುದು ಕಂಡುಬಂತು.

**ಅಭಿವೃದ್ಧಿಗೊಳಿಸಲು ಕೈಗೊಳ್ಳುವ ಕ್ರಮಗಳು**

1. ಈ ಜಲಪಾತದಲ್ಲಿ ಸ್ನಾನಮಾಡುವ ಜನರು ತಮ್ಮ ಮೈಮೇಲೆತೊಟ್ಟ ವಸ್ತ್ರಗಳಲ್ಲಿ ಯಾವುದಾದರೊಂದನ್ನು ಸ್ನಾನದ ಬಳಿಕ ಜಲಪಾತದ ಆಸುಪಾಸಿನಲ್ಲಿ ಬಿಸಾಡಿ ಹೋಗುತ್ತಿರುವುದರಿಂದ ಈ ತ್ಯಾಜ್ಯ ಇಡೀ ಪರಿಸರವನ್ನು ಹದಗೆಡಿಸಿದೆ, ಇದನ್ನು ತಪ್ಪಿಸಬೇಕು ಇಲ್ಲವೇ ಯಾವುದಾದರೂ ಒಂದು ಪ್ರತ್ಯೇಕ ಕಸದ ಬುಟ್ಟಿಯಲ್ಲಿ ಇಡಲು ಸೂಚನಾ ಫಲಕವನ್ನು ಇಡಬೇಕಾಗುತ್ತದೆ.
2. ಜಲಪಾತದ ಆವರಣದಲ್ಲಿ ಸ್ತ್ರೀಯರು, ಪುರುಷರು ಸ್ನಾನದ ಬಳಿಕ ಬಟ್ಟೆ ಬದಲಿಸಲು ಪ್ರತ್ಯೇಕ ಕೊಠಡಿಗಳನ್ನು ನಿರ್ಮಿಸಿರುವುದು ತುಂಬಾ ಉತ್ತಮವಾದ ಕೆಲಸ, ಹಾಗೆಯೇ ಅದರ ಬಳಿಯಲ್ಲಿಯೇ ಶೌಚಾಲಯ ನಿರ್ಮಾಣವನ್ನು ನಿರ್ಮಿಸಬೇಕಾಗಿದೆ.

## ಹೆಬ್ಬೆ ಜಲಪಾತ

ಹೆಬ್ಬೆ ಜಲಪಾತ ಕೆಮ್ಮಣ್ಣುಗುಂಡಿಯ ಸುಂದರ ಗಿರಿಧಾಮಗಳ ದಟ್ಟ ಹಸುರಿನ ನಟ್ಟ ನಡುವೆ ಮನಸೂರೆಗೊಳ್ಳುವ ಸುಂದರವಾದ ತಾಣವಿದೆ. ಅದೇ ಚಾರಣಪ್ರಿಯರ ಸ್ವರ್ಗ ಎನ್ನಬಹುದಾದ ಜಲಪಾತ(ಚಿತ್ರಸಂಖ್ಯೆ27). ಇಲ್ಲಿಗೆ ನಡೆದು ಬರಬಹುದು. ಅಥವಾ ಖಾಸಗೀ ವಾಹನಗಳಲ್ಲಿ ಬರಬಹುದು. ಆದರೆ 4 ಚಕ್ರದ ಜೀಪ್‌ಗಳಲ್ಲಿ ಪ್ರಯಾಣಿಸುವುದು ಸುರಕ್ಷಿತ.

ಕೆಮ್ಮಣ್ಣುಗುಂಡಿಯಿಂದ ಕೇವಲ 8 ಕಿ.ಮೀ.ಗಳಷ್ಟು ಅಂತರದಲ್ಲಿರುವ ಮನಮೋಹಕ ಹೆಬ್ಬೆ ಜಲಪಾತಕ್ಕೆ ಬರಬೇಕಾದರೆ ಎರಡು ಕಡೆ ಕಾಫಿಯ ತೋಟಗಳು, ಮುಗಿಲು ಮುಟ್ಟುವ ಮರಗಿಡಗಳು ಸುತ್ತಲೂ ಹಸಿರು ಚ್ಛಾದಿತ ಪ್ರದೇಶ ಹಾಗೂ ಬೆಟ್ಟ ಗುಡ್ಡಗಳನ್ನು ಏರಿ ಇಳಿದು ಬರಬೇಕು. ಅಲ್ಲಿಗೆ ಬಂದು ಖಾಸಗೀ ಕಾಫಿತೋಟದ ಪಕ್ಕದಲ್ಲಿ ವಾಹನಗಳನ್ನು ನಿಲ್ಲಿಸಿ ಸುಮಾರು ಅರ್ಧ ಕಿ.ಮೀ. ನಷ್ಟು ದೂರ ಕ್ರಮಿಸಿದರೆ ಅಲ್ಲಿಂದ ಈ ಸುಂದರತಾಣಕ್ಕೆ ಬರಬಹುದು.

ಕಣ್ಮನ ಸೆಳೆಯುವ ಜಲಪಾತ ದೂರದಿಂದಲೇ ಪ್ರವಾಸಿಗರನ್ನು ಸೂಜಿಗಲ್ಲಿನಂತೆ ಆಕರ್ಷಿಸುತ್ತದೆ. ಆಕಾಸಗಂಗೆಯಂತೆ ಬೆಳ್ನೊರೆ ಗರೆಯುತ್ತಾ ಪಾತಾಳಕ್ಕೆ ಇಳಿಯುತ್ತಿರುವ ದೃಶ್ಯ ಭಗೀರಥ ಗಂಗೆಯನ್ನು ಹರನ ಮುಡಿಯಿಂದ ಇಳಿಸಿದ ಕಥೆ ನೆನಪಿಗೆ ತರುತ್ತದೆ. ದೂರದಿಂದ ಏಕವಾಗಿ ಕಾಣುವ ಈ ಜಲಪಾತ ಎರಡು ಮಜಲುಗಳಲ್ಲಿ ಧುಮ್ಮಿಕ್ಕುತ್ತದೆ. ಈ ಸ್ಥಳದಲ್ಲಿ ನೀರು 168 ಮೀಟರ್ (550 ಅಡಿಗಳು) ಎರಡು ಹಂತದಲ್ಲಿ ಕೆಳಗೆ ಬೀಳುತ್ತದೆ(ಚಿತ್ರಸಂಖ್ಯೆ28). ಒಂದನ್ನು ದೊಡ್ಡಹೆಬ್ಬೆ ಹಾಗೂ ಮತ್ತೊಂದನ್ನು ಚಿಕ್ಕಹೆಬ್ಬೆ ಎಂದು ಕರೆಯಲಾಗುತ್ತದೆ. ನಳನಳಿಸುತ್ತಿರುವ ಹಸಿರನ್ನು ಹೊತ್ತು ಮುಗಿಲಿನ ಜೊತೆ ಸರಸವಾಡುತ್ತಿರುವ ಸುಂದರ ಗಿರಿಧಾಮಗಳ ನಡುವೆ ವರ್ಷದ ಎಲ್ಲ ಋತುಗಳಲ್ಲೂ ಎಡೆಬಿಡದೆ ಆಕಾಶದಿಂದ ಧರೆಗಿಳಿದ ಗಂಗೆಯಂತೆ ಬೆಳ್ನೊರೆಗರೆಯುತ್ತಾ ಧುಮ್ಮಿಕ್ಕುತ್ತಿರುವ ಹೆಬ್ಬೆ ಹಾಗೂ ಕಲ್ಲತ್ತಗಿರಿಯ ಜಲಪಾತಗಳು ಬಯಲು ಸೀಮೆಯೆ ಬಿಸಿಗಾಳಿ ಹಾಗೂ ಬಿಸಿಲ ಝಳದಲ್ಲಿ ಬೆಂದು ಬಸವಳಿದು ಬರುವ ಪ್ರವಾಸಿಗರಿಗೆ ತಂಪಿನ ಸಿಂಚನಗೈದು ಆಹ್ಲಾದತೆಯ ಆನಂದವನ್ನು ನೀಡುವ ನವೋಲ್ಲಾಸದಿಂದ ಪುಳಕಿತರನ್ನಾಗಿಸಿ ಪರಿವರ್ತಿಸುವ ಮಾಂತ್ರಿಕ ಸ್ಪರ್ಶವೀಯುವ ಈ ಚೇತೋಹಾರಿ ತಾಣಗಳಿಗೆ ಚಾರಣಪ್ರಿಯರು, ಪ್ರಕೃತಿಪ್ರಿಯರು ಬೆಳಿಗ್ಗೆ ಬಂದು ಸಂಜೆ ಹೋಗಬಹುದಾಗಿದೆ. ಪ್ರವಾಸಿಗರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚುತ್ತಿರುವುದು ಈ ತಾಣದ ರಮ್ಯತೆಗೆ ಸಾಕ್ಷ್ಯ ಆಗಿದೆ.

**ಪ್ರವಾಸಿಗಿರುವ ಅನಾನುಕೂಲಗಳು**

1. ಪ್ರವಾಸಿಗರಿಗೆ ಜಲಪಾತದ ಸಮೀಪ ಹೋಟೆಲ್ ವ್ಯವಸ್ಥೆ ಇರಬೇಕಿತ್ತು.
2. ರಕ್ಷಣ ದಳದವರು ಇದ್ದಿದ್ದರೇ ಮಹಿಳೆಯರಿಗೆ ಸುರಕ್ಷಿತವಾದ ತಾಣವಾಗುತ್ತಿತ್ತು.
3. ಸ್ತ್ರೀಯರಿಗೆ ಬಟ್ಟೆ ಬದಲಿಸುವ ವ್ಯವಸ್ಥೆ ಇಲ್ಲ.

## ಕಲ್ಲತ್ತಗಿರಿ ಜಲಪಾತ

ಕಲ್ಲತ್ತಗಿರಿಗೆ ಬರಲು ಬೆಂಗಳೂರು, ಮೈಸೂರು, ಶಿವಮೊಗ್ಗ ಯಾವ ಕಡೆಯಿಂದ ಬಂದರೂ ತರೀಕರೆಯಿಂದ ಅಥವಾ ಬೀರೂರುಗಳ ಮಾರ್ಗವಾಗಿ ಲಿಂಗದಹಳ್ಳಿಯನ್ನು ತಲುಪಬೇಕು. ಅಲ್ಲಿಂದ ಕೇವಲ 8 ಕಿ.ಮೀ.ಗಳಷ್ಟು ಅಂತರದಲ್ಲಿ ಕಲ್ಲತ್ತಗಿರಿಯ ಜಲಾಪಾತವಿದೆ(ಚಿತ್ರಸಂಖ್ಯೆ29). ಬೀರೂರಿನವರೆಗೆ ರೈಲಿನಲ್ಲಿಯೂ ಕೂಡ ಬರಬಹುದಾಗಿದೆ. ಇಲ್ಲಿಗೆ ಬರಲು ಬಸ್ ಸೌಕರ್ಯವುಂಟು. ಆಟೋ, ಟ್ಯಾಕ್ಸಿಯಲ್ಲೂ ಬರಬಹುದಾಗಿದೆ. ಸ್ವಂತ

ವಾಹನಗಳಲ್ಲೂ ಬರಬಹುದಾಗಿದೆ. ರಸ್ತೆ ಸುಸ್ಥಿತಿಯಲ್ಲಿದ್ದು, ಇಕ್ಕೆಲುಗಳಲ್ಲಿ ಬೆಳೆದಿರುವ ಕಾಫಿ ತೋಟಗಳು, ಗಗನಚುಂಬಿ ಮರಗಳ ನಡುವೆ ಅಂಕುಡೊಂಕಾದ ರಸ್ತೆಯಲ್ಲಿ ನುಸುಳಿ ಬರುವುದೇ ಒಂದು ಆನಂದದಾಯಕ ಹಾಗೂ ಉಲ್ಲಾಸದ ಪಯಣವೆನ್ನಬಹುದು. ವಾರಾಂತ್ಯದ ದಿನಗಳಲ್ಲಿ ದೂರದ ಬೆಂಗಳೂರು, ಮೈಸೂರು, ದಾವಣಗೆರೆ, ಶಿವಮೊಗ್ಗ, ಗುಲ್ಬರ್ಗ, ರಾಯಚೂರು, ಧಾರವಾಡಗಳಿಂದಲೂ ಪ್ರವಾಸಿಗರು ಬರುವುದುಂಟು.

ಕಲ್ಲತ್ತಗಿರಿಯು ಸಮುದ್ರ ಮಟ್ಟಕ್ಕಿಂತ ಸುಮಾರು 4,832 ಅಡಿಗಳಷ್ಟು ಎತ್ತರದ ಗಿರಿಶೃಂಗದಿಂದ ಇಳಿಯುವ ನೂರಾರು ತಿರುವುಗಳನ್ನು ಸುತ್ತುತ್ತಾ ಹಸುರಿನ ಸಿರಿಯ ನಡುವೆ ಇಳಿಯುತ್ತಿರುವಂತೆಯೇ ಮುಖ್ಯ ರಸ್ತೆಯಿಂದ ಬಲಕ್ಕೆ ತಿರುಗಿ ಸ್ವಲ್ಪದೂರ ಕ್ರಮಿಸಬೇಕು. ಆಕಾಶಕ್ಕೆ ಮುಖ ಮಾಡಿ ನಿಂತ ಬೆಟ್ಟದ ಒಡಲಲ್ಲಿ ಮೇಲಿನಿಂದ ಬಾರಿಬಾರಿ ಕಲ್ಲು ಬಂಡೆಗಳ ಸಂದಿಗೊಂದಿಗಳಲ್ಲಿ ನುಸುಳುತ್ತಾ ಕೆಲವೊಮ್ಮೆ ಧುಮುಕುತ್ತಾ ಸಾಗಿ ಬರುವ ಕಾಳಹಸ್ತಿ ಜಲಪಾತದ ಸದ್ದು ಬೃಹದಾಕಾರದ ಬಂಡೆಗಳ ಮೇಲೆ ನಿಂತು ಗಜಶಿಖರಗಳ ನಡುವಿನಿಂದ ಧಾರೆಧಾರೆಯಾಗಿ ದುಮ್ಮಿಕ್ಕುತ್ತಿರುವ ಜಲಪಾತವನ್ನು ಕಾಣಬಹುದು. ಸಾವಿರಾರು ಜನ ಪ್ರವಾಸಿಗರು ಲಿಂಗಭೇದವಿಲ್ಲದೆ ಆಬಾಲವೃದ್ದರಾಗಿ ಜಲಧಾರೆಯಲ್ಲಿ ಮಿಂದು ಹತ್ತಿರವೇ ಇರುವ ಒಂದೇ ಬೃಹತ್ ಬಂಡೆಯಲ್ಲಿ ಕೊರೆಯಲಾಗಿರುವ ಶ್ರೀ ವೀರಭದ್ರನ ದೇವಾಲಯಕ್ಕೆ ತೆರಳಿ ಪೂಜೆ ಸಲ್ಲಿಸುತ್ತಿರುವುದನ್ನು ಕಾಣಬಹುದು. ಜನರ ಕೊಳೆಯನ್ನು ತೊಳೆದು ಅವರಿಗೆ ಪುನೀತರನ್ನಾಗಿಸುವ ಜಲ ಅಷ್ಟೇ ವೇಗವಾಗಿ ಹರಿಯುತ್ತಾ ಧುಮುಕುತ್ತಾ ಗಿರಿಯ ತಳಭಾಗದ ಕಡೆಗೆ ಧಾವಿಸಿ ಕಾನನದ ನಡುವಿನ ಕಮರಿನಲ್ಲಿ ಮಾಯವಾಗಿ ಬಿಡುತ್ತದೆ.

ದಕ್ಷಬ್ರಹ್ಮನ ಯಜ್ಞವನ್ನು ನಾಶಪಡಿಸಲು ಶಿವನಿಂದ ಸೃಷ್ಟಿಸಲ್ಪಟ್ಟ ವೀರಭದ್ರನು ತನ್ನ ಕಾರ್ಯವನ್ನು ಮುಗಿಸಿ ರೋಷಭೀಷಣನಾಗಿದ್ದಾಗ ಅವನ ಕೋಪವನ್ನು ಶಮನಗೊಳಿಸುವುದಕ್ಕಾಗಿ ಸೃಷ್ಟಿಯಾದ ನದಿಯೇ ಕಾಳಿನದಿ ಮತ್ತು ಅದರ ಜಲಪಾತ, ಇದನ್ನು ಕಾಳಹಸ್ತಿ ಜಲಪಾತ, ಕಲ್ಲತ್ತಗಿರಿ ಜಲಪಾತ, ಜಲಮೇಲು ಗಿರಿ ಎಂತಲೂ ಕರೆಯುತ್ತಾರೆ.

ಶಾಂತನಾದ ವೀರಭದ್ರ ಮೊದಲು ಪೂಜೆಗೊಂಡ ಸ್ಥಳವೇ ಇದೆಂದು ಕೆಲವರ ನಂಬಿಕೆ. ಹಾಗೆಯೇ ವೀರಭದ್ರ ಇತರ ಗಣಗಳ ಜೊತೆಯಲ್ಲಿ ಐಕ್ಯನಾದದ್ದು ಇದೇ ಗಿರಿಯಲ್ಲಿ ಎಂದು ಕೆಲವು ಭಕ್ತರ ಅಭಿಪ್ರಾಯ. ಇಲ್ಲಿಗೆ ಜನರು ಎಡೆಬಿಡದೆ ಬರುತ್ತಾರೆ, ಒಂದು ಕಡೆ ಪ್ರಕೃತಿ ಮಾತೆಯ ಮಡಿಲಲ್ಲಿ ವಿಹರಿಸುವ ಹಂಬಲವಾದರೆ, ಮತ್ತೊಂದು ಕಡೆ ಎಲ್ಲ ಕಾಲದಲ್ಲಿಯೂ ಧುಮ್ಮಿಕ್ಕುತ್ತಿರುವ ಜಲಧಾರೆಯಲ್ಲಿ ಮೀಯುವ ಆನಂದ.

**ಐತಿಹ್ಯ:** ಈ ಗಿರಿಯಲ್ಲಿ ಮುನಿ ಅಗಸ್ತ್ಯರ ಆಶ್ರಮವಿತ್ತೆಂದು ಹೇಳಲಾಗಿದೆ. ಅಗಸ್ತ್ಯರ ಕಥೆಯನ್ನು ವೀರಭದ್ರನೊಂದಿಗೆ ಥಳಕು ಹಾಕುತ್ತದೆ. ನೈಸರ್ಗಿಕ ಸೌಂದರ್ಯದ ಮಧ್ಯೆ ನೀರು ನಾಲ್ಕುನೂರು ಮೀಟರ್‌ಗಳಿಗಿಂತ ಎತ್ತರದಿಂದ ಧುಮ್ಮಿಕ್ಕುತ್ತದೆ. ದೊಡ್ಡ ಬಂಡೆಗಳ ಮಧ್ಯೆ ವೀರಭದ್ರ ದೇವಾಲಯವಿದೆ. ವಿಜಯನಗರ ಅರಸರ ಆಳ್ವಿಕೆಯಲ್ಲಿ ಈ ದೇವಾಲಯವನ್ನು ಕಟ್ಟಿಸಲಾಗಿದೆ, ಹೊರಗಡೆಯಿಂದ ನೋಡಿದರೆ ಇದು ಗುಹೆಯಂತೆ ತೋರುತ್ತದೆ. ದೇವಾಲಯದ ಹೊರಗಡೆ ಬಂಡೆಗಳ ಮೇಲೆ ಮೂರು ಆನೆಗಳನ್ನು ಕೆತ್ತಲಾಗಿದೆ. ಈ ಮೂರ್ತಿಗಳಿಗೆ ಮೇಲಿಂದ ನೀರು ಧುಮ್ಮಿಕ್ಕುತ್ತದೆ. ಇಲ್ಲಿಗೆ ಬರುವ ಪ್ರವಾಸಿಗರು ಈ ಧುಮ್ಮಿಕ್ಕುವ ನೀರಿನಲ್ಲಿ ಸ್ನಾನ ಮಾಡುತ್ತಾರೆ.

ಪ್ರತಿ ದಿನ ಈ ಸ್ಥಳಕ್ಕೆ 200–300 ರಷ್ಟು ಪ್ರವಾಸಿಗರು ಬರುತ್ತಾರೆ. ಪ್ರತಿ ವರ್ಷ ಏಪ್ರಿಲ್–ಮೇ ತಿಂಗಳಲ್ಲಿ ವೀರಭದ್ರ ಜಾತ್ರೆಯು ಮೂರು ದಿನಗಳ ಕಾಲ ನಡೆಯುವುದರಿಂದ ಸಾವಿರಾರು ಪ್ರವಾಸಿಗರು ಆ ದಿನದಲ್ಲಿ ಆಗಮಿಸುತ್ತಾರೆ.

ಕಲ್ಲತ್ತಗಿರಿಗೆ ಬರುವ ಪ್ರವಾಸಿಗರು ತಾವು ತಿನ್ನಲು ಮತ್ತು ಕುಡಿಯಲು ತಂದ ತಿಂಡಿ ತಿನಿಸುಗಳ ಪ್ಲಾಸ್ಟಿಕ್ ಡಬ್ಬಿಗಳನ್ನು ಹಾಗೂ ಪೇಪರ್‌ಗಳನ್ನು ಎಲ್ಲೆಂದರಲ್ಲಿ ಬೀಸಾಡಿ ಹೋಗುವುದರಿಂದ ಸುತ್ತಮುತ್ತಲಿನ ಪರಿಸರ ಹಾಳಾಗುತ್ತದೆ, ಹಾಗಾಗಿ ಸ್ವಚ್ಚತೆ ಕಾಪಾಡುವಲ್ಲಿ ಕ್ರಮ ಕೈಗೊಳ್ಳಬೇಕು.

ಪ್ರವಾಸಿ ತಾಣದ ಆವರಣದಲ್ಲಿ ಹೋಟೆಲ್, ಟೀ ಸ್ಟಾಲ್, ಪೂಜಾ ಸಾಮಾಗ್ರಿಗಳ ಅಂಗಡಿ ಮಳಿಗೆಗಳು ಇರುವುದರಿಂದ ಈ ಪ್ರವಾಸಿ ತಾಣವು ಹಲವರಿಗೆ ಉದ್ಯೋಗವನ್ನು ಕಲ್ಪಿಸಿದೆ.

## ಸೀತಾಳಯ್ಯನಗಿರಿ

ಚಿಕ್ಕಮಗಳೂರಿನಿಂದ ತರೀಕೆರೆಗೆ ಹೋಗುವ ದಾರಿಯಲ್ಲಿ 6 ಕಿ.ಮೀ ಗಳಷ್ಟು ಕ್ರಮಿಸಿದರೆ ಕೈಮರ ಸಿಗುತ್ತದೆ.ಅಲ್ಲಿಂದ ಎಡಕ್ಕೆ ತಿರುಗಿ ಬಾಬಾಬುಡನ್‌ಗಿರಿಗೆ ಹೋಗುವ ರಸ್ತೆಯಲ್ಲಿ 10 ಕಿ.ಮೀ. ಗಳಷ್ಟು ಕ್ರಮಿಸಿದರೆ ಮುಂದಿರುವ ಬೆಟ್ಟದ ಬುಡದ ಎಡಭಾಗದಲ್ಲೊಂದು ಸೀತಾಳಯ್ಯನ ಗಿರಿ ಮತ್ತು ಮುಳ್ಳಯ್ಯನ ಗಿರಿಗೆ ಹೋಗುವ ದಾರಿ ಎನ್ನುವ ನಾಮಫಲಕ ಕಾಣುತ್ತದೆ(ಚಿತ್ರಸಂಖ್ಯೆ30).

ಅಲ್ಲಿಂದ ಎಡಕ್ಕೆ ತಿರುಗಿ ರಸ್ತೆಗುಂಟ ಮುಂದಕ್ಕೆ ಸಾಗಿದರೆ ಅಂಕುಡೊಂಕಾದ ರಸ್ತೆ ಏರುಮುಖವಾಗುತ್ತ ಹಲವಾರು ತಿರುವುಗಳನ್ನು ಪಡೆದುಕೊಳ್ಳುತ್ತ ಸಾಗುತ್ತದೆ. ಹೀಗೆ ಸುಮಾರು 8 ಕಿ.ಮೀ ಕ್ರಮಿಸಿದ ಮೇಲೆ ಒಂದು ವಿಶಾಲವಾದ ಪ್ರದೇಶ ಸಿಗುತ್ತದೆ. ಎರಡು ವಿಮಾನ ಗೋಪುರಗಳುಳ್ಳ ಸೀತಾಳಯ್ಯನ ದೇವಾಲಯ ನಮ್ಮನ್ನು ದೂರದಿಂದಲೇ ಸ್ವಾಗತಿಸುತ್ತದೆ(ಚಿತ್ರಸಂಖ್ಯೆ31). ಇದು ಸಮುದ್ರ ಮಟ್ಟಕ್ಕಿಂತ ಸುಮಾರು 4,347[19] ಅಡಿಗಳಷ್ಟು ಎತ್ತರದಲ್ಲಿದ್ದು ರುದ್ರರಮಣೀಯ ನಿಸರ್ಗಧಾಮ ಆಗಿದೆ. ಒಂದು ಗರ್ಭಗುಡಿಯಲ್ಲಿ ಪಾಣಿಪೀಠದ ಮೇಲೆ ಸುಂದರವಾದ ಶಿವಲಿಂಗವಿದ್ದು ಹೊನ್ನಿನ ಲೇಪನದ ಸುಂದರವಾದ ಶಿವನ ಮುಖವಾಡವನ್ನು ತೊಡಿಸಲಾಗಿದೆ(ಚಿತ್ರಸಂಖ್ಯೆ32). ಪೀಠದ ತಳಭಾಗದಲ್ಲಿ ಎಲ್ಲ ಕಾಲಮಾನದಲ್ಲೂ ಜಿನುಗುತ್ತಿರುವ ಗಂಗೆ, ಇದನ್ನೆ ಭಕ್ತರಿಗೆ ತೀರ್ಥವೆಂದು ಹಂಚಲಾಗುತ್ತದೆ.

ಪಕ್ಕದ ಮತ್ತೊಂದು ಗರ್ಭಗುಡಿಯಲ್ಲಿ ವೀರಭದ್ರ ವಿರಾಜಮಾನನಾಗಿದ್ದಾನೆ. ಇಲ್ಲಿ ದೇವಾಲಯದ ಸುತ್ತಲೂ ಎತ್ತರದ ಪೌಳಿ ಇದ್ದು, ಒಳಾಂಗಣದಲ್ಲಿ ಪ್ರದಕ್ಷಿಣಾ ಪಥವಿದೆ. ಇಲ್ಲಿರುವ ವಿಶಾಲವಾದ ಬಯಲಿನಲ್ಲಿ ನಿಂತು ಸುತ್ತಲೂ ಒಮ್ಮೆ ಕಣ್ಣಾಡಿಸಿದರೆ ದೃಷ್ಟಿಗೆ ನಿಲುಕುವಷ್ಟು ಅಸಂಖ್ಯ ಪ್ರಭೇದದ ಸಸ್ಯರಾಶಿಯ ತಂಪು ಹಸಿರಿನ ಮೈಸಿರಿ. ನೀಲಿಯನ್ನು ಹೊದ್ದ ಪರ್ವತದ ಸಾಲು ಸಾಲು ಪ್ರವಾಸಿಗರನ್ನು ಮೂಕ ವಿಸ್ಮಿತರನ್ನಾಗಿ ಮಾಡುತ್ತದೆ. ಈ ಸುಂದರ ಗಿರಿಧಾಮವನ್ನು ವೀಕ್ಷಿಸಲು ವರ್ಷವಿಡೀ ಪ್ರವಾಸಿಗರ ದಂಡು, ಜೊತೆಗೆ ಶೈಕ್ಷಣಿಕ ಪ್ರವಾಸ ಕೈಗೊಳ್ಳುವ ವಿದ್ಯಾರ್ಥಿಗಳ ಹಿಂಡು ಅವರೆಲ್ಲರೂ ವೈವಿಧ್ಯಮಯ ಪ್ರಕೃತಿಯನ್ನು ಕಂಡು ಧನ್ಯರಾಗುತ್ತಾರೆ.

## ಹೊನ್ನಮ್ಮನ ಜಲಪಾತ

ಜಿಲ್ಲಾ ಕೇಂದ್ರ ಚಿಕ್ಕಮಗಳೂರು ನಗರದಿಂದ ಕೆಮ್ಮಣ್ಣುಗುಂಡಿಗೆ ಹೋಗುವ ಮಾರ್ಗದಲ್ಲಿ ಸುಮಾರು 32 ಕಿ.ಮೀ ಅಂತರದಲ್ಲಿ ಬಾಬಾಬುಡನ್‌ಗಿರಿ ಶಿಖರವಿದೆ. ಚಿಕ್ಕಮಗಳೂರಿನಿಂದ 6 ಕಿ.ಮೀ ಗಳಷ್ಟು ದೂರ ಕ್ರಮಿಸಿದರೆ ಕೈಮರ ಸಿಗುತ್ತದೆ. ಅಲ್ಲಿಂದ ಎಡಕ್ಕೆ ತಿರುಗಿ ನೂರಾರು ತಿರುವುಗಳ ಮೂಲಕ ಪ್ರವಾಸಿಗರನ್ನು ಬಾಬಾಬುಡನ್‌ಗಿರಿಗೆ ಕೊಂಡೊಯ್ಯುತ್ತದೆ. ದಾರಿಯಲ್ಲಿ ಗೋಡೆಯಂತೆ ಎದುರಾಗುವ 'ವೀಕ್ಷಣ ಬಿಂದು' (View Point) ಸಿಗುತ್ತದೆ. ಇಲ್ಲಿಂದ ತುಸು ದೂರ ಸಾಗಿದರೆ ಒಂದು ತಿರುವಿನಲ್ಲಿ ತನ್ನೆಡೆಗೆ ಸೆಳೆಯುವ ಅಪರೂಪದ ಜಲಪಾತ (ಹೊನ್ನಮ್ಮನಾಳ) ಹೊನ್ನಮ್ಮನ ಜಲಪಾತ[20] ಬೆಳ್ನೊರೆಗರೆಯುತ್ತಾ ಆಕಾಶದಿಂದ ಪಾತಾಳಕ್ಕೆ

ಇಳಿಯುತ್ತಿರುವ ಭಗೀರಥನ ಜಟಿಯಿಂದ ಸುರಿಯುವ ಗಂಗೆಯ ನೆನಪನ್ನು ತಾರದೆ ಇರದು(ಚಿತ್ರಸಂಖ್ಯೆ33).

ವಾಹನಗಳನ್ನು ಇಲ್ಲಿ ನಿಲ್ಲಿಸಿ ಕೆಳಗಿಳಿದು ಬಳಿ ಸಾಗಿದರೆ ಸ್ವರ್ಗಕ್ಕೆ ಒಂದೇ ಗೇಣು. ಸಾವಿರಾರು ಗಿಡಮೂಲಿಕೆಗಳ ಬೇರಿನಿಂದ ಹಲವಾರು ಖನಿಜಗಳನ್ನು ತನ್ನಲ್ಲಿ ಕರಗಿಸಿಕೊಂಡು ಧುಮ್ಮಿಕ್ಕುತ್ತಿರುವ ಈ ನೀರಿನ ಸವಿಯನ್ನು ಮಾತ್ರ ಸವಿಯುವವರೇ ಬಲ್ಲರು. ಪ್ರಕೃತಿ ನೀಡಿದ ಈ ತೀರ್ಥವನ್ನು ಸೇವಿಸುತ್ತಿದ್ದಂತೆಯೇ ಬಾಯಾರಿಕೆ, ಬಳಲಿಕೆ, ಧಣಿವು ಎಲ್ಲ ಕ್ಷಣ ಮಾತ್ರದಲ್ಲಿ ಮಾಯವಾಗಿ ಮನಸ್ಸಿಗೆ ಆಹ್ಲಾದತೆ ಉಂಟಾಗುತ್ತದೆ(ಚಿತ್ರಸಂಖ್ಯೆ34).

ಜಲಪಾತದ ಆಸುಪಾಸಿನಲ್ಲಿ ಟೀ ಅಂಗಡಿಗಳು, ಹೋಟೆಲ್‌ಗಳು ಇರುವುದರಿಂದ ಈ ಪ್ರವಾಸಿ ತಾಣವು ಹತ್ತಾರು ಜನರಿಗೆ ಉದ್ಯೋಗ ಕಲ್ಪಿಸಿದೆ.

## ವಾಟರ್ ಮಿಲ್ಕ್ (ಜಲಪಾತ) ಪಾಲ್ಸ್

ಹೊನ್ನಮ್ಮನ ಜಲಪಾತದಿಂದ ಎಡಕ್ಕೆ ನಾಲ್ಕು ಕಿ.ಮೀ. ದೂರ ಟ್ಯಾಕ್ಸಿಗಳ ಮೂಲಕ ಹಲವಾರು ತಿರುವುಗಳನ್ನು ಸುತ್ತಿ ಮುಂದೆ ಸಾಗಿದರೆ ಸುಮಾರು 500 ಅಡಿ ಎತ್ತರದಿಂದ ಧುಮ್ಮಿಕ್ಕುತ್ತಿರುವ ಜಲಪಾತವೊಂದು ಪ್ರವಾಸಿಗರನ್ನು ತನ್ನತ್ತ ಆಕರ್ಷಿಸುತ್ತದೆ.[21] ಈ ಜಲಪಾತವು ಪ್ರವಾಸಿಗರಿಗೆ (ಮಿಲ್ಕ್) ಹಾಲಿನಂತೆ ಕಾಣಿಸುತ್ತಿರುವುದರಿಂದ ಈ ಜಲಪಾತಕ್ಕೆ 'ವಾಟರ್ ಮಿಲ್ಕ್ ಫಾಲ್ಸ್" ಎಂದೇ ಹೆಸರು(ಚಿತ್ರಸಂಖ್ಯೆ35). ಹೊನ್ನಮ್ಮನ ಆಳದಿಂದ ಇಲ್ಲಿಗೆ ಪ್ರವಾಸಿಗರು ಜೀಪುಗಳ ಮೂಲಕವೇ ಬರಬೇಕು. ಸ್ವಂತ ವಾಹನಗಳಲ್ಲಿ ಬರಲು ರಸ್ತೆಗಳ ಸಮಸ್ಯೆಯಿದೆ.

ಈ ಜಲಪಾತಕ್ಕೆ ಸ್ವಂತ ವಾಹನದಲ್ಲಿ ಹೋಗಲು ರಸ್ತೆ ಮಾರ್ಗ ಅನುಕೂಲಕರವಾಗಿಲ್ಲದ ಕಾರಣ, ಬಾಡಿಗೆ ಜೀಪ್‌ಗಳಲ್ಲಿ ಹೊರಡಬೇಕು(ಚಿತ್ರಸಂಖ್ಯೆ36). ಇಲ್ಲಿ ಪ್ರತಿಯೊಬ್ಬ ಪ್ರವಾಸಿಗರಿಗೆ 100 ರೂಗಳ ದರವಿರುತ್ತದೆ. ಹಾಗಾಗಿ (ಟ್ಯಾಕ್ಸಿ) ಜೀಪ್ ಮಾಲೀಕರಿಗೆ, ಡ್ರೈವರ್‌ಗಳಿಗೆ ಉದ್ಯೋಗವಕಾಶ ಕಲ್ಪಿಸಿದೆ. ಈ ಜಲಪಾತದ ಸಮೀಪದಲ್ಲಿಯೇ ಟೀ ಸ್ಟಾಲ್ ಅಂಗಡಿ ಇರುವುದರಿಂದ ಅವರಿಗೆ ಪ್ರತಿ ನಿತ್ಯ ವ್ಯಾಪಾರವಾಗಿ ಜೀವನ ನಿರ್ವಹಿಸುತ್ತಿದ್ದಾರೆ. ಪ್ರತಿ ಭಾನುವಾರ ಹಾಗೂ ರಜೆ ದಿನಗಳಲ್ಲಿ ಸಾವಿರಾರು ಪ್ರವಾಸಿಗರು ಇಲ್ಲಿಗೆ ಆಗಮಿಸಿ ಸ್ನಾನ ಮಾಡಿ ಸಂಭ್ರಮಿಸುತ್ತಾರೆ(ಚಿತ್ರಸಂಖ್ಯೆ37).

## ಮಗೇಬೈಲು ಜಲಪಾತ

ಶೃಂಗೇರಿ ತಾಲೂಕಿನ ಕುದುರೆಮುಖ ರಾಷ್ಟೀಯ ಉದ್ಯಾನ ಪ್ರದೇಶದಲ್ಲಿ ಬರುವ ನೈಸರ್ಗಿಕ ದಟ್ಟ ಅರಣ್ಯದಲ್ಲಿರುವ ಮಗೇಬೈಲು ಜಲಪಾತವು ವರ್ಷವಿಡೀ ಜಲಧಾರೆಯಿಂದ ಕಂಗೊಳಿಸುತ್ತಿದ್ದರು ಅದರ ಬಗೆಗಿನ ಮಾಹಿತಿ ಕೊರತೆಯಿಂದಾಗಿ ಪ್ರವಾಸಿಗರಿಂದ ಬಹುದೂರ ಉಳಿದಿದೆ. ಮಾರ್ಕಲ್ ಗ್ರಾಮಪಂಚಾಯಿತಿ ವ್ಯಾಪ್ತಿಯಲ್ಲಿನ ಮಗೇಬೈಲು ಎಂಬಲ್ಲಿರುವ ಈ ಜಲಪಾತವು ಪ್ರವಾಸೋದ್ಯಮಕ್ಕೆ ಉತ್ತೇಜನ ನೀಡುವಂತದ್ದಾಗಿದೆ. ಈ ಸ್ವಾಭಾವಿಕ ರಮಣೀಯ ಜಲಪಾತವನ್ನು(ಚಿತ್ರಸಂಖ್ಯೆ38) ಕುರಿತು ಅರಣ್ಯ ಇಲಾಖೆಯ ವನ್ಯಜೀವಿ ವಿಭಾಗವು ಹೆಚ್ಚಿನ ಆಸಕ್ತಿ ತೋರದಿರುವುದರಿಂದ ಜಲಪಾತದ ಸೊಬಗನ್ನು ವೀಕ್ಷಿಸಲು ಪ್ರವಾಸಿಗರಿಗೆ ಬಹಳಷ್ಟು ಅಡ್ಡಿಯುಂಟಾಗುತ್ತಿದೆ.

ಶೃಂಗೇರಿ ಪಟ್ಟಣದಿಂದ ಕೇವಲ 16 ಕಿ.ಮೀ.ದೂರದಲ್ಲಿ ಕುದುರೆಮುಖ ರಾಷ್ಟ್ರೀಯ ಉದ್ಯಾನದೊಳಗೆ ಇರುವ ಈ ನೈಸರ್ಗಿಕ ನಯನ ಮನೋಹರ ಜಲಪಾತ ವೀಕ್ಷಣೆಗೆ, ಕಾಡಿನಮಧ್ಯೆ ಇರುವ ಕಿರಿದಾದ ದಾರಿಯಲ್ಲಿ ಕಲ್ಲುಬಂಡೆಗಳನ್ನು ಹತ್ತಿ ಇಳಿದು 1.25 ಕಿ, ಮೀ ಕ್ಕಾಗಿ ಜಲಪಾತಕ್ಕೆ ಹೋಗುವ ದಾರಿಯನ್ನು ಸ್ಥಳೀಯರಾದ ಮಾರ್ಗೆಬೈಲು ಚಂದ್ರಶೇಖರ್‌ರವರು ವರ್ಷಕ್ಕೆರಡು ಬಾರಿ ಸ್ವಚ್ಚಗೊಳಿಸುತ್ತಿದ್ದಾರೆ.[22] ಭಾರಿ ಗುಡ್ಡಬೆಟ್ಟಗಳಿಂದ ಆವೃತ್ತವಾಗಿರುವ ಈ ಜಲಪಾತದ ಪರಿಸರದಲ್ಲಿ ಭಾರಿಗಾತ್ರದ ವಿವಿಧ ರೀತಿಯ ಮರಗಳು ಸ್ವಾಭಾವಿಕವಾಗಿ ಬೆಳೆದು ನಿಂತಿವೆ. ಒಂದಷ್ಟು ಕಡೆ ದಿನಪೂರ್ತಿ ಭೂಮಿಗೆ ಬಿಸಿಲು ಬೀಳುವುದೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಮರಗಿಡಗಳು ತಮ್ಮ ಪ್ರತಾಪ ಮೆರೆದಿವೆ. ಆದಕಾರಣ ಮಧ್ಯಾಹ್ನದ ಬಿಸಿಲಿನ ವೇಳೆಯಲ್ಲಿಯೂ ಅಲ್ಲಿ ತಂಪಾದ ವಾತಾವರಣವಿರುತ್ತದೆ.

ಕಿಗ್ಗಾದಿಂದ ಸಿರುಮನೆ ಜಲಪಾತಕ್ಕೆ ತೆರಳುವ ರಸ್ತೆಯಲ್ಲಿ 3.ಕಿ.ಮೀ, ಕ್ರಮಿಸಿದ ನಂತರ ಬಲಭಾಗಕ್ಕಿರುವ ಕಚ್ಚಾ ರಸ್ತೆಯಲ್ಲಿ 1.25 ಕಿ.ಮೀ ಮುನ್ನೆಡೆದರೆ ಮಗೇಬೈಲು ಜಲಪಾತಕ್ಕೆ ತಲುಪಬಹುದಾಗಿದೆ.[23] ಪ್ರಾರಂಭದಲ್ಲಿ ಸ್ವಲ್ಪ ದೂರ ಡಾಂಬರಿಕರಣಗೊಂಡ ರಸ್ತೆ ಇದ್ದು ಉಳಿದಂತೆ ಜಲಪಾತ ಇರುವ ಸ್ಥಳ ಕಾಣಸಿಗುತ್ತದೆ.

ವರ್ಷವಿಡಿ ಜಲಪಾತದಲ್ಲಿ ನೀರು ಧುಮ್ಮಿಕ್ಕುತ್ತಿದ್ದರೂ, ಡಿಸೆಂಬರ್ ತಿಂಗಳಿನಿಂದ ಮೇ ತಿಂಗಳ ಅಂತ್ಯದ ವರಗಿನ ಸಮಯ ಜಲಪಾತ ನೋಡಲು ಸೂಕ್ತವಾಗಿದೆ.ಮಳೆಗಾಲದಲ್ಲಿ ದಟ್ಟ ಅರಣ್ಯದ ಮಧ್ಯದಲ್ಲಿನ ಈ ಜಲಪಾತ ವೀಕ್ಷಣೆಯ ಅದ್ಭುತ ಅನುಭವವನ್ನು ಹೆಚ್ಚಿನ ಆನಂದವನ್ನು ನೀಡುತ್ತದೆಯಾದರೂ ಈ ಸುಖಕ್ಕೆ ಇಂಬಳಗಳು ತಮ್ಮದೆ ಆದ ರೀತಿಯಲ್ಲಿ ಕಾಟ ಕೊಡಲು

ಕಾದು ಕುಳಿತಿರುತ್ತವೆ ಎಂಬುದು ಗಮನದಲ್ಲಿಟ್ಟುಕೊಳ್ಳಬೇಕಾದ ಅತೀ ಮುಖ್ಯ ವಿಚಾರವಾಗಿದೆ, ಇಷ್ಟರ ನಡುವೆಯು ಪರಿಸರ ಪ್ರಿಯರು, ಸಾಹಸಿಗಳು ಮಳೆಗಾಲದಲ್ಲಿ ಆ ಕಡೆ ತೆರಳಿ ಪ್ರಕೃತಿ ವಿಸ್ಮಯ ಜಲಪಾತವನ್ನು ಕಣ್ತುಂಬಿಕೊಳ್ಳಬಹುದಾಗಿದೆ. ಆದರೆ ಕುದುರೆಮುಖ ರಾಷ್ಟ್ರೀಯ ಉದ್ಯಾನದೊಳಗೆ ಇರುವ ಈ ಜಲಪಾತವನ್ನು ಅರಣ್ಯ ಇಲಾಖೆಯು ಪ್ರವಾಸಿಗರಿಂದ ದೂರ ಪಡಿಸದಿರುವುದು ಇದರ ಕಾರ್ಯಕ್ಷಮತೆಗೆ ಹಿಡಿದ ಕೈಗನ್ನಡಿಯಾಗಿದೆ.

ಈ ಜಲಪಾತದ ಇರುವಿಕೆ ಬಗ್ಗೆ ಹೊರ ಪ್ರಪಂಚಕ್ಕೆ ತಿಳಿದಿರುವುದಕ್ಕಿಂತ ತಿಳಿಯದೇ ಇರುವುದು ಹೆಚ್ಚಿನದ್ದಾಗಿದೆ. ಇನ್ನು ಮುಂದಾದರೂ ಇಲಾಖೆ ಅಧಿಕಾರಿಗಳು ಇದರತ್ತ ಗಮನಹರಿಸಿ ಪರಿಸರಕ್ಕೆ ಹಾನಿಯಾಗದಂತೆ ಜಲಪಾತ ವೀಕ್ಷಣೆಗೆ ಅಗತ್ಯ ಅನುಕೂಲಗಳನ್ನು ಕಲ್ಪಿಸಿಕೊಡಬೇಕಾಗಿದೆ.

ಇಲ್ಲೊಂದು ಸಮಾಧಾನಕರ ವಿಚಾರವೆಂದರೆ ಜಲಪಾತ ವೀಕ್ಷಣೆಗೆ ಬರುವ ಪ್ರವಾಸಿಗರಿಗೆ ಮಲೆನಾಡಿನ ಅತಿಥ್ಯದೊಂದಿಗೆ ಅಗತ್ಯ ಮಾರ್ಗದರ್ಶನ ಮಾಡಲು ಸ್ಥಳೀಯ ನಿವಾಸಿ ಮರ್ಗೆಬೈಲು ಚಂದ್ರಶೇಖರ್‌ರವರು ಹೆಚ್ಚಿನ ಆಸಕ್ತಿ ಹೊಂದಿರುವುದ್ದಾಗಿದೆ ಜಲಪಾತ ವೀಕ್ಷಣೆಗೆ ಬರಲಿಚ್ಚಿಸುವ ಪ್ರವಾಸಿಗರು ಮುಂಚಿತವಾಗಿ ಅವರಿಗೆ ತಿಳಿಸಿದಲ್ಲಿ ಊಟ ಉಪಹಾರದ ವ್ಯವಸ್ಥೆಯನ್ನು ಅವರಿಂದ ಮಾಡಿಸಿಕೊಳ್ಳಬಹುದಾಗಿದೆ.

**ಶಾಂತಿ ಜಲಪಾತ**

ಕೆಮ್ಮಣ್ಣುಗುಂಡಿಯಿಂದ ಝಡ್ ಪಾಯಿಂಟ್ ಕಡೆಗೆ ಪ್ರಯಾಣ ಬೆಳೆಸಿದರೆ, ಸ್ವಲ್ಪ ಮುಂದೆ ಸಾಗುತ್ತಿರುವಾಗಲೇ ನೀರಿನ ಜುಳು ಜುಳು ನಿನಾದ ಕೇಳಿಸುತ್ತದೆ. ಹಾಗೆ ನೋಡಿದರೆ ಸಣ್ಣದಾಗಿ ಝರಿಯಾಗಿ ನೀರು ಬೀಳುತ್ತದೆ. ಅದೇ ಶಾಂತಿ ಜಲಪಾತ(ಚಿತ್ರಸಂಖ್ಯೆ39). ಸುಂದರ ಪರಿಸರ, ತಂಪಾದ ವಾತಾವರಣ, ಎಲ್ಲೆಲ್ಲೂ ಹಚ್ಚ ಹಸಿರಿನಿಂದ ಕಂಗೊಳಿಸುತ್ತಿರುವ ಪರ್ವತ ಸಾಲುಗಳ ರುದ್ರರಮಣೀಯ ಪರಿಸರ ನೋಡುತ್ತಾ ಅಲ್ಲೇ ಇದ್ದು ಬಿಡಬೇಕೆನಿಸುವಷ್ಟು ಆನಂದ. ಇಂತಹ ವಾತಾವರಣದಲ್ಲಿ ಸುಮಾರು 18 ಅಡಿ ಎತ್ತರದಿಂದ ಹರಿಯುತ್ತಿರುವ ಈ ಶಾಂತಿ ಜಲಪಾತದಲ್ಲಿ ಪ್ರವಾಸಿಗರು ಸ್ನಾನ ಮಾಡಿ ಮುಂದೆ ಝಡ್ ಪಾಯಿಂಟ್ ಕಡೆಗೆ ಪ್ರಯಾಣಿಸುತ್ತಾರೆ.

ಈ ಜಲಪಾತದ ಸುತ್ತಮುತ್ತ ಯಾವುದೇ ಹೋಟೆಲ್, ಟೀ ಸ್ಟಾಲ್‌ಗಳಿಲ್ಲ, ಕೆಮ್ಮಣ್ಣುಗುಂಡಿಯಿಂದ ತುಂಬಾ ದೂರದ ಎತ್ತರದ ಪ್ರದೇಶದಲ್ಲಿರುವುದರಿಂದ ಇದು ಜನನಿಬಿಡ

ಪ್ರದೇಶವಾಗಿಲ್ಲ. ತುಂಬಾ ಎಚ್ಚರಿಕೆಗಳಿಂದ ಕಾಲುದಾರಿಯಲ್ಲಿ ಹೋಗಿಬರಬೇಕು, ಇಲ್ಲವಾದಲ್ಲಿ ಪ್ರಾಣಾಪಾಯ ತಪ್ಪಿದಲ್ಲ.

**ಝಡ್ ಪಾಯಿಂಟ್**

ಕೆಮ್ಮಣ್ಣುಗುಂಡಿಯಿಂದ ಸುಮಾರು 4 ಕಿ.ಮೀ. ದೂರ ಸಾಗಿದರೆ ಶಾಂತಿ ಜಲಪಾತ ಸಿಗುತ್ತದೆ. ಅಲ್ಲಿಂದ ಮುಂದೆ ಸಾಗುತ್ತಿರುವಾಗಲೇ ಕಾಣಿಸುವುದು ಭೂಮಿಯೊಡಲಲ್ಲಿ ಹಚ್ಚ ಹಸಿರ ಸಂಭ್ರಮ. ಎಲ್ಲೆಲ್ಲೂ ಹಸಿರು ಸೀರೆಯನ್ನು ಉಟ್ಟ ಪರ್ವತ ಸಾಲುಗಳೇ. ಎಲ್ಲೆಡೆ ಹಸಿರು, ತಂಗಾಳಿ ತುಂಬಿದ ಆ ವಾತಾವರಣದಲ್ಲಿ ಹಕ್ಕಿಗಳ ಚಿಲಿಪಿಲಿ ನಾದವನ್ನು ಕೇಳುತ್ತಾ ಏರು ಹಾದಿಯಲ್ಲಿ ಕಡಿದಾದ ಮಣ್ಣಿನ ರಸ್ತೆಯ ಕವಲು ದಾರಿಯಲ್ಲಿ ಹೋಗಲು ಪ್ರಾರಂಭಿಸುತ್ತಿದ್ದಂತೆ ಬೆಟ್ಟ ಮತ್ತು ಅಲ್ಲಿನ ಸುತ್ತಮುತ್ತಲ ಸುಂದರ ಪ್ರಕೃತಿ ನೋಡುವ ಭಾಗ್ಯ ಸಿಗುತ್ತದೆ. ಸಣ್ಣ ಸಣ್ಣ ಬೆಟ್ಟ ಗುಡ್ಡಗಳನ್ನು ಏರಿಳಿಯುತ್ತಾ ಸಾಗುತ್ತಾ ದಣಿವಾದರೂ ತೋರ್ಪಡಿಸದೆ ನಾ ಮುಂದು, ತಾ ಮುಂದು ಎಂದು ಪ್ರವಾಸಿಗರು ಓಡುತ್ತಿರುತ್ತಾರೆ(ಚಿತ್ರಸಂಖ್ಯೆ40). ಪ್ರಕೃತಿಯ ಸೌಂದರ್ಯವನ್ನು ಆಸ್ವಾದಿಸುತ್ತಾ ಗುಡ್ಡದ ತುತ್ತತುದಿಯನ್ನು ತಲುಪಿದಾಗ ಸ್ವರ್ಗಕ್ಕೆ ಮೂರೇ ಗೇಣು. ಮೈಮನಗಳಲ್ಲಿ ನಿಜಾರ್ಥದಲ್ಲಿ ರೋಮಾಂಚನ ಉಂಟು ಮಾಡುವಂಥ ಜಾಗ. ಚಳಿಗಾಲದಲ್ಲಂತೂ ಸುರಿವ ಇಬ್ಬನಿ ಧಾರೆ ಶೃಂಗಾರ ಕಾವ್ಯವನ್ನೇ ಕಡೆದಿಡುತ್ತವೆ.[24]

ತುತ್ತತುದಿಯ ಝಡ್ ಪಾಯಿಂಟ್ ನಲ್ಲಿ ಹೋಗಿ ನಿಂತರೆ ಸಾಕು, ಹಾಗೇ ಎತ್ತಿಕೊಂಡು ಹೋಗಿ ಬಿಡುತ್ತೇನೋ ಅನ್ನುವಷ್ಟು ಸುಯ್ಯೆಂದು ಬೀಸುವ ಗಾಳಿ. ಆ ಚಳಿ ಗಾಳಿಗೆ ಗಡಗಡ ನಡುಗುತ್ತಲೇ ಸುತ್ತಲೂ ಕಣ್ಣು ಹಾಯಿಸಿದರೆ ಕಾಣುವ ಪರ್ವತ ಶ್ರೇಣಿಗಳು ಕೈ ಬೀಸಿ ಕರೆಯುತ್ತವೆ. ಚಾರಣಗಾರರಿಗಂತೂ ಇದು ಸ್ವರ್ಗ ಸಮಾನ(ಚಿತ್ರಸಂಖ್ಯೆ41).[25]

**ಪ್ರವಾಸಿಗರಿಗಿರುವ ಅನಾನುಕೂಲಗಳು**

1. ಬಸ್ ಸೌಕರ್ಯವಿಲ್ಲ. ಕೆಮ್ಮಣ್ಣುಗುಂಡಿಗೆ ಒಂದೇ ಕ.ರಾ.ರ.ಸಾ.ನಿ. ಸಂಸ್ಥೆಯ ಬಸ್ ವ್ಯವಸ್ಥೆಯಿದೆ. ಇದು ದಿನಕ್ಕೆ 2 ಬಾರಿ ಮಾತ್ರ ಇರುತ್ತದೆ. ಪ್ರವಾಸಿಗರು ಸ್ವಂತ ವಾಹನಗಳಲ್ಲೇ ಹೋಗಬೇಕಾಗಿರುವುದರಿಂದ ಸಾಮಾನ್ಯ ಜನರಿಗೆ ಪ್ರವಾಸ ಕೈಗೊಳ್ಳಲು ಸಾಧ್ಯವಿಲ್ಲ.

2. ಝುಡ್ ಪಾಯಿಂಟ್ ಹಾಗೂ ಶಾಂತಿ ಜಲಪಾತಗಳು ಒಂದೇ ಮಾರ್ಗದಲ್ಲಿದ್ದರೂ ಪ್ರವಾಸ ಹೋಗುವ ಜನರು ಹತ್ತಾರು ಕಿ.ಮೀ ಗಳವರೆಗೆ ನಡೆದು ದಣಿವಾದರೂ, ಪ್ರವಾಸಿಗರಿಗೆ ಊಟ–ವಸತಿ ವ್ಯವಸ್ಥೆಯಾಗಲೀ ತಂಗುದಾಣಗಳಾಗಲೀ, ಕ್ಯಾಂಟೀನ್ ಸೌಲಭ್ಯವಾಗಲೀ ಇಲ್ಲ.

3. ಕಾಡಿನ ಮಧ್ಯ ಪ್ರವಾಸ ಕೈಗೊಳ್ಳುವುದರಿಂದ ಪ್ರವಾಸಿಗರಿಗೆ ಕಳ್ಳಕಾಕರು – ಕೊಲೆಗಡುಕರಿಂದಾಗಲೀ, ವನ್ಯಜೀವಿಗಳಿಂದಾಗಲೀ ತೊಂದರೆಯಾದರೆ ಅಲ್ಲಿ ರಕ್ಷಣೆಗೆ ಅಂತ ಯಾರು ಇಲ್ಲ.

4. ತುಂಬಾ ಕಡಿದಾದ ಪ್ರದೇಶವಾಗಿರುವುದರಿಂದ ಸೂಕ್ಷ್ಮವಾಗಿ ನಡೆದೇ ಸಾಗಬೇಕು. ತಂತಿಯ ಬೇಲಿಯಾಗಲೀ, ಕಬ್ಬಿಣದ ಬೇಲಿಯಾಗಲೀ ನಿರ್ಮಿಸಿಲ್ಲ. ಒಮ್ಮೆ ಕಾಲುಜಾರಿ ಬಿದ್ದರೆ ಸಾವು ಖಂಡಿತ.

**ಪ್ರವಾಸಿಗರಿಗಾಗಿ ಕೈಗೊಳ್ಳಬಹುದಾದ ಕಾರ್ಯಕ್ರಮಗಳು**

1. ಝುಡ್ ಪಾಯಿಂಟ್‌ಗೆ ಹೋಗಲು ತುಂಬಾ ಕಡಿದಾದ ಏರು ಪ್ರದೇಶವಾದ್ದರಿಂದ ಪ್ರವಾಸಿಗರು ಕಾಲುಜಾರಿ ಬಿದ್ದರೂ ಅವರನ್ನು ತಡೆಯಬಲ್ಲಂತಹ ತಂತಿ ಚೀಲಗಳನ್ನಾಗಲೀ, ಹಗ್ಗದ ಬೇಲಿಗಳನ್ನಾಗಲೀ ನಿರ್ಮಿಸಬೇಕು.

2. ಪ್ರಕೃತಿ ಸೊಬಗು ಮನಸ್ಸಿಗೆ ಸಂತಸ ನೀಡುವುದರಿಂದ ಇಲ್ಲಿಗೆ ಬರುವ ಪ್ರವಾಸಿಗರು ಗಂಟೆಗಟ್ಟಲೇ ಸುತ್ತಾಡುವುದರಿಂದಾಗಿ ದಣಿವಾದ ಪ್ರವಾಸಿಗರಿಗೆ ಕ್ಯಾಂಟೀನ್ ಸೌಲಭ್ಯ ಕಲ್ಪಿಸಬೇಕು.

3. ಬಾಲಕರಿಂದ ವೃದ್ಧರವರೆಗೆ ಎಲ್ಲಾ ವಯೋಮಾನದವರೂ ಹೆಚ್ಚಾಗಿ ಕಾಲೇಜಿನಲ್ಲಿ ವ್ಯಾಸಂಗ ಮಾಡುವ ಯುವಕ, ಯುವತಿಯರು ಆಗಮಿಸುತ್ತಿರುವ ಈ ಪ್ರಕೃತಿ ತಾಣದಲ್ಲಿ ರಕ್ಷಣದಳದವರನ್ನು 1 ಕಿ.ಮೀ ಗೆ ಒಬ್ಬರಂತೆ ನೇಮಿಸಬೇಕು.

## ಬುಕ್ಕಾಂಬುಧಿ ಕೆರೆ

ಬುಕ್ಕಾಂಬುಧಿ ತರೀಕೆರೆ ಪಟ್ಟಣದಿಂದ ಈಶಾನ್ಯ ದಿಕ್ಕಿನಲ್ಲಿ 37 ಕಿ.ಮೀ. ದೂರದಲ್ಲಿದೆ. ಕ್ರಿ.ಶ. 888ರ[26] ಶಾಸನವೊಂದರ ಪ್ರಕಾರ ಚಾಗಿಯು ಆರಘಟ್ಟವನ್ನು ಕಟ್ಟಿಸಿ ಕಣ್ಣಮಂಗಳದ ರಾಮೇಶ್ವರ ದೇವಾಲಯಕ್ಕೆ ಭೂಮಿಯನ್ನು ನೀಡಿದನಂತೆ. ಕ್ರಿ.ಶ. 1130ರ ಶಾಸನವು[27] ಮಾಂಡಲೀಕ ಬಾರಮ್ಮರಸ ದೇವನು ಆರಘಟ್ಟ ಕೆರೆಯನ್ನು ಮತ್ತು ಶಿವ ದೇವಾಲಯವನ್ನು ಕಟ್ಟಿಸಿ ಈ ಸ್ಥಳಕ್ಕೆ 'ಆರುಘಟ್ಟಪುರ'ವೆಂದು ಕರೆದನು. ಕ್ರಿ.ಶ. 1208ಕ್ಕೆ ಸಂಬಂಧಿಸಿದ ಮತ್ತೊಂದು ಶಿಲಾಶಾಸನವು ನಾಗಗೌವುಂಡ ಮತ್ತು ಮಾದಗೌವುಂಡರು ಈ ಸ್ಥಳದಲ್ಲಿ ಮಾದಸಮುದ್ರ ಕೆರೆಯನ್ನು ಕಟ್ಟಿಸಿ ಲಿಂಗವನ್ನು ಪ್ರತಿಷ್ಠಾಪಿಸಿದರೆಂಬುದನ್ನು ತಿಳಿಸುತ್ತದೆ. ಕ್ರಿ.ಶ. 1555ಕ್ಕೆ ಸಂಬಂಧಪಟ್ಟ ಶಾಸನವು ಐಗೂರಿನ ಮುಖ್ಯಸ್ಥ ವೇಣಾತಾದ್ರಿ ನಾಯಕನ ಮಗ ಈರ ಕೃಷ್ಣಪ್ಪ ನಾಯಕನು ಬ್ರಾಹ್ಮಣರಿಗೆ ಬುಕ್ಕಾಂಬುಧಿಯನ್ನು ದಾನವನ್ನಾಗಿ ನೀಡಿದನೆಂದು ತಿಳಿಸುತ್ತದೆ.

ಈ ಎಲ್ಲಾ ಅಂಶಗಳಿಂದ ನಮಗೆ ತಿಳಿದುಬರುವ ಸಂಗತಿಯೆಂದರೆ ವಿಜಯನಗರದ ಅರಸನಾದ ಬುಕ್ಕ ಈ ಕೆರೆಯನ್ನು ರಿಪೇರಿ ಮಾಡಿಸಿದ್ದರಿಂದ ಈ ಕೆರೆಗೆ ಬುಕ್ಕಾಂಬುಧಿ ಎಂದು ಹೆಸರು[28] ಬಂದಿದೆ. ಈ ಕೆರೆಯ ಉದ್ದ 840 ಮೀಟರ್‌ಗಳಾಗಿದ್ದು 13 ಮೀಟರ್‌ಗಳ ಎತ್ತರವಿದೆ. ಈ ಕೆರೆಯು 323 ಮೆಗಾ ಕ್ಯೂಸೆಕ್ಸ್ ನೀರಿನ ಸಂಗ್ರಹ ಸಾಮರ್ಥ್ಯವನ್ನು ಹೊಂದಿದ್ದು, 230 ಹೆಕ್ಟೇರ್ ಭೂಮಿಗೆ ನೀರುಣಿಸುತ್ತದೆ.[29] ಈ ಸ್ಥಳದಿಂದ ಮೂರು ಕಿ.ಮೀ. ದೂರದಲ್ಲಿ ವಿರೂಪಾಕ್ಷ ದೇವಾಲಯವಿದೆ. ಈ ದೇವಾಲಯವನ್ನು ಬುಕ್ಕನು ಸ್ಥಾಪಿಸಿದನೆಂದು ನಂಬಲಾಗಿದೆ.[30] ಈ ವಿರೂಪಾಕ್ಷ ದೇವಾಲಯದಲ್ಲಿ ಆತ್ಯಾಕರ್ಷಕ ವೀರಭದ್ರೇಶ್ವರ, ಗಣಪತಿ, ಚನ್ನಕೇಶವ, ಮಹಾವಿಷ್ಣು, ಷಣ್ಮುಖ ಮತ್ತು ಭುವನೇಶ್ವರಿ ವಿಗ್ರಹಗಳನ್ನು ಈ ದೇವಾಲಯದಲ್ಲಿ ನೋಡಬಹುದು. ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಹಂಪಿಯಲ್ಲಿರುವ ವಿರೂಪಾಕ್ಷನ ಜಾತ್ರೆಯು ನಡೆಯುವ ಸಮಯದಲ್ಲೇ ಇಲ್ಲೂ ಸಹ ಜಾತ್ರೆ ಏಪ್ರಿಲ್ ತಿಂಗಳಲ್ಲಿ ನಾಲ್ಕು ದಿನಗಳ ಕಾಲ ನಡೆಯುತ್ತದೆ.

**ಪ್ರವಾಸಿಗರಿಗಿರುವ ಅನಾನುಕೂಲಗಳು**

1. ಈ ಪ್ರವಾಸಿ ತಾಣಕ್ಕೆ ಬಸ್ ಸೌಲಭ್ಯ ಕಡಿಮೆ ಇದೆ. ಟ್ಯಾಕ್ಸಿ ಆಟೋಗಳಲ್ಲಿ ಹೋಗಬಹುದು.
2. ಇಲ್ಲಿಗೆ ಹೆಚ್ಚಿನ ಸಂಖ್ಯೆಯಲ್ಲಿ ಸ್ಥಳೀಯರು ಆಗಮಿಸುತ್ತಾರೆ. ಅಯ್ಯನಕೆರೆಗೆ ಹೋಗುವಷ್ಟು ಪ್ರವಾಸಿಗರು ಇಲ್ಲಿಗೆ ಬರುವುದಿಲ್ಲ.
3. ಈ ತಾಣದ ಆಸುಪಾಸಿನಲ್ಲಿ ಯಾವುದೇ ಉಪಹಾರ ಮಂದಿರ, ಟೀ ಸ್ಟಾಲ್‌ಗಳು ಇಲ್ಲ.

## ಅಯ್ಯನಕೆರೆ

ಅಯ್ಯನಕೆರೆ, ದೊಡ್ಡಕೆರೆ, ಇದನ್ನು ದೊಡ್ಡ ಮಾಗಡಿ ಕೆರೆಯಂತಲೂ ಕರೆಯುತ್ತಾರೆ(ಚಿತ್ರಸಂಖ್ಯೆ42). ಇದು ಸಕ್ಕರೆಪಟ್ಟಣದಿಂದ ಪಶ್ಚಿಮದಲ್ಲಿದೆ. ಬೆಟ್ಟಗುಟ್ಟಗಳಿಂದ ಸುತ್ತುವರೆಯಲ್ಪಟ್ಟಿರುವ ಈ ಸ್ಥಳ ಬಾಬಾಬುಡನ್‌ಗಿರಿಯ ಮೂಲವನ್ನು ಹೊಂದಿದೆ. ಶಕುನಗಿರಿ ಬೆಟ್ಟದಿಂದ ಹರಿದುಬರುವಂತಹ ಸರ್ವಋತು ಗೌರಿ ಹಳ್ಳಕ್ಕೆ ಅಡ್ಡಲಾಗಿ ನಿರ್ಮಿಸಿರುವ ಅಣೆಕಟ್ಟು ವಿಶಾಲವೂ ಆಕರ್ಷಣೀಯವೂ ಆಗಿದೆ. ಮುಂದೆ ಇದು ಆವತಿಯೊಂದಿಗೆ ಕಡೂರಿನ ಹತ್ತಿರ ಸಂಗಮವಾಗುತ್ತದೆ. ಈ ಎರಡೂ ಝರಿಗಳು ಸಂಗಮವಾಗಿ ಹರಿಯುವ ನದಿಯನ್ನು ಮುಂದೆ ನೇತ್ರಾವತಿ ಎಂದು ಕರೆಯಲಾಗುತ್ತದೆ. ಈ ಕೆರೆಯು 183 ಹೆಕ್ಟೇರ್‌ಗಳ ವಿಸ್ತಾರದಲ್ಲಿ ನೀರನ್ನು ಶೇಖರಿಸುತ್ತದೆ. 420 ಮೆಗಾ ಅಡಿಗಳಿಗಿಂತ ಹೆಚ್ಚು ನೀರನ್ನು ಈ ಕೆರೆ ಸಂಗ್ರಹಿಸುತ್ತದೆ. ಈ ಕೆರೆಯ ನೀರು 1,574 ಹೆಕ್ಟೇರ್‌ಗಿಂತ ಹೆಚ್ಚು ಪ್ರದೇಶಕ್ಕೆ ನೀರುಣಿಸುತ್ತದೆ.[31]

ಒಂದು ಪುರಾಣದ ಪ್ರಕಾರ ಸಕ್ಕರೆಪಟ್ಟಣದ ರುಕ್ಮಾಂಗದರಾಯನೆಂಬುವನು ಈ ಕೆರೆಯನ್ನು ಕಟ್ಟಿಸಿದನೆಂದು ನಂಬಲಾಗಿದೆ. ಸ್ಥಳೀಯ ಆಡಳಿತಗಾರರೊಂದಿಗೆ ಹೊಯ್ಸಳರ ದೊರೆ ನರಸಿಂಹನು ಕ್ರಿ.ಶ. 1156ರಲ್ಲಿ ಈ ಕೆರೆಯನ್ನು ನವೀಕರಿಸಿದನೆಂದು ತಿಳಿದುಬಂದಿದೆ.

ಈ ಕೆರೆಯ ಹಿಂಭಾಗದಲ್ಲಿನ ಬೆಟ್ಟದ ಮೇಲೆ ಪ್ರಸನ್ನ ಬಲ್ಲಾಳೇಶ್ವರ ದೇವಾಲಯವಿದೆ. ಈ ದೇವಾಲಯದಲ್ಲಿ ಹೊಯ್ಸಳರ ಆಳ್ವಿಕೆಗೆ ಸಂಬಂಧಪಟ್ಟ ಗಣಪತಿ, ಸೂರ್ಯ, ಕೇಶವ, ಅಂಬಿಕಾ ಮುಂತಾದವರ ವಾಸ್ತುಶಿಲ್ಪಗಳೊಂದಿಗೆ ಇಷ್ಟಲಿಂಗ ಮೂರ್ತಿಯನ್ನು ನೋಡಬಹುದು. ಈ ಕೆರೆಯ ಒಡ್ಡು ಪದೇ ಪದೇ ಒಡೆಯುತ್ತಿದ್ದರಿಂದ ಇಲ್ಲಿಯ ಸ್ಥಳೀಯ ನಿರ್ವಾಣ ಸ್ವಾಮಿ ಸಹಾಯ ಕೇಳಿದ್ದರಂತೆ. ಅವರ ಮಾರ್ಗದರ್ಶನದಂತೆ ಪರಿಹಾರೋಪಾಯಗಳನ್ನು ಕೈಗೊಂಡಾಗ ಸಮಸ್ಯೆ ಪರಿಹಾರವಾಯಿತಂತ್ತೆ.

ಜನಪದೀಯ ಕಥೆಯೊಂದರ ಪ್ರಕಾರ ಅವ್ಯಾಹತವಾಗಿ ಸುರಿದ ಮಳೆಯಿಂದ ಸಂಕಟವೊಂದು ಸಕ್ಕರೆಪಟ್ಟಣಕ್ಕೆ ಎದುರಾಗಿತ್ತಂತೆ. ಈ ವಿಷಯವನ್ನು ಈ ಕೆರೆಯ ಸಂರಕ್ಷಣೆಯ ಗೋವುಗಳಾದ ಹೊನ್ನಬಿಲ್ಲ–ಚಿನ್ನಬಿಲ್ಲಗಳು ತಿಳಿಸಿದವಂತೆ. ಈ ಗೋವುಗಳು ದೇವಿಯಿಂದ ಒಂದು ಪ್ರತಿಜ್ಞೆಯನ್ನು ಸ್ವೀಕರಿಸಿ ತಾವು ಬರುವವರೆಗೂ ದುರಂತವನ್ನು ತಡೆಯಬೇಕೆಂಬ ಮಾತನ್ನು ತೆಗೆದುಕೊಂಡರಂತೆ. ಅದರಂತೆ ಅವರು ಊರಿನ ಪ್ರವೇಶದ್ವಾರಕ್ಕೆ ಬಂದು ಅಲ್ಲಿಯ

ಗಣೇಶ ದೇವಾಲಯದ ಹತ್ತಿರ ಶಿರಚ್ಛೇದನ ಮಾಡಿಕೊಂಡರಂತೆ. ಇದರ ನೆನಪಿಗೋಸ್ಕರ ಅಲ್ಲಿ ಮಂಟಪವನ್ನು ನಿರ್ಮಿಸಲಾಗಿದೆ.

ಮತ್ತೊಂದು ಕಥೆಯನ್ವಯ ಹೊನ್ನಬಿಲ್ಲನು ಅಯ್ಯನಕೆರೆಯ ನೀರಗಂಟಿಯಾಗಿದ್ದು, ದೇವಿಯ ಪ್ರತಿಜ್ಞೆಯನ್ನು ದುರುಪಯೋಗಪಡಿಸಿದ್ದರಿಂದ ಸ್ಥಳೀಯ ಮುಖ್ಯ ಆಡಳಿತಾಧಿಕಾರಿಯು ಆತನನ್ನು ಶಿರಚ್ಛೇದನ ಮಾಡಿಸಿದನೆಂದು ತಿಳಿಸುತ್ತದೆ. ಇಲ್ಲಿ 'ಅಮೃತಕಾವಲ್' (ದನಕರುಗಳಿಗೆ ಮೀಸಲಿಟ್ಟ ಹುಲ್ಲುಗಾವಲು) ಮತ್ತು ಮೀನು ಸಂರಕ್ಷಣಾ ಕೇಂದ್ರವಾಗಿದೆ. ಇಲ್ಲಿಯ ವಿಶಾಲ ಮತ್ತು ಆಕರ್ಷಣೀಯ ಸ್ಥಳವು ಪಿಕ್‌ನಿಕ್ ಸ್ಥಳವಾಗಿದ್ದು, ಅಭಿವೃದ್ಧಿಗೆ ಪೂರಕವಾದ ಪರಿಸರವನ್ನು ಹೊಂದಿದೆ.

**ಅನುಕೂಲಗಳು**

1. ಈ ಕೆರೆಯು ಸಕ್ಕರೆಪಟ್ಟಣದಿಂದ 4 ½ ಕಿ.ಮೀ. ದೂರದಲ್ಲಿದೆ.
2. ಈ ಕೆರೆಯು ಬೆಟ್ಟ ಗುಡ್ಡಗಳಿಂದ ಸುತ್ತುವರೆದಿದ್ದು, ತುಂಬಾ ವಿಶಾಲವಾದ ಕೆರೆ ಇದಾಗಿದೆ. ಈ ಕೆರೆಯಿಂದ ಅಕ್ಕ ಪಕ್ಕದ ಊರಿನವರಿಗೆ ಬೇಸಾಯಕ್ಕೆ ತುಂಬಾ ಅನುಕೂಲಕರವಾದ ಸೌಲಭ್ಯವಿದೆ.
3. ಈ ಕೆರೆಗೆ ಪ್ರತಿದಿನ ಹೆಚ್ಚಿನ ಸಂಖ್ಯೆಯಲ್ಲಿ ಪ್ರವಾಸಿಗರು ಬರುತ್ತಾರೆ ಹಾಗೂ ಈ ಕೆರೆಯಲ್ಲಿ ತುಂಬು ಹರಿಯುವ ಜಲಾಪಾತದಲ್ಲಿ ಸ್ನಾನ ಮಾಡಿ ಸಂಭ್ರಮಿಸುತ್ತಾರೆ(ಚಿತ್ರಸಂಖ್ಯೆ43).
4. ಈ ಕೆರೆಯಲ್ಲಿ ರಕ್ಷಣ ದಳದವರು ಇರುವುದರಿಂದ ಪ್ರವಾಸಿಗರಿಗೆ ಭದ್ರತೆ ಕಲ್ಪಿಸಿದಂತಾಗಿದೆ.
5. ಇಲ್ಲಿಗೆ ಬರುವ ಪ್ರವಾಸಿಗರಿಗೆ ಲಘು ಉಪಹಾರ ವ್ಯವಸ್ಥೆ ಇದೆ. ವಾಹನ ನಿಲುಗಡೆಯ ವ್ಯವಸ್ಥೆಯು ಇದೆ.

**ಅನಾನುಕೂಲಗಳು**

1. ಈ ಪ್ರವಾಸಿ ತಾಣಕ್ಕೆ ಹೋಗಲು ವಾಹನದ ವ್ಯವಸ್ಥೆ ಇಲ್ಲ. ಚಾರಣ ಮಾಡುವವರಿಗೆ ಒಳ್ಳೆಯ ಸ್ಥಳವಾಗಿದೆ. ಸ್ವಂತ ವಾಹನವಿದ್ದರೆ ಒಳ್ಳೆಯದು.
2. ಈ ತಾಣಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಪ್ರವಾಸಿಗರು ಬಂದು ಸ್ನಾನ ಮಾಡುತ್ತಾರೆ. ಆದರೆ ಪ್ರವಾಸಿಗರಿಗೆ ಬಟ್ಟೆ ಬದಲಿಸಲು ಕೊಠಡಿಗಳ ವ್ಯವಸ್ಥೆ ಇಲ್ಲ.

3. ಮೂಲಭೂತ ಸೌಕರ್ಯಗಳಾದ ಶೌಚಾಲಯಗಳ ವ್ಯವಸ್ಥೆಯೂ ಕೂಡ ಇಲ್ಲ.
4. ಹೋಟಲ್‌ಗಳ ವ್ಯವಸ್ಥೆಯು ಕೂಡ ಇಲ್ಲ.
5. ಈ ಪ್ರವಾಸಿ ತಾಣಕ್ಕೆ ಬರುವ ಪ್ರವಾಸಿಗರು ಎಲ್ಲೆಂದರಲ್ಲಿ ಕಸ ಕಡ್ಡಿ, ಪೇಪರ್, ವಾಟರ್ ಬಾಟಲ್‌ಗಳನ್ನು ಬಿಸಾಡಿ ಹೋಗುವುದರಿಂದ ಸುತ್ತಮುತ್ತಲಿನ ವಾತವರಣ ಕಸ ಕಡ್ಡಿಯಿಂದ ಇರುತ್ತದೆ. ಹಾಗಾಗಿ ಸಾರ್ವಜನಿಕರಲ್ಲಿ ಅರಿವು ಮೂಡಿಸಲು ಕ್ರಮಗಳನ್ನು ಕೈಗೊಳ್ಳಬೇಕು.
6. ಈ ತಾಣಕ್ಕೆ ಬರುವ ಪ್ರವಾಸಿಗರಿಗೆ ಲಘು ಉಪಹಾರವೆಂದರೆ ಟೀ ಅಂಗಡಿ, ಪಾನಿಪುರಿ, ಗೋಬಿ ಮಾರುವವರು ಇದ್ದಾರೆ. ಇವರಿಗೆ ಪ್ರತಿ ದಿನ ಪ್ರವಾಸಿಗರಿಂದ ವ್ಯಾಪಾರಗಳು ನಡೆಯುತ್ತದೆ. ಇವರಿಗೆ ಇದೇ ಒಂದು ಉದ್ಯೋಗವಾಗಿದೆ.
7. ಈ ತಾಣಕ್ಕೆ ಪ್ರವಾಸಿಗರಿಗೆ ಪ್ರವೇಶ ಶುಲ್ಕ ನಿಗದಿ ಪಡಿಸಿದ್ದರೆ. ವಾಹನ ನಿಲ್ದಾಣದಲ್ಲಿ ನಿಗದಿ ಪಡಿಸಿದ್ದರೆ. ಪ್ರವಾಸೋದ್ಯಮ ಇಲಾಖೆ ರಾಜ್ಯ ಸರ್ಕಾರಕ್ಕೆ ಆದಾಯ ಸಂದಾಯವಾಗುತ್ತಿತ್ತು ಮತ್ತು ಇದರಿಂದ ನಾಲ್ಕು ಜನರಿಗೆ ಉದ್ಯೋಗ ದೊರಕುತ್ತಿತ್ತು.

## ಅಡಿ ಟಿಪ್ಪಣಿಗಳು

1. ತಿಪ್ಪೇರುದ್ರಪ್ಪ ಬಿ. (ಸಂ): ಹಸಿರು ಸಿರಿ – ಜಿಲ್ಲಾಡಳಿತ ಜಿಲ್ಲಾ ಪಂಚಾಯತ್ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ, ಚಿಕ್ಕಮಗಳೂರು, 2015 – ಪುಟ ಸಂ. 16
2. ಅದೇ.
3. ಪಾಂಡುರಂಗ ಡಿ.ಆರ್. – ಕರ್ನಾಟಕದ ದೇವಾಲಯಗಳು ಮತ್ತು ಪ್ರೇಕ್ಷಣೀಯ ಸ್ಥಳಗಳು– ಐಬಿಎಚ್ ಪ್ರಕಾಶನ, ಬೆಂಗಳೂರು–2013 ಪುಟ ಸಂ. 166
4. ಕ್ಷೇತ್ರ ಕಾರ್ಯದಲ್ಲಿ ಕಂಡುಬಂದ ಮಾಹಿತಿ
5. ಪ್ರವಾಸಿಗರ ಅಭಿಪ್ರಾಯ
6. ಚಿಕ್ಕಮಗಳೂರು ಪ್ರವಾಸಿ ನಕ್ಷೆ – ಜಿಲ್ಲಾ ಪ್ರವಾಸೋದ್ಯಮ ಮಾಹಿತಿ ಕೇಂದ್ರ, ಚಿಕ್ಕಮಗಳೂರು, 2016
7. ರಘೋತ್ತಮ ತೀರ್ಥ – ಪ್ರವಾಸೀ ಕರ್ನಾಟಕ ದರ್ಶನ, 2008, ಶ್ರೀಮತಿ ಭಾರತಿಬಾಯಿ ಪ್ರಕಾಶನ, ಮೈಸೂರು, ಪುಟ. 280
8. ಅದೇ. ಪುಟ ಸಂ. 5
9. ಚಿಕ್ಕಮಗಳೂರು ಪ್ರವಾಸಿ ನಕ್ಷೆ – ಪೂರ್ವೋಕ್ತ
10. ಪಾಂಡುರಂಗ ಡಿ.ಆರ್. – ಪೂರ್ವೋಕ್ತ, ಪುಟ ಸಂ. 160
11. ಚಿಕ್ಕಮಗಳೂರು ಪ್ರವಾಸಿ ನಕ್ಷೆ – ಪೂರ್ವೋಕ್ತ
12. ರಾಜಶೇಖರ ಕೋಟಿ (ಸಂ) – ಆಂದೋಲನ ದಿನ ಪತ್ರಿಕೆ, ಪ್ರಕಟಣೆ: 06–05–2018, ಮೈಸೂರು
13. ಅದೇ,
14. ಅದೇ,
15. ಪರೇಶ್‌ನಾಥ್ (ಸಂಪಾದಕರು) – ಗೃಹಶೋಭಾ, ಮಾಸಪತ್ರಿಕೆ, ಏಪ್ರಿಲ್ 2015 ಸಂಚಿಕೆ. 268, ಬೆಂಗಳೂರು. ಪುಟ 77
16. ಮಂಜುನಾಥ್ ಕೆ. – ಚಿಕ್ಕಮಗಳೂರು ಜಿಲ್ಲೆಯ ಸ್ಥಳಗಳು – ಚಂದನ ಪ್ರಕಾಶನ, ಬೆಂಗಳೂರು 2010, ಪುಟ ಸಂ. 66
17. ಕ್ಷೇತ್ರ ಕಾರ್ಯದಲ್ಲಿ ಕಂಡು ಬಂದ ಮಾಹಿತಿ
18. ಪಾಂಡುರಂಗ ಡಿ.ಆರ್. – ಪೂರ್ವೋಕ್ತ, ಪು.ಸಂ. 255

19. ಮಂಜುನಾಥ್ ಕೆ – ಪೂರ್ವೋಕ್ತ, ಪುಟ ಸಂ. 2

20. ಕ್ಷೇತ್ರ ಕಾರ್ಯದಲ್ಲಿ ಕಂಡು ಬಂದ ಮಾಹಿತಿ

21. ಕ್ಷೇತ್ರ ಕಾರ್ಯದಲ್ಲಿ ಕಂಡು ಬಂದ ಮಾಹಿತಿ

22. ನಾಗೇಶ್ ಟಿ (ಸಂ) – ನಾಗೇಶ್ ಪತ್ರಿಕೆ (ವಾರ ಪತ್ರಿಕೆ) – ಶೃಂಗೇರಿ ಪುಟ. ಸಂ. 4, ಪ್ರಕಟಣೆ, 02–03–2017.

23. ಅದೇ,

24. ಲಕ್ಷ್ಮೀಕಾಂತ ಎಲ್.ವಿ – "ರುದ್ರರಮಣೀಯ ಝುಡ್‌ಪಾಯಿಂಟ್ ಪತ್ರಿಕೆ" (ಲೇಖನ) ಪ್ರಜಾವಾಣಿ ದಿನ ಪತ್ರಿಕೆ – ಕರ್ನಾಟಕ ದರ್ಶನ ವಿಶೇಷ ಬೆಂಗಳೂರು ಪ್ರಕಟಣೆ, 24–05–2016

25. ಕ್ಷೇತ್ರ ಕಾರ್ಯದಲ್ಲಿ ಕಂಡು ಬಂದ ಮಾಹಿತಿ

26. ಎ.ಕ.ಸಂ–12, ಶಾಸನ ಸಂಖ್ಯೆ 73, ಪುಟ 411

27. ಎ.ಕ.ಸಂ–12, ಶಾಸನ ಸಂಖ್ಯೆ 72, ಪುಟ 409–410

28. ಎ.ಕ.ಸಂ–12, ಶಾಸನ ಸಂಖ್ಯೆ 74, ಪುಟ 411–413

29. ಪಾಂಡುರಂಗ ಡಿ.ಆರ್. – ಪೂರ್ವೋಕ್ತ, ಪುಟ 216

30. ಕೃಷ್ಣತಂತ್ರಿ ಆರ್ – ತರೀಕೆರೆ ತಾಲೂಕು ದರ್ಶನ ಪುಟ 40

31. ಪಾಂಡುರಂಗ ಡಿ.ಆರ್. – ಪೂರ್ವೋಕ್ತ, ಪುಟ 202

# ಅಧ್ಯಾಯ – 5

## ಚಿಕ್ಕಮಗಳೂರು ಜಿಲ್ಲೆಯ ಐತಿಹಾಸಿಕ ಪ್ರವಾಸಿ ತಾಣಗಳು

### ಪೀಠಿಕೆ

ಪ್ರವಾಸೋದ್ಯಮ ಅತೀ ವೇಗವಾಗಿ ಬೆಳೆಯುತ್ತಿರುವ ಕೈಗಾರಿಕೆಯಾಗಿದೆ. ಇದು ಉದ್ಯೋಗ ಸೃಷ್ಟಿಸುವಲ್ಲಿ ಹಾಗೂ ಆದಾಯ ತರುವಲ್ಲಿ ವಿಶ್ವದ ಎರಡನೇ ಅತಿ ದೊಡ್ಡ ಕೈಗಾರಿಕೆಯಾಗಿದೆ. ಪ್ರವಾಸೋದ್ಯಮದ ಸುಸ್ಥಿರ ಬೆಳವಣಿಗೆ ಬಗ್ಗೆ ನೋಡಿಕೊಳ್ಳಲು ಹಾಗೂ ಇದರ ಬೆಳವಣಿಗೆ ಬಗ್ಗೆ ಅಧಿಕೃತ ಮಾಹಿತಿ ಕೊಡಲು ವಿಶ್ವದಲ್ಲಿ ಎರಡು ಸಂಸ್ಥೆಗಳಿವೆ. ವಿಶ್ವ ಸಂಸ್ಥೆಯ ವಿಶ್ವ ಪ್ರವಾಸೋದ್ಯಮ ಸಂಸ್ಥೆ ಹಾಗೂ ವಿಶ್ವ ಪ್ರಯಾಣ ಹಾಗೂ ಪ್ರವಾಸೋದ್ಯಮ ಪರಿಷತ್ ಮೊದಲನೇ ಸಂಸ್ಥೆ ಸುಸ್ಥಿತ ಪ್ರವಾಸೋದ್ಯಮದ ಬೆಳವಣಿಗೆಗೆ ಸಾಕಷ್ಟು ಮಾರ್ಗದರ್ಶಿ ಸೂತ್ರವನ್ನು ಕೊಡುತ್ತದೆ. ಹಾಗೂ ಎರಡನೇ ಸಂಸ್ಥೆ ವಿಶ್ವದೆಲ್ಲೆಡೆ ಪ್ರವಾಸೋದ್ಯಮದ ಬೆಳವಣಿಗೆ ಬಗ್ಗೆ ಅಂಕಿ ಅಂಶಗಳನ್ನು ಕೊಡುತ್ತದೆ. ಈ ಸಂಸ್ಥೆ ಲಂಡನ್ನಿನ ಆಕ್ಸಫರ್ಡ್ ವಿಶ್ವವಿದ್ಯಾನಿಲಯದ ಆರ್ಥಿಕ ವಿಭಾಗದೊಂದಿಗೆ ಒಪ್ಪಂದ ಮಾಡಿಕೊಂಡು, ಅದರ ಸಹಯೋಗದಲ್ಲಿ ಪ್ರವಾಸೋದ್ಯಮದಿಂದ ಆಗುವ ಆರ್ಥಿಕ ಪರಿಣಾಮದ ಸಂಶೋಧನೆ ಕೈಗೊಂಡು ಮಾಹಿತಿಯನ್ನು ಕೊಡುತ್ತದೆ.

ಈ ಮಾಹಿತಿಯ ಪ್ರಕಾರ 2014ರಲ್ಲಿ ವಿಶ್ವದಲ್ಲಿ ಒಟ್ಟು ಪ್ರವಾಸೋದ್ಯಮದ ವ್ಯವಹಾರ 7.6 ಟ್ರಿಲಿಯನ್ ಅಮೇರಿಕನ್ ಡಾಲರ್ ಆಗಿರುತ್ತದೆ. ಇದು ವಿಶ್ವದ ಆದಾಯಕ್ಕೆ 580.9 ಬಿಲಿಯನ್ ಕೊಡುಗೆ ನೀಡಿದೆ. ಪ್ರವಾಸೋದ್ಯಮದಿಂದ ವಿಶ್ವ ಆದಾಯಕ್ಕೆ 9.5% ಹೂಡಿಕೆಯಾಗಿರುತ್ತದೆ. ಇವುಗಳಲ್ಲಿ ಬಹು ಭಾಗ ಯುರೋಪ್ ಹಾಗೂ ಉತ್ತರ ಅಮೇರಿಕಾದ ಪಾಲಾಗಿದೆ. 2014ರಲ್ಲಿ 70 ಮಿಲಿಯನ್ ಜನಸಂಖ್ಯೆ ಇರುವ ಫ್ರಾನ್ಸ್‌ಗೆ 83 ಮಿಲಿಯನ್ ಅಂತಾರಾಷ್ಟ್ರೀಯ ಪ್ರವಾಸಿಗರು ಭೇಟಿ ಕೊಟ್ಟಿದ್ದರಿಂದ ಅದು ವಿಶ್ವದ ಪ್ರಥಮ ಸ್ಥಾನದ ದೇಶವಾಗಿದೆ. 67 ಮಿಲಿಯನ್ ಅಂತರ ರಾಷ್ಟ್ರೀಯ ಪ್ರವಾಸಿಗರು ಭೇಟಿ ಕೊಟ್ಟಿರುವ ಅಮೇರಿಕಾ ಎರಡನೇ ಸ್ಥಾನದಲ್ಲಿದೆ. ಹಾಗೂ ಚೀನಾ ಮೂರನೇ ಸ್ಥಾನದಲ್ಲಿದೆ.[1]

ವಿಶ್ವದ ಸರಾಸರಿಗಿಂತ ಭಾರತದಲ್ಲಿ ಪ್ರವಾಸೋದ್ಯಮದ ಕೊಡುಗೆ ಗಣನೀಯವಾಗಿ ಕಡಿಮೆ ಇದೆ. ಆದ್ದರಿಂದ ಸುಸ್ತಿರ ಪ್ರವಾಸೋದ್ಯಮದ ಬೆಳವಣಿಗೆಗೆ ಭಾರತದಲ್ಲಿ ಸಾಕಷ್ಟು ಅವಕಾಶಗಳಿವೆ. 5 ಸಾವಿರ ವರ್ಷದ ಇತಿಹಾಸವಿರುವ ಭಾರತದಲ್ಲಿ ಪ್ರವಾಸಿಗರು ಇಷ್ಟ ಪಡುವ

ಎಲ್ಲವೂ ಇದೆ. ಹಿಮಾಲಯ ಪರ್ವತ ಶ್ರೇಣಿಗಳು, ಕಣಿವೆಗಳು, ನದಿಗಳು, ಜಲಾಶಯಗಳು, ಪ್ರಾಚೀನ ಸ್ಮಾರಕಗಳು, ಚಾರಿತ್ರಿಕ ಪ್ರದೇಶಗಳು, ದೇವಸ್ಥಾನಗಳು, ಮಸೀದಿಗಳು, ಚರ್ಚ್‌ಗಳು, ಬೌದ್ಧವಿಹಾರಗಳು, ಜೈನ ಬಸದಿಗಳು ಹಾಗೂ ಶಿಲ್ಪ ಕಲಾಕೃತಿಗಳು ವಿಶ್ವದಲ್ಲಿಯೇ ಅತೀ ಎತ್ತರದ ಏಕ ಶಿಲಾ ಪ್ರತಿಮೆಯಾಗಿರುವ ಬಾಹುಬಲಿ, ವನ್ಯಜೀವಿಗಳು, ಪಕ್ಷಿಧಾಮಗಳು ವೈವಿಧ್ಯಮಯ ಸಂಸ್ಕೃತಿ ಮುಂತಾದ ಎಲ್ಲವೂ ಇದೆ.

ಯೂರೊಪ್ ಹಾಗೂ ಅಮೇರಿಕಕ್ಕೆ ಹೋಲಿಸಿದ್ದಲ್ಲಿ ಇಲ್ಲಿ ಖರ್ಚು ಕೂಡ ಕಡಿಮೆಯಾಗಿದೆ. 2014ರಲ್ಲಿ ಭಾರತಕ್ಕೆ ಬಂದಿರುವ ಅಂತಾರಾಷ್ಟ್ರೀಯ ಪ್ರವಾಸಿಗರ ಸಂಖ್ಯೆ 6.71 ಮಿಲಿಯನ್ ಮಾತ್ರ. ಆದರೆ ವಿಶ್ವದ ಅಂತಾರಾಷ್ಟ್ರೀಯ ಪ್ರವಾಸಿಗರ ಸಂಖ್ಯೆ 1.14 ಬಿಲಿಯನ್.[2] ಅಂದರೆ ಭಾರತಕ್ಕೆ ಬಂದವರು ಶೇಕಡ 0.5 ಕ್ಕಿಂತ ಕಡಿಮೆ. ಒಬ್ಬ ಪ್ರವಾಸಿ ಲಂಡನ್ನಿನಲ್ಲಿ, ನ್ಯೂಯಾರ್ಕ್‌ನಲ್ಲಿ ಅಥವಾ ಟೋಕಿಯೋದಲ್ಲಿ ಮಾಡುವ ಸಾಮಾನ್ಯ ಖರ್ಚಿನ ಕೇವಲ 25% ಮಾಡಿದರೆ ಭಾರತದಲ್ಲಿ ಪ್ರವಾಸ ಮಾಡಬಹುದು. ನಮ್ಮ ದೇಶದಲ್ಲಿ ಅಮೇರಿಕ ಅಥವಾ ಯೂರೊಪ್‌ನಿಂದ ಪ್ರವಾಸಿಗರು ಮಾಡುವ ಖರ್ಚು ಬಹಳ ಕಡಿಮೆ ಇದೆ. ಪ್ರವಾಸಿಗರು ಇಷ್ಟ ಪಡುವ ಎಲ್ಲವೂ ಇದ್ದು ಹಾಗೂ ಖರ್ಚು ಕಡಿಮೆ ಇದ್ದರೂ, ಏಕೆ ನಮ್ಮ ದೇಶಕ್ಕೆ ಪ್ರವಾಸಿಗರು ಬರುತ್ತಿಲ್ಲ ಎನ್ನುವ ಪ್ರಶ್ನೆ ಏಳುತ್ತದೆ. ಇದಕ್ಕೆ ಕಾರಣ, ಸರ್ಕಾರ, ಪ್ರವಾಸೋದ್ಯಮದಲ್ಲಿ ತೊಡಗಿಸಿಕೊಂಡವರು ಹಾಗೂ ನಾವೆಲ್ಲಾ ಸಾರ್ವಜನಿಕರು. ಇತ್ತೀಚಿನವರೆಗೂ ನಮ್ಮ ಸರ್ಕಾರಕ್ಕೆ ಹಾಗೂ ಸಾರ್ವಜನಿಕರಿಗೆ, ಪ್ರವಾಸೋದ್ಯಮದ ಮಹತ್ವದ ಅರಿವಾಗಿರಲಿಲ್ಲ. 2002ರಲ್ಲಿ ಪ್ರಥಮವಾಗಿ ಒಂದು ಪ್ರವಾಸೋದ್ಯಮ ನೀತಿಯನ್ನು ಕೇಂದ್ರ ಸರ್ಕಾರ ಪ್ರಕಟಿಸಿತು. ಅದರಲ್ಲಿ ಪ್ರವಾಸೋದ್ಯಮದ ಬೆಳವಣಿಗೆಗೆ ಪೂರಕವಾದ ಹಲವು ಅಂಶಗಳನ್ನು ಹೇಳಲಾಗಿದೆ. ಚೀನಾ ತನ್ನ ಒಟ್ಟು ದೇಶೀಯ ಉತ್ಪನ್ನದಲ್ಲಿ ಶೇ. 38 ರಷ್ಟು ಖರ್ಚು ಮಾಡುತ್ತಿದೆ. ಹಲವು ರಾಷ್ಟ್ರಗಳು ಶೇ. 5% ರಿಂದ 12% ವರೆಗೂ ಖರ್ಚು ಮಾಡುತ್ತಿವೆ. ಆದರೆ ಭಾರತ ಸರ್ಕಾರ 12ನೇ ಪಂಚವಾರ್ಷಿಕ ಯೋಜನೆಯಲ್ಲಿ 22800 ಕೋಟಿ ತೆಗೆದಿರಿಸಿದೆ. ಇದು 5 ವರ್ಷದಲ್ಲಿ ಪ್ರವಾಸೋದ್ಯಮಕ್ಕೆ ಖರ್ಚು ಮಾಡಬೇಕಾದ ಹಣ ಇದು ನಮ್ಮ ಒಟ್ಟು ದೇಶೀಯ ಉತ್ಪನ್ನ ಶೇ. ಒಂದಕ್ಕಿಂತ ಕಡಿಮೆ ಇದೆ.

## ಮೂಲಭೂತ ಸೌಕರ್ಯ

ಪ್ರವಾಸಿಗರಿಗೆ ಎಲ್ಲ ರೀತಿಯ ಮೂಲಭೂತ ಸೌಕರ್ಯಗಳನ್ನು ಯೂರೊಪ್ ಹಾಗೂ ಅಮೇರಿಕದಲ್ಲಿ ಕಲ್ಪಿಸಲಾಗಿದೆ. ನಮ್ಮಲ್ಲಿ ಪ್ರವಾಸಿಗರ ವಾಸ್ತವ್ಯ, ಸಂಪರ್ಕ, ಸಾರಿಗೆ, ರಸ್ತೆ, ಪ್ರವಾಸಿ ತಾಣದಲ್ಲಿ ಕುಡಿಯುವ ನೀರು, ಶೌಚಾಲಯ, ಸ್ವಚ್ಚತೆ, ವಾಹನ ನಿಲುಗಡೆ ವ್ಯವಸ್ಥೆ, ವೃತ್ತಿಪರ

ಮಾರ್ಗದರ್ಶಿಗಳ ಕೊರತೆ. ಹೀಗೆ ಹಲವು ಹತ್ತು ಸಮಸ್ಯೆಗಳಿಂದ ಕೂಡಿದೆ. ವಿದೇಶಿ ಪ್ರವಾಸಿಗರು ಎಂದಾಕ್ಷಣ ಅವರು ಬಹಳ ಹಣವಂತರು ಎಂದು ನಮ್ಮೆಲ್ಲರ ತಪ್ಪುಕಲ್ಪನೆ ಇದೆ. ಹಾಗಾಗಿ ಅವರನ್ನು ದೋಚುವುದರಲ್ಲಿ ಸರ್ಕಾರವೂ ಸೇರಿದಂತೆ, ನಾವೆಲ್ಲರೂ ಸಮಭಾಗಿಗಳು. ಅವರಿಗೆ ಹೆಚ್ಚಿನ ಪ್ರವೇಶ ಶುಲ್ಕವನ್ನು ವಿಧಿಸಲಾಗುತ್ತದೆ. ಆಟೋದವರು, ಟ್ಯಾಕ್ಸಿಯವರು ಈ ರೀತಿ ಎಲ್ಲರೂ ವಿದೇಶಿ ಪ್ರವಾಸಿಗರ ಶೋಷಣೆಯಲ್ಲಿ, ಸಮಭಾಗಿಗಳು, "ಅತಿಥಿ ದೇವೋಭವ" ಎಂಬುದು ನಮ್ಮ ಘೋಷವಾಕ್ಯವಾಗಿದೆ. ಆದರೆ ಪ್ರವಾಸಿಗರನ್ನು ನಾವು ಅತಿಥಿಯಂತೆ ನೋಡಿಕೊಳ್ಳುತ್ತೇವೆಯೇ ಎಂಬ ಪ್ರಶ್ನೆಗೆ ಉತ್ತರ ಸಿಗಲಾರದು.

**ಪ್ರಚಾರ:** ನಮ್ಮಲ್ಲಿರುವ ವೈವಿಧ್ಯಮಯ ಪ್ರವಾಸಿ ತಾಣಗಳ ಪರಿಚಯವನ್ನು ಪ್ರಚಾರ ಮಾಡುವುದರಲ್ಲಿ ನಾವು ಸಂಪೂರ್ಣ ವಿಫಲರಾಗಿದ್ದೇವೆ. ಇಂದು ಮಾರುಕಟ್ಟೆಯುಗ. ಹಲವು ರಾಷ್ಟ್ರಗಳು ಆಕರ್ಷಣೀಯವಲ್ಲದ ಪ್ರವಾಸಿ ತಾಣಗಳನ್ನು ಶೃಂಗಾರಗೊಳಿಸಿ ಮಾರಾಟ ಮಾಡುತ್ತಿದೆ. ನಾವು ಇನ್ನು ಹೆಚ್ಚು ಪರಿಣಾಮಕಾರಿಯಾಗಿ ನಮ್ಮ ಪ್ರವಾಸಿ ತಾಣವನ್ನು ಹೊರದೇಶಗಳಿಗೆ ಪರಿಚಯಿಸಬೇಕಾಗುತ್ತದೆ. ನಮ್ಮಲ್ಲಿರುವ ವೈವಿಧ್ಯಮಯ ಸಂಸ್ಕೃತಿ ಹಾಗೂ ಅದ್ಭುತ ಪ್ರವಾಸಿ ತಾಣಗಳನ್ನು ಇನ್ನು ಹೆಚ್ಚು ಆಕರ್ಷಣೆಗೊಳಿಸಿ, ಅಂತಾರಾಷ್ಟ್ರೀಯ ಮಟ್ಟದಲ್ಲಿ ಪ್ರಚಾರ ಮಾಡಬೇಕು.

ಐತಿಹಾಸಿಕ ಮಹತ್ವವುಳ್ಳ ದೇವಾಲಯಗಳು, ಕೋಟೆ ಕೊತ್ತಲುಗಳು, ಅರಮನೆಗಳು, ಮಸೀದಿಗಳು, ಚರ್ಚ್‌ಗಳು, ಮ್ಯೂಸಿಯಂಗಳು. ಸ್ಮಾರಕಗಳು ಇರುವ ಸ್ಥಳಗಳಿಗೆ ಭೇಟಿ ನೀಡುವ ಪ್ರವಾಸಿಗಳನ್ನು ಐತಿಹಾಸಿಕ ಪ್ರವಾಸೋದ್ಯಮ ಎನ್ನುವರು. ಸಾಂಸ್ಕೃತಿಕ, ಐತಿಹಾಸಿಕ ಹಾಗೂ ಮಾನವ ನಿರ್ಮಿತ ಪರಂಪರೆ ತಾಣಗಳ ಪ್ರವಾಸವನ್ನು ಈ ವರ್ಗ ಒಳಗೊಂಡಿದೆ. ಜಗತ್ತಿನ ಶೇ. 31% ರಷ್ಟು ಜನ ಐತಿಹಾಸಿಕ ಸ್ಥಳಗಳಿಗೆ ಭೇಟಿ ನೀಡುತ್ತಾರೆ. ಈ ಪ್ರವಾಸವು ಗತಕಾಲವನ್ನು ಆಸ್ವಾದಿಸಲು ನೆರವಾಗುತ್ತದೆ. ತಾಜ್‌ಮಹಲ್, ಪಿರಮಿಡ್‌ಗಳು, ಚೀನಾದ ಮಹಾಗೋಡೆ, ಸಾಂಚಿ ಸ್ತೂಪಗಳಿಗೆ ಭೇಟಿ ನೀಡುವುದು ಈ ಪ್ರವಾಸೋದ್ಯಮಕ್ಕೆ ಉತ್ತಮ ನಿದರ್ಶನವಾಗಿದೆ.

ಚಿಕ್ಕಮಗಳೂರು ಜಿಲ್ಲೆಯ ಪ್ರಮುಖ ಐತಿಹಾಸಿಕ ಪ್ರವಾಸಿ ತಾಣಗಳಲ್ಲಿ ದೇವಾಲಯಗಳು, ಬಸದಿಗಳು, ವಸ್ತು ಸಂಗ್ರಹಾಲಯಗಳು, ಸ್ಮಾರಕಗಳು ಪ್ರವಾಸಿಗರನ್ನು ತನ್ನೆಡೆಗೆ ಆಕರ್ಷಿಸುತ್ತಿವೆ. ಈ ಜಿಲ್ಲೆಯ ಪ್ರಮುಖ ದೇವಾಲಯಗಳಲ್ಲಿ ದೇವನೂರಿನ ಸಿದ್ದೇಶ್ವರ ಮತ್ತು ಲಕ್ಷ್ಮೀಕಾಂತ ದೇವಾಲಯಗಳು, ಬೆಳವಾಡಿಯ ವೀರನಾರಾಯಣ, ಅಮೃತಪುರದ ಅಮೃತೇಶ್ವರ, ಹಿರೇಮಗಳೂರಿನ ಕೋದಂಡರಾಮ ದೇವಾಲಯ, ಶೃಂಗೇರಿಯ ವಿದ್ಯಾಶಂಕರ, ಕಳಸದ

ಕಳಸೇಶ್ವರ, ಶೃಂಗೇರಿ ಮತ್ತು ಸಿಂದಿಗೆರೆಯ ಬಸದಿಗಳು ಬಹಳ ಆಕರ್ಷಣೀಯವಾಗಿವೆ. ಈ ಆಕರ್ಷಣೆಗೆ ಕಾರಣ ಅವುಗಳ ಉತ್ಕೃಷ್ಟ ವಾಸ್ತು ವಿನ್ಯಾಸ ಮತ್ತು ಸುಂದರ ಶಿಲ್ಪಗಳು ಈ ಜಿಲ್ಲೆಯ ಸಂಪೂರ್ಣವಾದಂತಹ ಮತ್ತು ಆಮೂಲಾಗ್ರವಾದಂತಹ ಕಲಾ ಚಟುವಟಿಕೆಗಳನ್ನು ತೋರಿಸುತ್ತದೆ.

ಇಂತಹ ಪ್ರಮುಖ ಪ್ರವಾಸಿ ತಾಣಗಳಾದ ಐತಿಹಾಸಿಕ ದೇವಾಲಯಗಳು, ಬಸದಿಗಳು, ಸ್ಮಾರಕಗಳು, ಹಾಗೂ ಮ್ಯೂಸಿಯಂಗಳ ಬಗ್ಗೆ ಈಗಾಗಲೇ ಲಭ್ಯವಿರುವ ಅಲ್ಪಸ್ವಲ್ಪ ಮಾಹಿತಿಗಳ ಆಧಾರದ ಮೇಲೆ ಕ್ಷೇತ್ರಕಾರ್ಯವನ್ನು ಕೈಗೊಂಡು ಸ್ಥಳದಲ್ಲಿ ಪ್ರವಾಸಿ ತಾಣಗಳ ಮಹತ್ವದ ಬಗ್ಗೆ, ಪ್ರವಾಸಿಗರಿಗಿರುವ ಅನುಕೂಲ ಮತ್ತು ಅನಾನುಕೂಲಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಸಂಗ್ರಹಿಸಿ ವಿವರಣಾತ್ಮಕ ವರದಿಯನ್ನು ಮತ್ತು ಛಾಯಾಚಿತ್ರಗಳನ್ನು ತೆಗೆದು ಈ ಪ್ರೌಢ ಪ್ರಬಂಧದಲ್ಲಿ ಸೇರಿಸಿ ರಚಿಸಲಾಗಿದೆ.

## ಅಮೃತೇಶ್ವರ ದೇವಾಲಯ, ಅಮೃತಪುರ

ಕರ್ನಾಟಕ ರಾಜ್ಯದ ರಾಜಧಾನಿ ಬೆಂಗಳೂರಿನಿಂದ 250 ಕಿ.ಮೀ.ಗಳಷ್ಟು ಪ್ರಯಾಣಿಸಿದರೆ ಸಿಗುವುದೇ ಮಲೆನಾಡಿನ ಮದುಮಗಳು ಚಿಕ್ಕಮಗಳೂರು. ಇಲ್ಲಿಂದ ಲಿಂಗದಹಳ್ಳಿ ಮಾರ್ಗವಾಗಿ 56 ಕಿ.ಮೀ.ಗಳಷ್ಟು ಕ್ರಮಿಸಿದರೆ ಸಿಗುವುದೇ ತರೀಕೆರೆ ಪಟ್ಟಣ. ತರೀಕೆರೆ ಪಟ್ಟಣಕ್ಕೆ ಚಿಕ್ಕಮಗಳೂರಿನಿಂದ ಪ್ರಯಾಣಿಸುವುದೇ ಒಂದು ಆಹ್ಲಾದಕರ ಅನುಭವ.

ಬೆಂಗಳೂರು ಹೊನ್ನಾವರ ರಾಷ್ಟ್ರೀಯ ಹೆದ್ದಾರಿ 206ರಲ್ಲಿ ಬೆಂಗಳೂರಿನಿಂದ ತರೀಕೆರೆಗೆ ಕೇವಲ 260 ಕಿ.ಮೀ.ಗಳು. ತರೀಕೆರೆಯಿಂದ ಬೆಂಗಳೂರು ಕಡೆ ಸಾಗುವ ರಾಷ್ಟ್ರೀಯ ಹೆದ್ದಾರಿ 206ರಲ್ಲಿ ಸುಮಾರು 3–4 ಕಿ.ಮೀ.ಗಳಷ್ಟು ಕ್ರಮಿಸಿ ಎಡಕ್ಕೆ ತಿರುಗಿಕೊಂಡರೆ 8 ಕಿ.ಮೀ.ಗಳಷ್ಟು ಪೂರ್ವದಿಕ್ಕಿಗೆ ಕ್ರಮಿಸಿದರೆ ಇಕ್ಕೆಲಗಳಲ್ಲೂ ತೆಂಗು, ಕಂಗಿನ ಮನಮೋಹಕ ತೋಟಗಳನ್ನು ದಾಟಿ ಸಾಗಬೇಕು. ಸುಮಾರು 5–6 ಎಕರೆಗಳಷ್ಟು ವಿಶಾಲವಾದ ಹಸಿರು ಹುಲ್ಲಿನ ಬಯಲು ಅದರ ನಡುವೆ ಸುಮಾರು ಅರ್ಧ ಎಕರೆಯಷ್ಟು ಸ್ಥಳವನ್ನು ಆಕ್ರಮಿಸಿಕೊಂಡು ಗಗನಕ್ಕೆ ತಲೆಎತ್ತಿ ತನ್ನ ಬಳಿಗೆ ಬರುವ ಪ್ರವಾಸಿ ಭಕ್ತರನ್ನು ದೂರದಿಂದಲೇ ಕೈಬಾಚಿ ಕರೆಯುತ್ತದೆ ಅಮೃತೇಶ್ವರ ದೇವಾಲಯ(ಚಿತ್ರಸಂಖ್ಯೆ44).

ಅಮೃತಪುರವು ತರೀಕೆರೆ ತಾಲೂಕು ಕೇಂದ್ರದಿಂದ ಸುಮಾರು 11 ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಈಶಾನ್ಯ ದಿಕ್ಕಿನಲ್ಲಿ ಅಮೃತೇಶ್ವರ ದೇವಾಲಯವು ಏಕಕೂಟ ಶೈವ ದೇವಾಲಯವಾಗಿದ್ದು, ಪೂರ್ವಾಭಿಮುಖವಾಗಿದೆ. ಸೋಪುಗಲ್ಲಿನಿಂದ ಕಟ್ಟಲಾಗಿರುವ ಈ

ದೇವಾಲಯವನ್ನು ಹೊಯ್ಸಳ ದೊರೆ ಎರಡನೆಯ ಬಲ್ಲಾಳನ ದಂಡನಾಯಕ ಅಮೃತೇಶ್ವರನು ಕ್ರಿ.ಶ. 1196ರಲ್ಲಿ ಕಟ್ಟಿಸಿದ್ದನು. ಈತನನ್ನು ಶಾಸನಗಳಲ್ಲಿ ಅಮಿತಯ್ಯ ಅಥವಾ ಅಮೃತಯ್ಯ ಎಂದೂ ಕರೆಯಲಾಗಿದೆ. ಈ ಶಾಸನ ಕನ್ನಡದ ಪ್ರಸಿದ್ಧ ಕವಿ ಜನ್ನನಿಂದ ರಚಿಸಲ್ಪಟ್ಟಿರುವುದಾಗಿ ತಿಳಿದುಬರುತ್ತದೆ.[3] ಇದು ಗರ್ಭಗೃಹ, ಸುಕನಾಸಿ, ನವರಂಗ ಹಾಗೂ ತೆರೆದ ಮುಖಮಂಟಪವನ್ನು ಹೊಂದಿದೆ. ದೇವಾಲಯದ ತಳವಿನ್ಯಾಸದ ಪರಿಕಲ್ಪನೆಯಲ್ಲಿ ಕಲ್ಯಾಣ ಚಾಳುಕ್ಯರ ಕಾಲದ ದೇವಾಲಯವನ್ನು ಹೋಲುತ್ತದೆ.[4]

ಈ ದೇವಾಲಯದ ಗರ್ಭಗುಡಿಯ ಮಧ್ಯಭಾಗದಲ್ಲಿ ಸುಮಾರು 1.5 ಅಡಿ ಎತ್ತರದ ಪಾಣಿಪೀಠದ ಮೇಲೆ ಅರ್ಧ ಅಡಿ ಎತ್ತರದ ಲಿಂಗವಿದ್ದು ಇದನ್ನು 'ಅಗ್ನಿ ಸಾಲಿಗ್ರಾಮ ಲಿಂಗ' ಎಂದು ಕರೆಯುವರು(ಚಿತ್ರಸಂಖ್ಯೆ45). ಲಿಂಗಕ್ಕೆ ಪ್ರತಿ ಶಿವರಾತ್ರಿಯೆಂದು ಸೂರ್ಯೋದಯದ ಪ್ರಥಮ ರಶ್ಮಿಯು ಲಿಂಗದ ಮೇಲೆ ಬೀಳುವುದು ಆಶ್ಚರ್ಯದ ಸಂಗತಿಯಾಗಿದೆ.[5] ಗರ್ಭಗುಡಿಯ ಮೇಲ್ಭಾಗದಲ್ಲಿ ಕಮಲಾಕೃತಿಯ ಭುವನೇಶ್ವರಿಯಿದೆ. ದ್ವಾರದ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿಯ ಚಿತ್ರವಿದ್ದು ಮೇಲ್ಭಾಗದಲ್ಲಿ ಸಣ್ಣ ಸಣ್ಣ ಬುರುಜುಗಳನ್ನು ಕೆತ್ತಲಾಗಿದೆ. ಬಾಗಿಲುವಾಡವನ್ನು ಐದು ಅಲಂಕರಣ ಪಟ್ಟಿಕೆಗಳಿಂದ ಕೆತ್ತನೆ ಮಾಡಲಾಗಿದೆ.

ಸುಕನಾಸಿಯು ಒಂದು ಅಂಕಣದಷ್ಟು ವಿಶಾಲವಾಗಿದೆ(ಚಿತ್ರಸಂಖ್ಯೆ46). ಇದರ ಮೇಲ್ಭಾಗದಲ್ಲಿ ಕಮಲಾಕೃತಿಯ ಭುವನೇಶ್ವರಿಯಿದ್ದು, ದ್ವಾರದ ಲಲಾಟಬಿಂಬದಲ್ಲಿ ತಾಂಡವೇಶ್ವರನ ಶಿಲ್ಪವಿದ್ದು ಅಕ್ಕಪಕ್ಕದಲ್ಲಿ ವಿಷ್ಣು, ಬ್ರಹ್ಮನನ್ನು ಕೆತ್ತಲಾಗಿದೆ. ಇದರ ಪಕ್ಕದಲ್ಲಿ ಮಕರಗಳಿಂದ ಕೂಡಿದ ವಿವಿಧ ಶಿಲ್ಪಗಳನ್ನು ಕಾಣಬಹುದು. ಬಾಗಿಲುವಾಡದಲ್ಲಿ ಮೂರು ಲತಾ ಸುರುಳಿಯ ಅಲಂಕರಣಯುಕ್ತ ಪಟ್ಟಿಕೆಯಿದೆ. ದ್ವಾರದ ಎರಡೂ ಕಡೆಗಳಲ್ಲಿಯೂ ರತಿ–ಮನ್ಮಥರ ಕೆತ್ತನೆಗಳಿವೆ. ಇದರ ಪಕ್ಕದಲ್ಲಿ ಉದ್ದನೆಯ ಜಾಲಂಧ್ರವನ್ನು ಸಹ ರಚಿಸಲಾಗಿದೆ.

ನವರಂಗವು ಒಂಭತ್ತು ಅಂಕಣವನ್ನು ಹೊಂದಿದ್ದು ಮಧ್ಯಭಾಗದಲ್ಲಿ ನಾಲ್ಕು ಸ್ವತಂತ್ರವಾದ ಹೊಯ್ಸಳ ಮಾದರಿಯ ಕಂಬಗಳನ್ನು ಹೊಂದಿದ್ದು, ಇವುಗಳನ್ನು ಅತ್ಯಂತ ಒಳಪಿನಿಂದ ನಯಗೊಳಿಸಲಾಗಿದ್ದು, ಇವುಗಳಲ್ಲಿ ಕುಂಭ ಮಾದರಿಯ ವಿನ್ಯಾಸಗಳು ಮತ್ತು ಗಾಲಿಯಂತಹ ಕುಷನ್ ಬೋದಿಗೆಗಳನ್ನು ಹೊಂದಿದೆ(ಚಿತ್ರಸಂಖ್ಯೆ47). ಇದೇ ಮಾದರಿಯ ಕಂಬಗಳು ಮುಖಮಂಟಪದಲ್ಲೂ ಸಹ ಕಂಡುಬರುತ್ತದೆ. ಭಿತ್ತಿಗೆ ಹೊಂದಿಕೊಂಡಂತೆ ಅಲಂಕಾರಿಕವಾದಂತಹ 10 ಕಂಬಗಳಿವೆ. ಪ್ರತಿಯೊಂದು ಅಂಕಣದಲ್ಲೂ ಪದ್ಮ ಮಂಡಲ ವಿತಾನದ ಭುವನೇಶ್ಚವರಿಗಳಿದ್ದು ಇವುಗಳಲ್ಲಿ ಮಧ್ಯದಂಕಣದ ಭುವನೇಶ್ವರಿ ಉಳಿದವುಗಳಿಗಿಂತ

ಹೆಚ್ಚು ಆಕರ್ಷಕವಾಗಿದ್ದು ಇದರಲ್ಲಿ ಶಿಲ್ಪಿ ಮಲ್ಲಿತಮ್ಮನ ಹೆಸರನ್ನು ಕೆತ್ತಿರುವುದು ವಿಶೇಷವಾಗಿದೆ.[6] ಭುವನೇಶ್ವರಿಯ ಮಧ್ಯದಲ್ಲಿ ನೃತ್ಯ ತಾಂಡವ ಶಿವನಿದ್ದು ಕೆಳಪಟ್ಟಿಕೆಗಳಲ್ಲಿ ತಮ್ಮ ತಮ್ಮ ವಾಹನದ ಮೇಲೆ ಪತ್ನಿ ಸಮೇತರಾಗಿರುವ ಅಷ್ಟದಿಕ್ಪಾಲಕರನ್ನು ಚಿತ್ರಿಸಿದ್ದು ಅಕ್ಕ ಪಕ್ಕದಲ್ಲಿ ನೃತ್ಯಗಾರರ ರಚನೆಯಿದ್ದು ಕೆಳಭಾಗದ ಪಟ್ಟಿಕೆಯಲ್ಲಿ ವ್ಯಾಳ ರಚನೆಯಿದೆ. ಮಧ್ಯದಲ್ಲಿ ಅರ್ಧ ಅಡಿ ಎತ್ತರದ ವೃತ್ತಾಕಾರದ ವೇದಿಕೆಯಿದೆ. ಲಿಂಗಕ್ಕೆ ಎದುರಾಗಿ ಒಂದು ಅಡಿ ಎತ್ತರದ ನಂದಿ ಶಿಲ್ಪವಿದೆ(ಚಿತ್ರಸಂಖ್ಯೆ48). ಈ ದೇವಾಲಯದ ಮುಖಮಂಟಪವನ್ನು ಮಹಾಮಂಟಪ ಎಂದು ಕರೆಯುತ್ತಾರೆ. ತೆರೆದ ಮುಖಮಂಟಪವು 25 ಅಂಕಣವನ್ನು ಹೊಂದಿದ್ದು ಇಲ್ಲಿ ಒಟ್ಟು 46 ಕಂಬಗಳಿವೆ.

ಹೊಯ್ಸಳ ದೇವಾಲಯಗಳಲ್ಲಿ ಸಾಮಾನ್ಯವಾಗಿ ಭುವನೇಶ್ವರಿಗಳು ಅತ್ಯಂತ ಅಲಂಕೃತವಾಗಿರುತ್ತವೆ(ಚಿತ್ರಸಂಖ್ಯೆ49). ಇವುಗಳ ಕೆತ್ತನೆ ಕಲಾವಿದನ ಜಾಣ್ಮೆಗೆ ಮತ್ತು ಅವನಲ್ಲಿರುವ ಕಲಾ ಪ್ರಜ್ಞೆಗೆ ಸವಾಲಿನ ಕೆಲಸವಾಗಿದ್ದು ತನ್ನ ಪ್ರೌಢಿಮೆಯನ್ನು ತೋರಿಸಲು ಇದೊಂದು ಸುಂದರ ಸಂದರ್ಭ. ಈ ದೇವಾಲಯದಲ್ಲಿ ಒಟ್ಟು 52 ಭುವನೇಶ್ವರಿಗಳಿವೆ. ಮುಖಮಂಟಪದಲ್ಲಿ ಪ್ರತಿಯೊಂದು ಅಂಕಣಕ್ಕೂ ಭುವನೇಶ್ವರಿಗಳನ್ನು ನಿರ್ಮಿಸಲಾಗಿದೆ. ಪ್ರತಿಯೊಂದು ಭುವನೇಶ್ವರಿ ಒಂದಕ್ಕಿಂತ ಒಂದು ವಿಭಿನ್ನವಾಗಿದ್ದು ಅದ್ಭುತವಾದ ಪರಿಕಲ್ಪನೆಯಿಂದ ಕೂಡಿದೆ. ಕೆಲವು ವಿನ್ಯಾಸಗಳು ಚಾಳುಕ್ಯ ದೇವಾಲಯಗಳಲ್ಲಿ ಮಾತ್ರ ಕಂಡುಬರುತ್ತದೆ. ದೇವಾಲಯದ ಉತ್ತರ ಬಾಗಿಲ ಮುಖಮಂಟಪದ ಭುವನೇಶ್ವರಿಯ ಒಳಗಿರುವ ಶಿಲ್ಪಗಳ ಕೆಳಭಾಗದಲ್ಲಿ ಶಿಲ್ಪಿ ಮಲ್ಲಿತಮ್ಮನ ಹೆಸರು ಕೆತ್ತಲ್ಪಟ್ಟಿದೆ. ಉತ್ತರದ ಬಾಗಿಲಿನ ಮುಖಮಂಟಪದ ಭುವನೇಶ್ವರಿಯ ಒಳಗಿರುವ ಪ್ರತಿಮೆಗಳ ಕೆಳಗೆ ಮಲಯ, ಮಲಿತಮ, ಪದುಮಣ, ಸುಬುಜಗ, ಭೂತಯ, ಬಲುಗ ಎಂದೂ ದಕ್ಷಿಣ ಭುವನೇಶ್ವರಿಯಲ್ಲಿ ಮಲಿ ಎಂದೂ ದಕ್ಷಿಣ ದ್ವಾರದ ಭುವನೇಶ್ವರಿಯಲ್ಲಿ ಮುಳಣ ಎಂದೂ ಉಲ್ಲೇಖವಿದೆ. ಈ ದೇವಾಲಯದಲ್ಲಿ ಹಲವು ಭುವನೇಶ್ವರಿಗಳು ಪದ್ಮಮಂಡಲವನ್ನು ಹೊಂದಿವೆ.

**ಶಾರದ ಮಂಟಪ:** ಅಮೃತೇಶ್ವರ ದೇವಾಲಯದ ದಕ್ಷಿಣ ಭಾಗದ ಮುಖಮಂಟಪಕ್ಕೆ ಎದುರಾಗಿ ಅಂದರೆ ಉತ್ತರಮುಖವಾಗಿರುವ ಚತುರ್ರಸ ತಲವಿನ್ಯಾಸದ ದೇವಾಲಯವಿದ್ದು ಇದನ್ನು ಶಾರದ ಮಂಟಪವೆಂದು ಕರೆಯುತ್ತಾರೆ. ಇದು ಮೂಲತಃ ಸರಸ್ವತಿಯ ದೇವಾಲಯವಾಗಿದ್ದು ಇದರ ಸ್ವಲ್ಪ ಭಾಗವು ಭಗ್ನವಾಗಿದ್ದ ಕಾರಣ ಅಲ್ಲಿದ್ದ ಸರಸ್ವತಿ ಶಿಲ್ಪವನ್ನು ಅಮೃತೇಶ್ವರ ದೇವಾಲಯದ ನವರಂಗದಲ್ಲಿ ಇಡಲಾಗಿತ್ತೆಂದು ತಿಳಿದುಬರುತ್ತದೆ.

**ಸಂಕ್ರಾಂತಿ ಮಂಟಪ:** ದೇವಾಲಯದ ಉತ್ತರ ಭಾಗದಲ್ಲಿ ಒಂದು ಸಂಕ್ರಾಂತಿ ಮಂಟಪವಿದ್ದು ಇದನ್ನು ಸ್ಥಳೀಯರು ಸ್ವರ್ಗದ ಮಂಟಪ ಎಂದೂ ಕರೆಯುತ್ತಾರಲ್ಲದೆ ಇದು ದೇವಾಲಯದ ಉತ್ತರ ಭಾಗದ ಪ್ರಾಕಾರಕ್ಕೆ ಹೊಂದಿಕೊಂಡಂತೆ ಇದೆ. ಇದಕ್ಕೆ ದಕ್ಷಿಣೋತ್ತರವಾಗಿ ದ್ವಾರವಿದ್ದು ಇದು ಸು. 4 ಅಡಿ ಎತ್ತರದ ಅದಿಷ್ಠಾನದ ಮೇಲಿದೆ. ಒಳ ಭಾಗದಲ್ಲಿ ಹೊಯ್ಸಳ ಮಾದರಿಯ ನಾಲ್ಕು ಕಂಬಗಳಿದ್ದು ಭಿತ್ತಿಗೆ ಹೊಂದಿಕೊಂಡಂತೆ ಅಲಂಕಾರಿಕವಾದ 16 ಕಂಬಗಳಿವೆ. ಈ ಮಂಟಪದಲ್ಲಿ ಈಗ ಯಾವುದೇ ಶಿಲ್ಪಗಳು ಕಂಡು ಬರುವುದಿಲ್ಲ.

**ಇಲ್ಲಿನ ಇತರೆ ಮುಖ್ಯ ಅಂಶಗಳೆಂದರೆ:** ಅಮೃತೇಶ್ವರ ದೇವಾಲಯವು ಆಸಂದಿ ನಾಡಿನಲ್ಲಿ ಕಂಡುಬರುವ ಅತ್ಯಂತ ಪ್ರಮುಖ ದೇವಾಲಯವೆಂದು ಹೇಳಬಹುದು. ಉತ್ತರ ಭಾಗದಲ್ಲಿರುವ ಭುವನೇಶ್ವರಿ ಒಳಗಿರುವ ಪ್ರತಿಮೆಗಳ ಕೆಳಗೆ ಮಲಯ, ಮಲಿತಮ, ಪದುಮಂಣ, ರೂವಾರಿ ಬಲುಗ ಬೂತಯ ಎಂತಲೂ, ದಕ್ಷಿಣ ಭುವನೇಶ್ವರಿಯಲ್ಲಿ ಮಲಿ... ಎಂತಲೂ ದಕ್ಷಿಣ ದ್ವಾರದ ಭುವನೇಶ್ವರಿಯಲ್ಲಿ ಮುಳಣ ಎಂದು ಕೊರೆಲ್ಪಟ್ಟಿದೆ. ಇದು ಈ ದೇವಾಲಯವನ್ನು ಕಟ್ಟಿದ ಶಿಲ್ಪಿಗಳ ಹೆಸರುಗಳಾಗಿವೆ. ಒಟ್ಟಿನಲ್ಲಿ ಹೊಯ್ಸಳ ಶೈಲಿಯ ವಾಸ್ತು ಅಲಂಕರಣೆಗಳಿಗೆ ಅವುಗಳ ಭವ್ಯತೆಗೆ ಮತ್ತು ವೈವಿಧ್ಯತೆಗೆ ಈ ದೇವಾಲಯ ಹೆಸರುವಾಸಿಯಾಗಿದೆ.

**ಪ್ರವಾಸಿಗರಿಗಿರುವ ಅನುಕೂಲಗಳು**

1. ಈ ತಾಣಕ್ಕೆ ಬರುವ ಪ್ರವಾಸಿಗರಿಗೆ ಸಮೀಪದ ಬೀರೂರಿನಿಂದ ಖಾಸಗಿ ವಸತಿ ವ್ಯವಸ್ಥೆ ಹಾಗೂ ಬಸ್, ಟ್ಯಾಕ್ಸಿ ವ್ಯವಸ್ಥೆ ಇದೆ.
2. ಈ ದೇವಲಯಕ್ಕೆ ಬರುವ ಪ್ರವಾಸಿಗರಿಗೆ ಪ್ರತಿದಿನ ಮಧ್ಯಾಹ್ನ 12:30 ರಿಂದ 2:30ರ ವರೆಗೆ ಅಮೃತೇಶ್ವರ ದೇವಾಲಯದ ಟ್ರಸ್ಟ್ (ರಿ) ವತಿಯಿಂದ ಹಾಗೂ ದಾನಿಗಳಿಂದ ಭೋಜನದ ವ್ಯವಸ್ಥೆ ಇದೆ.

**ಪ್ರವಾಸಿಗರಿಗಿರುವ ಅನಾನುಕೂಲಗಳು**

1. ಅಮೃತಪುರದ ಅಮೃತೇಶ್ವರ ದೇವಾಲಯಕ್ಕೆ ಸರ್ಕಾರಿ ಹಾಗೂ ಖಾಸಗಿ ಬಸ್ ಸೌಲಭ್ಯ ಕಡಿಮೆ ಇದೆ.
2. ದೇವಾಲಯದ ಆಸುಪಾಸಿನಲ್ಲಿ ಯಾವುದೇ ಹೋಟೆಲ್‌ಗಳಾಗಲಿ ವಸತಿ (ಲಾಡ್ಜ್)ಗಳ ಸೌಲಭ್ಯವಿಲ್ಲ.
3. ಮೂಲಭೂತ ಅವಶ್ಯಕತೆಗಳಲ್ಲಿ ಒಂದಾದ ಶೌಚಾಲಯ ವ್ಯವಸ್ಥೆಯೂ ಇಲ್ಲ.

ಹಾಗಾಗಿ ಪ್ರವಾಸೋದ್ಯಮ ಇಲಾಖೆಯವರಾಗಲೀ, ಸ್ಥಳೀಯ ಆಡಳಿತ ಸಂಸ್ಥೆಗಳಾಗಲೀ ಇದರತ್ತ ಗಮನ ಹರಿಸಿ. ಪ್ರವಾಸಿಗರ ಮೂಲಭೂತ ಸೌಲಭ್ಯಗಳನ್ನು ಒದಗಿಸಿದ್ದಲ್ಲಿ ಪ್ರವಾಸಿಗರ ಅದರಲ್ಲೂ ಮಹಿಳೆಯ ಸಂಖ್ಯೆಯೂ ಹೆಚ್ಚು ಬರಲು ಕಾರಣವಾಗಿರುತ್ತದೆ.

## ಋಷ್ಯಶೃಂಗೇಶ್ವರ ದೇವಾಲಯ, ಕಿಗ್ಗ

ಶೃಂಗೇರಿ ತಾಲೂಕಿನಲ್ಲಿ ಕಸಬೆಯಿಂದ ಸು. 10 ಕಿ.ಮೀ. ಪಶ್ಚಿಮಕ್ಕಿರುವ ಗ್ರಾಮ, ಹೋಬಳಿ ಕೇಂದ್ರ, ಗ್ರಾಮಕ್ಕೆ ಮರಕಲು ಎಂಬ ಹೆಸರೂ ಇದೆ. ಇಲ್ಲಿರುವ ಶೃಂಗೇಶ್ವರ (ಋಷ್ಯ ಶೃಂಗೇಶ್ವರ) ದೇವಾಲಯ ಈ ಸುತ್ತಿನಲ್ಲಿ ಬಹು ಪ್ರಸಿದ್ಧವಾದುದು. ಇದು ದಕ್ಷಿಣ ಕರ್ನಾಟಕದ ಅತೀ ಪ್ರಾಚೀನ ದೇವಾಲಯಗಳಲ್ಲೊಂದು(ಚಿತ್ರಸಂಖ್ಯೆ50). ಇಲ್ಲಿರುವ ಆಳುಪ ವಂಶದ ಗುಣಸಾಗರ ಮತ್ತು ಚಿತ್ರವಾಹನ. ಇವರ ಶಾಸನಗಳು ಈ ದೇವಾಲಯದ ಪ್ರಾಚೀನತೆಯನ್ನು ಸಾರುವುದಲ್ಲದೆ, ಅದು ಅಂದು ಕೀದ್ಗಾನೇಶ್ವರ ದೇವಾಲಯ ಎಂದು ಪ್ರಸಿದ್ಧವಾಗಿತ್ತೆಂಬ ಅಂಶವನ್ನು ತಿಳಿಸುತ್ತದೆ.

ಈ ದೇವಾಲಯವನ್ನು ಬಹುಶಃ ಕ್ರಿ.ಶ. 14ನೇ ಶತಮಾನದಲ್ಲಿ ವಿಜಯನಗರ ಆಳ್ವಿಕೆಯಲ್ಲಿ ಕಟ್ಟಿಸಿರಬಹುದೆಂದು ನಂಬಲಾಗಿದೆ.[7] ಇದು ಬಹು ಸುಂದರವಾಗಿದ್ದು ಗ್ರಾನೈಟ್ ಕಲ್ಲುಗಳಿಂದ ಕಟ್ಟಲ್ಪಟ್ಟಿದೆ(ಚಿತ್ರಸಂಖ್ಯೆ51). ಎರಡು ಪ್ರಾಕಾರಗಳನ್ನೊಂದಿರುವ ಇದು ಒಳ ಮತ್ತು ಹೊರ ಪ್ರಾಕಾರಗಳನ್ನು ಹೊಂದಿದೆ. ಸ್ವಾಭಾವಿಕ ನೋಟವನ್ನು ಹೊಂದಿರುವ ಬಹು ಸೊಗಸಾದ ವಿಗ್ರಹವಿದೆ. ವಾಸ್ತುಶಿಲ್ಪದ ದೃಷ್ಟಿಯಿಂದ ಬಹು ಮುಖ್ಯವಾಗಿದೆ. ಮುಂದಿನ ಎರಡು ಕಂಬಗಳು ಮನುಷ್ಯ ಸವಾರಿ ಮಾಡುತ್ತಿರುವ ಸಿಂಹಗಳನ್ನು ಹೊಂದಿವೆ. ಈ ದೇವಾಲಯವು ಗರ್ಭಗೃಹ, ಸಾಮಾನ್ಯ ಸುಕನಾಸಿ, ಪ್ರದಕ್ಷಿಣ ಮತ್ತು ನವರಂಗವನ್ನು ಹೊಂದಿವೆ. ಗರ್ಭಗೃಹದಲ್ಲಿ 1.5 ಮೀಟರ್ ಎತ್ತರದಲ್ಲಿರುವ ಶೃಂಗೇಶ್ವರ ವಿಗ್ರಹವಿದೆ. ಈ ವಿಗ್ರಹವನ್ನು ಈ ರೀತಿಯಲ್ಲಿ ಕರೆಯಲು ಕಾರಣ ಈ ಲಿಂಗವನ್ನು ಋಷಿಸಿಂಗನೆಂಬ ಋಷಿಯ ಮಗ ವಿಭಂಡಕನು ಸ್ಥಾಪಿಸಿದನೆಂದು ನಂಬಲಾಗಿದೆ.

ಗರ್ಭಗೃಹದ ಮುಂಭಾಗ ಸುಕನಾಸಿಯ ಎರಡು ಕಡೆಗಳಲ್ಲಿ ಬಲ ಭಾಗದಲ್ಲಿ ಗಣಪತಿ ವಿಗ್ರಹವಿದೆ. ಅದಕ್ಕೆ ಎರಡು ಕೈಗಳಿದ್ದು ಸೊಂಡಿಲು ಬಲಗಡೆ ತಿರುಗಿದೆ. ಎಡ ಭಾಗದಲ್ಲಿ ಮಹಿಷಾಸುರಮರ್ಧಿನಿ ವಿಗ್ರಹವಿದೆ.

ಪುರಾಣವೊಂದರ ಪ್ರಕಾರ ಋಷ್ಯಶೃಂಗನು ಕುಚೇಷ್ಠೆಯುಳ್ಳವನಾಗಿದ್ದು ಜಿಂಕೆಯ ಮುಖವುಳ್ಳವನಾಗಿದ್ದು, ಕೋಡನ್ನು ಹೊಂದಿದ್ದನು. ಈ ಲಿಂಗವು ಮೂರು ಉಬ್ಬಿದ ಭಾಗಗಳನ್ನೊಂದಿದ್ದು, ಲಿಂಗದ ತಲೆಯ ಉಬ್ಬಿದ ಭಾಗವು ಋಷ್ಯಶೃಂಗನ ಹೋಲಿಕೆಯಾದರೆ, ಎಡಭಾಗದಲ್ಲಿ ಮತ್ತೊಂದು ಋಷ್ಯಶೃಂಗನ ಹೆಂಡತಿಯ ಹೋಲಿಕೆಯಾಗಿದೆ. ಮುಂದಿರುವ ಉಬ್ಬು ನಂದಿಯ ಹೋಲಿಕೆಯಾಗಿದೆ.[8]

ನವರಂಗದಲ್ಲಿರುವ ಕಂಬಗಳು ಅಷ್ಟಭುಜಾಕೃತಿಯವಾಗಿದ್ದು, ಚೌಕಾಕಾರದ ಮೌಲ್ಡಿಂಗ್ಸ್ ಹೊಂದಿದೆ. ಕೆಳಭಾಗವು ವೃತ್ತಾಕಾರದಲ್ಲಿದೆ ಇಲ್ಲಿನ ಕಂಬದಲ್ಲಿ ಸುಂದರ ಚಿತ್ರಗಳಿದ್ದು ವಿಜಯನಗರ ಕಲಾತ್ಮಕತೆಯನ್ನು ಹೊಂದಿವೆ. ಈ ನವರಂಗದಲ್ಲಿ ಮೂರು ಪ್ರವೇಶ ದ್ವಾರವನ್ನೊಂದಿದ್ದು ನಾಲ್ಕು ವಾಸ್ತು ಶಿಲ್ಪಾಕೃತಿಯ ಕಂಬಗಳಿವೆ. ಜನರು ಮಳೆಗಾಗಿ ಈ ದೇವರಿಗೆ ಮೊರೆ ಇಡುತ್ತಾರೆ. ಪ್ರತಿವರ್ಷ ಮಾರ್ಚ್ ತಿಂಗಳಲ್ಲಿ ಶಾಂತ–ಋಷ್ಯಶೃಂಗೇಶ್ವರ ಜಾತ್ರೆ ಎರಡು ದಿನಗಳ ಕಾಲ ನಡೆಯುತ್ತದೆ.

**ಪ್ರವಾಸಿಗರು ತಲುಪುವ ಮಾರ್ಗ:** ಶೃಂಗೇರಿಯಿಂದ ಸುಮಾರು 10 ಕಿ.ಮೀ. ಪಶ್ಚಿಮಕ್ಕೆ ಪ್ರಯಾಣಿಸಬೇಕು. ಶೃಂಗೇರಿಯಿಂದ ಕಿಗ್ಗ ತಲುಪಲು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ (ಕೆ.ಎಸ್.ಆರ್.ಟಿ.ಸಿ)ದ ಮತ್ತು ಖಾಸಗಿ ಬಸ್‌ಗಳ ಸೌಲಭ್ಯವಿದೆ.

**ವಸತಿ ಸೌಕರ್ಯ:** ಈ ದೇವಾಲಯದ ಬಲಭಾಗದಲ್ಲಿ ಇತ್ತೀಚೆಗೆ ದೇವಾಲಯದ ವಸತಿ ಭವನವನ್ನು ಕಟ್ಟುತ್ತಿದ್ದಾರೆ. ಈ ನಿರ್ಮಾಣ ಕಾರ್ಯ ಪೂರ್ಣಗೊಂಡರೆ ಶೃಂಗೇರಿಯಿಂದ ಕಿಗ್ಗಕ್ಕೆ ಬರುವ ಪ್ರವಾಸಿಗರು ಕಿಗ್ಗದಲ್ಲಿ ಉಳಿದುಕೊಂಡು, ಸಮೀಪದಲ್ಲಿರುವ "ಸಿರಿಮನೆ ಜಲಪಾತ"ದ ಪ್ರಕೃತಿ ಸೌಂದರ್ಯವನ್ನು ಸವಿಯಬಹುದು.

**ಉದ್ಯೋಗ:** ದೇವಾಲಯದ ಸಮೀಪ ಟೀ ಸ್ಟಾಲ್ ಹಾಗೂ ಪೂಜಾ ಸಾಮಾಗ್ರಿಗಳ ಅಂಗಡಿಗಳಿರುವುದರಿಂದ, ಪ್ರವಾಸಿಗರನ್ನೆ ಅವಲಂಬಿಸಿ ಹತ್ತಾರು ಜನರು ಜೀವನ ಮಾಡುತ್ತಿದ್ದಾರೆ. ಇಲ್ಲಿಂದ ಸಿರಿಮನೆ ಜಲಪಾತಕ್ಕೆ ಹೋಗುವವರು ಆಟೋ, ಟ್ಯಾಕ್ಸಿ ಮೂಲಕ ತೆರಳುವುದರಿಂದ ಟ್ಯಾಕ್ಸಿಯವರಿಗೆ ಉದ್ಯೋಗ ಕಲ್ಪಿಸಿದಂತಾಗಿದೆ.

**ಕಳಸೇಶ್ವರ ದೇವಾಲಯ, ಕಳಸ**

ಮೂಡಿಗೆರೆ ತಾಲೂಕಿನಲ್ಲಿರುವ ಒಂದು ಗ್ರಾಮ. ಮೂಡಿಗೆರೆಯ ವಾಯುವ್ಯಕ್ಕೆ 35 ಕಿ.ಮೀ. ದೂರದಲ್ಲಿ ಭದ್ರಾನದಿ ಬಲದಂಡೆಯ ಬಳಿ ಸಹ್ಯಾದ್ರಿಯ ಉತ್ತುಂಗ ಶ್ರೇಣಿಗಳ ನಡುವಣ ಕಣಿವೆಯಲ್ಲಿದೆ.

ಇದು ಕಾರ್ಕಳದ ಭೈರರಸರ ಆಳ್ವಿಕೆಯಲ್ಲಿ ಒಂದು ಮುಖ್ಯಸ್ಥಳವಾಗಿತ್ತು. ಆ ಕಾಲದಲ್ಲಿ ಕಟ್ಟಿದ ಇಲ್ಲಿಯ ಕಳಸೇಶ್ವರ ದೇವಾಲಯ ದೊಡ್ಡದು(ಚಿತ್ರಸಂಖ್ಯೆ52). ಅದರ ಸುತ್ತಲೂ ಭೈರರಸರ ಅನೇಕ ಶಾಸನಗಳಿವೆ. ಉತ್ತರದಿಂದ ಬಂದ ಶ್ರುತಬಿಂದುವೆಂಬ ರಾಜ ತಾನು ಬೇಟೆಯಲ್ಲಿ ಪ್ರಾಣಿಗಳನ್ನು ಕೊಂದ ಪಾಪದ ಪ್ರಾಯಶ್ಚಿತ್ತವಾಗಿ ಈ ಮಂದಿರವನ್ನು ಕಟ್ಟಿಸಿದನೆಂದು ಐತಿಹ್ಯ.[9] ಇದು ಮೊದಲಿಗೆ ಜೈನ ಮಂದಿರವಾಗಿತ್ತೆಂದು ಊಹೆ ಇದೆ.

ಗರ್ಭಗುಡಿ, ನವರಂಗ ಮತ್ತು ಮುಖಮಂಟಪಗಳಿಂದ ಕೂಡಿರುವ ಈ ದೇವಾಲಯದ ಗರ್ಭಗುಡಿಯಲ್ಲಿರುವ 1 ಅಡಿ ಎತ್ತರದ ಲಿಂಗ ಉತ್ತರಕ್ಕೆ ಬಾಗಿದೆ. ಗರ್ಭಗುಡಿಯ ಮೇಲಿನ ಶಿಖರಕ್ಕೆ ಲೋಹದ ಹೊಂದಿಕೆಯಿದೆ. ನವರಂಗದಲ್ಲಿ 16 ಕಲ್ಲಿನ ಕಂಬಗಳಿವೆ. ಇದಕ್ಕೆ ಉತ್ತರ ಮತ್ತು ದಕ್ಷಿಣ ದಿಕ್ಕುಗಳಲ್ಲಿ ದ್ವಾರಗಳಿವೆ. ಮುಖಮಂಟಪದ ಒಳಪಕ್ಕದಲ್ಲಿ ನಾಲ್ಕು ಕಂಬಗಳೂ ಮುಂಭಾಗದಲ್ಲಿ ದ್ರಾವಿಡಶೈಲಿಯ ಅಡಿಯಲ್ಲಿ ಸಿಂಹಗಳಿರುವ ಎರಡು ಕಂಬಗಳೂ ಇವೆ. ಈ ಕಳಸೇಶ್ವರ ಅಥವಾ ಕಳಸನಾಥ ದೇವಾಲಯವು ಈಗಿರುವ ಸ್ಥಿತಿಯಲ್ಲಿ ಸು. 17–18ನೇ ಶತಮಾನದ್ದಿರಬಹುದು. ಆದರೆ ಅಕ್ಕಪಕ್ಕಗಳಲ್ಲಿ ದೊರಕುವ ವಾಸ್ತು ಅವಶೇಷಗಳು ಮತ್ತು ಕೆಲವು ಶಿಲ್ಪಗಳು ನಿರ್ದಿಷ್ಟವಾಗಿ ಹೊಯ್ಸಳ ಶೈಲಿಗೆ ಸೇರಿದ್ದವಾದ್ದರಿಂದ ಇಲ್ಲಿ ಮೊದಲಿಗೆ ಹೊಯ್ಸಳ ದೇವಾಲಯವಿದ್ದು, ಅದು ಪಾಳುಬಿದ್ದ ಮೇಲೆ ನಾಯಕರ ಕಾಲದಲ್ಲಿ ಈಗಿನ ಕಟ್ಟಡಗಳನ್ನು ಕಟ್ಟಿದರೆಂದು ಕಾಣುತ್ತದೆ.

ಭದ್ರಾ ನದಿಯ ಸಮೀಪದಲ್ಲಿ ಪಂಚತೀರ್ಥಗಳಿದ್ದು, ಅವುಗಳೆಂದರೆ ಕೋಟಿತೀರ್ಥ, ರುದ್ರತೀರ್ಥ, ಅಂಬುತೀರ್ಥ, ನಾಗತೀರ್ಥ ಮತ್ತು ವಸಿಷ್ಠತೀರ್ಥ. ಕಳಸವನ್ನು ಪಂಚಕ್ಷೇತ್ರಗಳಲ್ಲಿ ಒಂದೆಂದು ಗುರುತಿಸಲಾಗಿದೆ. ಮಿತ್ರ ಮತ್ತು ವರುಣರೆಂಬ ಇಬ್ಬರು ಋಷಿ ಸಹೋದರರು ಈ ಸ್ಥಳದಲ್ಲಿ ಪ್ರಚೋದನೆಯಿಂದ ತಪಸ್ಸನ್ನಾಚರಿಸಿದ್ದರೆಂದು. ಪುರಾಣವೊಂದರ ಪ್ರಕಾರ ಇಂದ್ರನು ನೀಡಿದಂತಹ **‘ಕಳಸ’** (ಕುಂಭ)ದಲ್ಲಿ ಪ್ರಸಿದ್ಧ ಅಗಸ್ತ್ಯನು ಹುಟ್ಟಿದನು. ಆದ್ದರಿಂದ ಅವನಿಗೆ ಕುಂಭೋದ್ಭವ ಅಥವಾ ಕುಂಭಸಂಭವನೆಂದು ಕರೆಯಲಾಗಿದೆ. ಅಗಸ್ತ್ಯನು ಭದ್ರಾ ನದಿಯ ದಂಡೆಯ ಮೇಲೆ ಆಶ್ರಮವನ್ನು ಹೊಂದಿದ್ದನು.

ಈ ಸ್ಥಳದ ಪೂರ್ವ ದಿಕ್ಕಿನಲ್ಲಿ ಈ ದೇವಾಲಯವು ಪೂರ್ವಕ್ಕೆ ಮುಖ ಮಾಡಿ ನಿಂತಿದೆ. ಹೊರ ಪ್ರಕಾರವು ಆಧುನಿಕ ಶೈಲಿಯಲ್ಲಿದ್ದು ಮುಂಭಾಗ ಕಲ್ಲುಮರ ಮತ್ತು ಟೈಲ್ಸ್‌ಗಳಿಂದ ಮಾಡಲ್ಪಟ್ಟಿದೆ. ಕ್ರಿ.ಶ. 1512ರಲ್ಲಿ ಆಧುನೀಕರಿಸಿದೆ.[10] ಉತ್ತರಕ್ಕೆ ಬಾಗಿರುವ ಲಿಂಗವು ಗರ್ಭಗೃಹದಲ್ಲಿದೆ. ನವರಂಗವು ಉತ್ತರ ಮತ್ತು ದಕ್ಷಿಣಕ್ಕೆ ದ್ವಾರಗಳನ್ನೊಂದಿದ್ದು ಹದಿನಾರು ಮುಖವುಳ್ಳ ಚಕ್ರಾಕಾರದ ಗ್ರಾನೈಟ್ ಕಂಬಗಳನ್ನೊಂದಿದೆ. ಮುಖಮಂಟಪವು ನಾಲ್ಕು ಸಾಮಾನ್ಯ ಕಂಬಗಳಿಂದ ಮುಂಭಾಗದಲ್ಲಿ ಎರಡು ಸಿಂಹಾಕೃತಿಯ ಕಂಬಗಳಿಂದ ಕೂಡಿದ್ದು ವಿಜಯನಗರ ಶೈಲಿಯಲ್ಲಿದೆ. ಈ ದೇವಾಲಯ ಸುಂದರವಾಗಿ ಕೆತ್ತನೆಯುಳ್ಳ ಭುವನೇಶ್ವರಿಯ ಮೂರ್ತಿಯನ್ನೊಂದಿದೆ. ದೇವಾಲಯದ ಪ್ರವೇಶ ದ್ವಾರದಲ್ಲಿ ಮೆಟ್ಟಿಲುಗಳ ಸಾಲಿದ್ದು, ಬಲಭಾಗದಲ್ಲಿ ಸಣ್ಣಮಂದಿರವಿದ್ದು ಹೊಯ್ಸಳರ ಕಲಾಶೈಲಿಯನ್ನು ಬಿಂಬಿಸುವ ಆನೆಯಾಕೃತಿಯ ಸುತ್ತ ಕೆತ್ತಿದ ಗಣಪತಿ ಮೂರ್ತಿ ಇದೆ. ಗಣಪತಿಯು ಈ ಸ್ಥಳದಲ್ಲಿದ್ದ ಕಾಳಾಸುರನನ್ನು ಸಂಹರಿಸಿ ಈ ಆಕಾರವನ್ನು ಪಡೆದನೆಂದು ನಂಬಲಾಗಿದೆ. ಗೋಪುರವು ಶಿಖರವನ್ನೊಂದಿದ್ದು ತುದಿಯಲ್ಲಿ ಲೋಹದ ಕಳಸವನ್ನು ಹೊಂದಿದೆ(ಚಿತ್ರಸಂಖ್ಯೆ53). ಮಲೆನಾಡಿನಲ್ಲಿ ದೊರೆಯುವ ಕಲ್ಲಿನಲ್ಲಿ ಕೆತ್ತನೆ ಮಾಡಲಾಗಿದೆ.

ಈ ದೇವಸ್ಥಾನದ ಪಕ್ಕದಲ್ಲಿ ಕ್ಷೇತ್ರಪಾಲ ಮಂದಿರವಿದೆ. ಇದನ್ನು ಬಳಪದ ಕಲ್ಲಿನಿಂದ ಕಟ್ಟಲಾಗಿದೆ. ಈ ಮಂದಿರದ ಸುತ್ತ ಪ್ರಾಣಿಗಳ ಚಿತ್ರಗಳ ಸಾಲಿದ್ದು, ಪರಿಧಿಯು ಎರಡು ಅಡಿಗಳ ಎತ್ತರವಾಗಿದೆ. ಇದರಲ್ಲಿ ಏಳು ಕುದುರೆಗಳ ಚಿತ್ರವಿದೆ. ಮೆಟ್ಟಿಲುಗಳ ಹತ್ತಿರ ಮುಖ್ಯದ್ವಾರದಲ್ಲಿ 2 ಅಡಿಗಳ ಉದ್ದದ ಗಂಭೀರ ಸ್ವರೂಪದಲ್ಲಿರುವ ಸಿಂಹದ ಚಿತ್ರವಿದೆ. ಇದನ್ನು ಸಹ ಬಳಪದಕಲ್ಲಿನಿಂದ ಮಾಡಿದ್ದು. ಹೊಯ್ಸಳ ಕಾಲದ ಕಲಾತ್ಮಕತೆಯನ್ನು ಹೊಂದಿದೆ. ಈ ದೇವಾಲಯದ ಎದುರಿಗೆ ಪಾರ್ವತಿ ದೇವಿಯ ದೇವಾಲಯವಿದ್ದು, ಇದನ್ನು ಸರ್ವಾಂಗಸುಂದರಿ ಅಮ್ಮನವರು ಎಂದು ಕರೆಯಲಾಗುತ್ತದೆ. ಇದು ವಿಜಯನಗರ ಕಲಾಶೈಲಿಯಲ್ಲಿದೆ. ಗಮನಿಸಬಹುದಾದ ಮತ್ತೊಂದು ವಾಸ್ತುಶಿಲ್ಪವೆಂದರೆ ಬಾಗಿಲ ಮುಂದೆ ಇಬ್ಬರು ಮಹಿಳೆಯರು ಸಿಂಹದ ಮೇಲೆ ಸವಾರಿ ಮಾಡುತ್ತಿರುವ ದೃಶ್ಯ. ಗಿರಿಜಾ ಕಲ್ಯಾಣೋತ್ಸವ ಹಬ್ಬವನ್ನು ಕಾರ್ತಿಕ ಮಾಸದಲ್ಲಿ ಇಲ್ಲಿನಡೆಸಲಾಗುತ್ತದೆ. ಕಲ್ಲೇಶ್ವರ ದೇವಾರ ವಾರ್ಷಿಕ ಜಾತ್ರೆಯು ಫೆಬ್ರವರಿ–ಮಾರ್ಚ್ ತಿಂಗಳಲ್ಲಿ 3 ದಿನಗಳ ಕಾಲ ನಡೆಯುತ್ತದೆ. ವೆಂಕಟರಮಣ, ಆಂಜನೇಯ, ವೀರನಾರಾಯಣ, ಗೋಪಾಲಕೃಷ್ಣ, ಗಂಗಾಧರೇಶ್ವರ, ಗಣಪತಿ, ಚನ್ನಕೇಶವ, ಬಿಂದುಮಾಧವ, ದುರ್ಗ ಮತ್ತು ಕಾಲಭೈರವರ ಮಂದಿರಗಳನ್ನು ನೋಡಬಹುದು.

## ಪ್ರವಾಸಿಗರಿಗಾಗಿ ಕೈಗೊಳ್ಳಬಹುದಾದ ಕ್ರಮಗಳು

1. ಕಳಸ ಕ್ಷೇತ್ರಕ್ಕೆ ಪ್ರವಾಸಿಗರು ಸಾವಿರಾರು ಸಂಖ್ಯೆಯಲ್ಲಿ ಆಗಮಿಸಿದರೂ ಕೂಡ ಇಲ್ಲಿ ವಸತಿ ವ್ಯವಸ್ಥೆಯಿಲ್ಲ. ಕಳಸದಲ್ಲಿ ಖಾಸಗಿಯಾಗಿ ಕೆಲವು ವಸತಿ ಗೃಹಗಳಿವೆ. ತಂಗಲು ಉತ್ತಮ ಸ್ಥಳ ಎಂದರೆ ಹತ್ತಿರದ ಹೊರನಾಡು. ಹಾಗಾಗಿ ಪ್ರವಾಸಿಗರಿಗೆ ವಸತಿ ವ್ಯವಸ್ಥೆ ಮಾಡುವ ಅವಶ್ಯಕತೆಯಿದೆ.
2. ಚಿಕ್ಕಮಗಳೂರಿನಿಂದ ಹಾಗೂ ಮೂಡಗೆರೆಯಿಂದ ಬಸ್ ಸೌಕರ್ಯವಿದೆ. ಆದರೆ ಈ ಪುಣ್ಯ ಕ್ಷೇತ್ರವು ಹೊರನಾಡು ಸಮೀಪವಿರುವುದರಿಂದ ಹೊರನಾಡಿನಿಂದ ಕಳಸಕ್ಕೆ ಕ.ರಾ.ರ.ಸಾ.ನಿ.ದ ವತಿಯಿಂದ ಹೆಚ್ಚಿನ ಬಸ್ಸಿನ ಸೌಕರ್ಯ ಕಲ್ಪಿಸಬೇಕು.

## ಶೃಂಗೇರಿಯ ದೇವಾಲಯಗಳು

ಶೃಂಗೇರಿ ತುಂಗಾ ನದಿಯ ದಂಡೆಯ ಮೇಲಿದೆ. ಚಿಕ್ಕಮಗಳೂರಿನಿಂದ ಪಶ್ಚಿಮಕ್ಕೆ 88 ಕಿ.ಮೀ. ದೂರದಲ್ಲಿದ್ದು, ಶಿವಮೊಗ್ಗದಿಂದ ನೈರುತ್ಯಕ್ಕೆ 102 ಕಿ.ಮೀ. ದೂರದಲ್ಲಿದೆ. ತರೀಕೆರೆಯಿಂದ ನೈರುತ್ಯಕ್ಕೆ 122 ಕಿ.ಮೀ. ದೂರದಲ್ಲಿದೆ. ಮತ್ತು ಬೆಂಗಳೂರಿನಿಂದ ವಾಯುವ್ಯಕ್ಕೆ 334 ಕಿ.ಮೀ. ದೂರದಲ್ಲಿದೆ. ಈ ಸ್ಥಳವು ತಾಲೂಕು ಕೇಂದ್ರವಾಗಿದೆ. ಪುರಾಣವೊಂದರ ಪ್ರಕಾರ ಶ್ರೀರಾಮನ ತಂದೆ ದಶರಥ ಮಹಾರಾಜನು ಈ ಸ್ಥಳದಲ್ಲಿ ಯಜ್ಞವನ್ನು ವಿಭಂಡಕನ ಋಷಿಯ ಮಗನಾದ ಋಷ್ಯಶೃಂಗನ ಅಧ್ಯಕ್ಷತೆಯಲ್ಲಿ ನೆರವೇರಿಸಿದ್ದನಂತೆ. ಈ ಸ್ಥಳವನ್ನು ಋಷ್ಯಶೃಂಗನ ಹೆಸರಿನಿಂದ ಗುರುತಿಸಲಾಗಿದೆ. ಇದನ್ನು ಶೃಂಗಗಿರಿ ಮತ್ತು ಶೃಂಗೇರಿಯಾಗಿ ರೂಪ ಪಡೆಯಿತೆಂದು ನಂಬಲಾಗಿದೆ. ಶೃಂಗೇರಿಯು ತನ್ನ ಮಠದಿಂದ ಪ್ರಸಿದ್ಧವಾಗಿದೆ. ಇಲ್ಲಿರುವ ಮಠ 'ಜಗದ್ಗುರು ಶಂಕರಾಚಾರ್ಯ ಮಹಾಸಂಸ್ಥಾನ ದಕ್ಷಿಣಾಮ್ನಾಯ ಶ್ರೀ ಶಾರದಾ ಪೀಠಮ್'. ಇದು ಅದ್ವೈತ ತತ್ವಗಳನ್ನು ಪ್ರತಿಪಾದಿಸುತ್ತದೆ ಮತ್ತು ಸ್ಮಾರ್ತ ಸಂಪ್ರದಾಯವನ್ನೊಂದಿದೆ. ಹಲವಾರು ದೇವಾಲಯಗಳಿಂದ ಸುತ್ತುವರೆದ ಈ ಸ್ಥಳವು ಮನಮೋಹಕ ನೈಸರ್ಗಿಕ ದೃಶ್ಯವನ್ನೊಂದಿದೆ ಮತ್ತು ಹಿತಕರವಾದ ವಾಯುಗುಣ ಹೊಂದಿದೆ.

ಚಿಕ್ಕಮಗಳೂರು ಜಿಲ್ಲೆಯ ಒಂದು ತಾಲೂಕು ಮತ್ತು ತಾಲ್ಲೂಕಿನಲ್ಲಿ ಆಡಳಿತ ಕೇಂದ್ರ ಈ ತಾಲೂಕನ್ನು ಪೂರ್ವದಲ್ಲಿ ಕೊಪ್ಪ, ಉತ್ತರದಲ್ಲಿ ತೀರ್ಥಹಳ್ಳಿ ಮತ್ತು ಕೊಪ್ಪ ಪಶ್ಚಿಮದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಕಳ, ದಕ್ಷಿಣದಲ್ಲಿ ಮೂಡಿಗೆರೆ ತಾಲ್ಲೂಕುಗಳನ್ನು ಸುತ್ತುವರಿದಿವೆ. 49 ಗ್ರಾಮಗಳಿರುವ ಈ ತಾಲ್ಲೂಕಿನ ವಿಸ್ತೀರ್ಣ 433.7.

## ಶೃಂಗೇರಿ ಮಠ

ಎರಡನೇಯ ಜೈನ ಶಾಸನದ ನಂತರ 185 ವರ್ಷಗಳ ನಂತರ ಈ ಸ್ಥಳದಲ್ಲಿ ಕ್ರಿ.ಶ. 1340ರಲ್ಲಿ ರಚಿತವಾದ ಶಾಸನವಿದೆ. ಕ್ರಿ.ಶ. 1336ರಲ್ಲಿ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯ ಹತ್ತು ವರ್ಷಗಳ ನಂತರ ಅಂದರೆ ಕ್ರಿ.ಶ. 1346ರಲ್ಲಿ ತನ್ನ ನಾಲ್ಕು ಜನ ಸಹೋದರರೊಂದಿಗೆ ತನ್ನ ಅಳಿಯ ಬಲ್ಲಾಪ್ಪ ದಂಡಣ್ಣಾಯಕ ಆತನ ಮಗ ಕುಮಾರ ಸೋಮಣ್ಣ, ಇತರರು ಈ ಸ್ಥಳಕ್ಕೆ ಬಂದು ವಿಜಯನಗರ ಸ್ಥಾಪನೆಯ ಗುರಿಯು ಯಶಸ್ವಿಯಾಗಿದ್ದರ ದ್ಯೋತಕವಾಗಿ ವಿಜಯೋತ್ಸವವನ್ನು ಇಲ್ಲಿ ಆಚರಿಸಿದ್ದರಂತೆ. ಈ ಶಾಸನವು ಗುರು ವಿದ್ಯಾತೀರ್ಥರ ನಮನಗಳನ್ನರ್ಪಿಸುವುದರೊಂದಿಗೆ ಆರಂಭವಾಗುತ್ತದೆ. ಈ ಶಾಸನದಲ್ಲಿ ಹರಿಹರರನ್ನು ಸಂಬಂಧಿಗಳೊಂದಿಗೆ ಸಂತಲಿನಾಡಿನ ಕೆಳನಾಡಿನಲ್ಲಿರುವ 9 ಹಳ್ಳಿಗಳನ್ನು ಭಾರತೀತೀರ್ಥ ಶ್ರೀಪಾದರಿಗೆ ಧಾರ್ಮಿಕ ವಿಧಿವಿಧಾನಗಳನ್ನು ಆಚರಿಸಲು ನೀಡಿದ್ದನೆಂದು ತಿಳಿಸುತ್ತದೆ. ಈ ಹಳ್ಳಿಯನ್ನು ಭಾರತೀತೀರ್ಥ ಶ್ರೀಪಾದ ಮತ್ತು ಇತರೆ ಶೃಂಗೇರಿಯ ನಲವತ್ತು ಬ್ರಾಹ್ಮಣರಿಗೆ ನೀಡಲಾಗಿತ್ತು. ಕ್ರಿ.ಶ. 1356ರ ಶಾಸನವು ವಿಜಯನಗರದ ಒಂದನೆಯ ಬುಕ್ಕನು ಶೃಂಗೇರಿಗೆ ಭೇಟಿ ನೀಡಿ ವಿದ್ಯಾತೀರ್ಥರ ದರ್ಶನವನ್ನು ಪಡೆದಿದ್ದರೆಂದು ತಿಳಿಸುತ್ತದೆ.[11] ಮಠಕ್ಕೆ ನೀಡಿದ ಭೂಮಿಯನ್ನು 300 ಗದ್ಯಾಣಗಳನ್ನು ಮಠವು ಗಳಿಸಿತ್ತೆಂದು ಹೇಳಲಾಗಿದೆ. ನಂತರದ ದಿನಗಳಲ್ಲಿ ಇನ್ನು ಹೆಚ್ಚಿನ ಭೂಮಿಯನ್ನು ದತ್ತಿಯಾಗಿ ನೀಡಲಾಯಿತೆಂದು ಶಾಸನಗಳು ತಿಳಿಸುತ್ತವೆ.

ವಿದ್ಯಾತೀರ್ಥರ ಆಧ್ಯಾತ್ಮಿಕ ಸಾಧನೆಯು ವಿಶಿಷ್ಟವಾದದ್ದಾಗಿತ್ತು. ಅವರನ್ನು ವಿಜಯನಗರದ ಅರಸರು ಗೌರವ ನೀಡಿ ಆದರ ಆತಿಥ್ಯಗಳನ್ನು ನೀಡಿದರೆಂದು ತಿಳಿಸುತ್ತದೆ. ಈ ಶಾಸನ ಕ್ರಿ.ಶ.1378ರಲ್ಲಿ[12] ವಿದ್ಯಾರಣ್ಯ ಶ್ರೀಪಾದರ ಆಜ್ಞೆಯೊಂದಿಗೆ ಶ್ರೀಮಠಕ್ಕೆ ಭೂಮಿಯನ್ನು ದತ್ತಿಯಾಗಿ ನೀಡಲಾಗಿತ್ತಂತೆ. ಎರಡನೇ ಹರಿಹರನು ಸಹ ಈ ಮಠಕ್ಕೆ ಕ್ರಿ.ಶ.1387ರಲ್ಲಿ[13] ಭೂಮಿಯನ್ನು ನೀಡಿದ್ದನೆಂದು ಶಾಸನವೊಂದು ಆತನ ಶ್ರೀ ಮಠದ ಪರಮಭಕ್ತನಾಗಿದ್ದ ನಂತರ ಕ್ರಿ.ಶ. 1387ರಲ್ಲಿ ಮತ್ತು 1389–90ರಲ್ಲಿ ಆತನು ಹೆಚ್ಚುವರಿ ಭೂಮಿಯನ್ನು ಈ ಮಠಕ್ಕೆ ನೀಡಿದ್ದನು. ಆತನು ಕ್ರಿ.ಶ.1388ರಲ್ಲಿ[14] ಶೃಂಗೇರಿಯಲ್ಲಿ ವಿದ್ಯಾರಣ್ಯರ ಹೆಸರಲ್ಲಿ ಅಗ್ರಹಾರವನ್ನು ನಿರ್ಮಿಸಿದನು ಎಂದು ಶಾಸನ ತಿಳಿಸುತ್ತದೆ. ಮುಂದೆ ಆ ಅಗ್ರಹಾರವನ್ನು ವಿದ್ಯಾರಣ್ಯಪುರವೆಂದು ಕರೆದನು. ಹೆಚ್ಚುವರಿ ಭೂಮಿ ಮತ್ತು ಹಳ್ಳಿಗಳನ್ನು ಪಡೆದ ಶೃಂಗೇರಿಯ ಮಠವು ಸ್ವಾಯತ್ತ ಸಂಸ್ಥೆಯಾಗಿ ಬೆಳೆದು 'ಸಂಸ್ಥಾನ' ಹೆಸರಿನಲ್ಲಿ ಗುರುತಿಸಲ್ಪಟ್ಟಿತ್ತು. ಎರಡನೇ ಹರಿಹರನ ಉತ್ತರಾದಿಗಳು ಈ ಮಠಕ್ಕೆ ಪ್ರೋತ್ಸಾಹ ನೀಡುತ್ತಾ ಮುಂದುವರೆದರು. ವಿಜಯನಗರ ಸಾಮ್ರಾಜ್ಯದ ಅವನತಿಯ ನಂತರ

ಕೆಳದಿಯ ನಾಯಕರು ಸಹ ಅದೇ ರೀತಿಯ ವಾತ್ಸಲ್ಯವನ್ನು ಈ ಮಠದ ಮೇಲಿಟ್ಟಿದ್ದರು. ಕೆಳದಿ ವೆಂಕಟಪ್ಪನಾಯಕನು ಈ ಮಠಕ್ಕೆ ದತ್ತಿಯನ್ನು ನೀಡಿದ್ದನು. ದಕ್ಷಿಣ ಕನ್ನಡ ಕಾರ್ಕಳದ ಭೈರ ಅರಸನು ಶೃಂಗೇರಿಯನ್ನು ಲೂಟಿ ಮಾಡಿದಾಗ ಕೆಳದಿಯ ವೀರಭದ್ರ ನಾಯಕನು ಅದನ್ನು ನಿರ್ಬಂಧಿಸಿದ್ದನಂತೆ. ಕೆಳದಿಯ ನಂತರದ ದೊರೆಗಳು ಈ ಮಠಕ್ಕೆ ಸಹಾಯ ಹಸ್ತ ನೀಡುವ ಸಂಪ್ರದಾಯವನ್ನು ಮುಂದುವರೆಸಿದ್ದರು. ಉದಾರವಾಗಿ ಹಣಕಾಸಿನ ಸಹಾಯ ಮಾಡಿದ್ದರು. ಕ್ರಿ.ಶ. 1652ರಲ್ಲಿ[15] ಕೆಳದಿ ಶಿವಪ್ಪನಾಯಕನ ಸಮಯದಲ್ಲಿ ರಚಿತವಾದ ಶಾಸನವು ವಿಜಯನಗರದ ಅರಸ ಎರಡನೆಯ ಹರಿಹರನು ಮಲ್ಲಿಕಾರ್ಜುನನನ್ನು ಪೂಜಿಸಲು ಶೃಂಗೇರಿಯಲ್ಲಿ ಮಠವಿರಬೇಕೆಂದು ಆಶಿಸಿದ್ದನೆಂದು ತಿಳಿಸುತ್ತದೆ. ಇದರೊಟ್ಟಿಗೆ ವಿದ್ಯಾಶಂಕರ ಸ್ವಾಮಿ ಮತ್ತು ಶಾರದ ಅಮ್ಮನವರು ಅವರ ಪೂಜೆಗೆ ವೇದ ಮತ್ತು ಶಾಸ್ತ್ರಗಳನ್ವಯ ಧಾರ್ಮಿಕ ವಿಧಿವಿಧಾನಗಳನ್ನು ಕೈಗೊಳ್ಳಲು ಕೆಲವೊಂದು ಭೂಪ್ರದೇಶವನ್ನು ನೀಡಿ ಶೃಂಗಪುರ ಮತ್ತು ವಿದ್ಯಾರಣ್ಯಪುರಗಳಲ್ಲಿ ಅಗ್ರಹಾರಗಳನ್ನು ಸ್ಥಾಪಿಸಿ 250 ಷೇರುಗಳನ್ನು ಮಾಡಿ ವಿದ್ಯಾರಣ್ಯ ಭಾರತಿ ಸ್ವಾಮಿಯವರಿಗೆ ಸಮರ್ಪಿಸಿದ್ದರಂತೆ. ಮುಂದುವರೆದು ಈ ಶಾಸನವು ಆ ಸಮಯದಲ್ಲಿ ಅಂದರೆ ಕ್ರಿ.ಶ.1652ರಲ್ಲಿ ಭೂ ಸಂಪತ್ತಿನ ವ್ಯವಹಾರಗಳು ಅವ್ಯವಸ್ಥೆಯಲ್ಲಿದ್ದವು ಮತ್ತು ಮಠಕ್ಕೆ ಸಲ್ಲಿಸಬೇಕಾದ ತೆರಿಗೆಯನ್ನು ಸಲ್ಲಿಸಿರಲಿಲ್ಲ. ಆ ಸಮಯದಲ್ಲಿ ಕೆಳದಿ ಶಿವಪ್ಪನಾಯಕನು ಸಮರ್ಥವಾಗಿ ನಿಭಾಯಿಸಿ ವ್ಯವಸ್ಥೆಗೊಳಿಸಿದ್ದನು. ಮಠಕ್ಕೆ ಸಂಬಂಧಪಟ್ಟ ಅಧಿಕಾರಸ್ಥ ಮನೆಗಳಿಂದ ಬೆಲೆ ಬಾಳುವ ವಸ್ತುಗಳನ್ನು ಆಗಾಗೇ ಈ ಮಠಕ್ಕೆ ಸಲ್ಲಿಸುತ್ತಿದ್ದರಂತೆ. ಕ್ರಿ.ಶ. 1739–40ರಲ್ಲಿ ಪೇಶ್ವನು ಶೃಂಗೇರಿ ಪೀಠಕ್ಕೆ ಧಾರ್ಮಿಕ ಸಮ್ಮೇಳನಗಳಲ್ಲಿ ಶೃಂಗೇರಿ ಮಠಕ್ಕೆ ಅಗ್ರಪೂಜೆಯನ್ನು ಸಲ್ಲಿಸಬೇಕೆಂದು ಆಜ್ಞೆಯನ್ನು ಹೊರಡಿಸಿದ್ದನಂತೆ. ಭಕ್ತಾದಿಗಳು ವೈಯುಕ್ತಿಕವಾಗಿ ಮತ್ತು ಸ್ಥಳೀಯವಾಗಿ ಈ ಮಠಕ್ಕೆ ಸಾಕಷ್ಟು ಕಾಣಿಕೆಗಳನ್ನು ನೀಡಿದ್ದರು, ನೀಡುತ್ತಿದ್ದಾರೆ. ಅವರಲ್ಲಿ ಮೈಸೂರಿನ ಅರಸರು ಹಾಗೂ ಟಿಪ್ಪುಸುಲ್ತಾನರು ಪ್ರಮುಖರು.

ಕ್ರಿ.ಶ.1791–92ರಲ್ಲಿ ಮರಾಠ ಸೈನ್ಯ ಮೂರನೇ ಆಂಗ್ಲೋ–ಮೈಸೂರು ಯುದ್ಧದಲ್ಲಿ ಬಿದನೂರಿಗೆ ಹೋಗುತ್ತಿರುವಾಗ ಪಿಂಡಾರಿಗಳು ಮತ್ತು ಇತರರು ಶೃಂಗೇರಿ ಮಠದ ಬೆಲೆಬಾಳುವ ನಗನಾಣ್ಯಗಳನ್ನು ದೋಚಿಕೊಂಡು ಹೋಗಿದ್ದರಂತೆ, ಅದರ ಒಟ್ಟು ಮೌಲ್ಯ 60 ಲಕ್ಷಗಳು. ಹಾಗೆಯೇ ಅವರು ಶಾರದಮಾತೆಯ ಮೂರ್ತಿಯನ್ನು ಅಪವಿತ್ರಗೊಳಿಸಿದ್ದರಂತೆ. ಆ ಸಮಯದಲ್ಲಿ ಅವರು ಕೆಲವು ಪುರೋಹಿತರನ್ನು ಹತ್ಯೆ ಮಾಡಿದ್ದರಂತೆ, ಆಗ ಟಿಪ್ಪುಸುಲ್ತಾನನು ಹಣಕಾಸಿನ ಸಹಾಯ ನೀಡಿದ್ದಲ್ಲದೆ, ಬೆಲೆಬಾಳುವ ಅಪಾರ ವಸ್ತುಗಳನ್ನು ನೀಡಿದ್ದನೆಂದು ಮತ್ತು ಆತನು ಮರಾಠರ ಪುಣೆಗೆ ಹೋಗಿ ಲೂಟಿಯಾದ ವಸ್ತುಗಳನ್ನು ಹಿಂತಿರುಗಿಸುವಂತೆ

ಕೋರಿದ್ದನೆಂದು ಹೇಳಲಾಗಿದೆ. ಪೇಶ್ವೆಯು ತನ್ನ ಮುಖ್ಯಾಧಿಕಾರಿ ಪರಶುರಾಮ್ ಬಾವುಗೆ ಲೂಟಿ ಮಾಡಿದ ವಸ್ತುಗಳನ್ನು ಹಿಂತಿರುಗಿಸಿ ಪರಿಹಾರವನ್ನು ನೀಡಿ ತಪ್ಪಿನ ಪರಿಹಾರವಾಗಿ ಮತ್ತು ಇತರೆ ಬೆಲೆಬಾಳುವ ನವರತ್ನಗಳನ್ನು ಮಠದ ಗುರುಗಳಿಗೆ ನೀಡಿದ್ದನಂತೆ.

ಈ ಮಠದ ಗುರುಗಳಿಗೆ ಟಿಪ್ಪುಸುಲ್ತಾನನು ಕನ್ನಡದಲ್ಲಿ ಬರೆದಿರುವಂತಹ ಪತ್ರಗಳು ಸಹ ದೊರೆತಿವೆ. ಅದರಲ್ಲಿ ಆತನು ಗುರುಗಳಿಗೆ ಬಾದಷಹರೆಂದು ಕರೆದಿದ್ದಾನೆ. ಆತನು ಈ ಮಠದ ಭಕ್ತನಾಗಿದ್ದು ಈ ಮಠಕ್ಕೆ ಅಪಾರ ಗೌರವವನ್ನು ಸಲ್ಲಿಸಿ ತನ್ನ ದಂಡಯಾತ್ರೆಗಳಿಗೆ ಶ್ರೀ ಮಠದ ಶ್ರೀರಕ್ಷೆಯನ್ನು ಪ್ರಾರ್ಥಿಸಿದ್ದಾನೆ. 1795–96ರಲ್ಲಿ ಬರೆದಂತಹ ಪತ್ರದಲ್ಲಿ ಆತನು ಮೂರು ಕಾರಣಗಳಿಗಾಗಿ ನಾನು ಹೆಮ್ಮೆ ಪಡುತ್ತೇನೆ. ಮೊದಲನೆಯದು, ಆತನಿಗೆ ದೇವರ ಸಂಪೂರ್ಣ ಆಶೀರ್ವಾದವಿರುವುದು, ಎರಡನೆಯದು ಆತನಿಗೆ ಶೃಂಗೇರಿ ಗುರುಗಳಂತವರ ಆಶೀರ್ವಾದವಿರುವುದು ಮತ್ತು ಮೂರನೆಯದಾಗಿ ಯುದ್ಧ ಸಾಮಗ್ರಿ ಆತನಲ್ಲಿರುವುದು. 1798–99ರಲ್ಲಿ ಬರೆದ ಮತ್ತೊಂದು ಪತ್ರದಲ್ಲಿ ಆತನು ಚಂಡಿ ಹವನ–ಹೋಮ ಮಾಡಿ ತನ್ನ ಶತ್ರುಗಳನ್ನು ಬಗ್ಗು ಬಡಿಯಲು ಅನುಕೂಲವಾಯಿತು. ಅದೇ ರೀತಿ ಶತ್ರುಗಳ ನಾಶಕ್ಕೆ ಮತ್ತು ರಾಜ್ಯ ಹಿತರಕ್ಷಣೆಗೆ ಚಂಡಿ ಹವನ ಮಾಡುವಂತೆ ವಿನಂತಿಸಿದ್ದನು. ಈ ಕಾರ್ಯಕ್ಕೆ ಬೇಕಾದಂತಹ ಸಾಮಗ್ರಿಗಳನ್ನು ಪೂರೈಸುವಂತೆ 'ಆಸಫ್'ಗೆ ಆಜ್ಞೆ ಮಾಡಿದ್ದನು.

## ಶಾರದಾಂಬ ದೇವಾಲಯ

ವಿದ್ಯಾಶಂಕರ ದೇವಾಲಯದ ಉತ್ತರಕ್ಕೆ ಈ ಮೊದಲು ಒಂದು ಚಿಕ್ಕ ದೇವಾಲಯವಿತ್ತು. ಈ ದೇವಾಲಯದ ಸ್ಥಳದಲ್ಲಿ ದೊಡ್ಡ ದೇವಾಲಯವನ್ನು ಸ್ಥಾಪಿಸಲಾಗಿದೆ. ಈ ಕೆಲಸ 1906ರಲ್ಲಿ ಪ್ರಾರಂಭವಾಗಿ 1915ಕ್ಕೆ ಮುಗಿಯಿತು.[16] ಮೈಸೂರಿನ ಮಹಾರಾಜ ಒಡೆಯರು ಈ ಹೊಸ ದೇವಾಲಯದ ನಿರ್ಮಾಣದ ಮೇಲ್ವಿಚಾರಣೆಯನ್ನು ವಹಿಸಿ ಕುಶಲಕಾರ್ಮಿಗಳನ್ನು ತಮ್ಮ ಆಸ್ಥಾನದಿಂದ ಕಳುಹಿಸಿದ್ದರಂತೆ. ಈ ದೇವಾಲಯದ ಯೋಜನೆಯು ದ್ರಾವಿಡ ಶೈಲಿಯನ್ನು ಹೊಂದಿದೆ. ಈ ದೇವಾಲಯದಲ್ಲಿ ತುರುವೇಕೆರೆಯ ಕಪ್ಪುಕಲ್ಲಿನ ಮೂರ್ತಿಯಿದೆ. ಉಳಿದಂತೆ ಈ ದೇವಾಲಯವನ್ನು ಶೃಂಗೇರಿಯಿಂದ ಕೆಲವೇ ಮೀ. ದೂರದಲ್ಲಿ ದೊರೆಯುವ ಕಲ್ಲಿನಿಂದ ನಿರ್ಮಿಸಲಾಗಿದೆ. ಸರಸ್ವತಿ ಅಥವಾ ಶಾರದೆ ಇಲ್ಲಿನ ಮುಖ್ಯ ದೇವತೆ(ಚಿತ್ರಸಂಖ್ಯೆ54).[17]

ಈ ದೇವಾಲಯವು ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಪ್ರಾಕಾರವನ್ನು ಹೊಂದಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯ ಮೂರು ಪ್ರವೇಶ ದ್ವಾರಗಳನ್ನು ಹೊಂದಿದೆ. ಅವುಗಳು ಉತ್ತರ, ದಕ್ಷಿಣ ಮತ್ತು ಪೂರ್ವದ್ವಾರವು ಪ್ರಧಾನ ಪ್ರವೇಶ ದ್ವಾರವಾಗಿದೆ.

ಇದು ಎರಡು ಒಳ ಹೊರಗೆ ತೆರೆದ ಮಂಟಪಗಳನ್ನೊಂದಿದೆ. ನವರಂಗದಲ್ಲಿ ತೆರೆದ ಕೊಠಡಿಯಿದೆ. ಇಲ್ಲಿ ಎರಡು ಸಾಲುಗಳ ಕಂಬಗಳಿವೆ. ಅವುಗಳಲ್ಲಿ ಒಂದು ಕಂಬದಲ್ಲಿ ದೊಡ್ಡ ಮಹಿಳೆಯ ಚಿತ್ರವನ್ನು ಕೆತ್ತಲಾಗಿದೆ. ಉಳಿದೆರಡು ಪ್ರವೇಶ ದ್ವಾರಗಳಲ್ಲಿ ಎರಡು ದ್ವಾರಪಾಲಕರಿದ್ದಾರೆ. ಇದರೊಂದಿಗೆ ಮಹಿಷಾಸುರ ಮರ್ದಿನಿ ಮತ್ತು ರಾಜರಾಜೇಶ್ವರಿ ಮೂರ್ತಿಗಳಿವೆ.

ಮುಖ್ಯ ದೇವಾಲಯದ ಸುತ್ತ ಕಿರಿದಾದ ಪ್ರದಕ್ಷಿಣ ಪಥವಿದೆ. ಇದು ರಂಗಮಂಟಪದವರೆಗೆ ಹಬ್ಬಿದೆ. ಪ್ರಾಕಾರವು ಕಂಬಗಳಿಂದ ಕೂಡಿದ ವರಾಂಡವನ್ನು ಹೊಂದಿದೆ. ಪೂರ್ವಕ್ಕೆ ಮುಖಮಂಟಪ ಮತ್ತು ಬಾಗಿಲ ಹತ್ತಿರ ಪಟಾಲಕಣವನ್ನು ಹೊಂದಿದೆ. ಮುಖ್ಯದ್ವಾರದ ಪೂರ್ವದಲ್ಲಿ ಚಿಕ್ಕ ಮುಖಮಂಟಪವಿದೆ. ಇದು ಸಂಯೋಜಿತ ಕಂಬಗಳಿಂದ ಕೂಡಿದ್ದು ಮೂರು ಜೊತೆ ಆವರಣಗಳ ವಿನ್ಯಾಸದೊಂದಿಗೆ ಹೂವಿನ ಚಿತ್ರ ಮತ್ತು ಸಿಂಹದ ಆವರಣ ಮತ್ತು ಮಕರ ಮಾವಿನ ಹಣ್ಣಿನ ಮೊಗ್ಗುಗಳನ್ನು ಹೊಂದಿದೆ. ತಿರುಗು–ಮುರುಗಾದ ಕಾಳನಾರಿಸುತ್ತಿರುವ ಗಿಳಿಗಳ ಆವರಣಗಳು ಇಲ್ಲಿವೆ. ಕಂಬಗಳು ಕುಸುರಿಯ ಕೆತ್ತನೆಯ ವಿನ್ಯಾಸವನ್ನು ಹೊಂದಿದೆ. ಇಲ್ಲಿಯ ಆವರಣಗಳು ನವರಂಗ ಮತ್ತು ವಿದ್ಯಾಶಂಕರ ದೇವಾಲಯದ ಆಲಂಕಾರವನ್ನು ಅನುಸರಿಸುತ್ತವೆ. ಪ್ರಾಕಾರದಲ್ಲಿ ಕಂಬಗಳು ಅಷ್ಟೊಂದು ಅಲಂಕೃತವಾಗಿಲ್ಲ.

ಹತ್ತಿರದಲ್ಲಿ ರಂಗ ಮಂಟಪದ ಎಂಟು ಕಂಬಗಳು ವಾಸ್ತುಶಿಲ್ಪದ ಗಮನ ಸೆಳೆದಿವೆ. ಪೂರ್ವದ ಕಂಬಗಳು ದೈವಿಕ ವಾಸ್ತುಶಿಲ್ಪವನ್ನು ಹೊಂದಿದೆ. 1.8 ಮೀಟರ್ ಎತ್ತರದ ಪಾರ್ವತಿ ಮತ್ತು ಇತರೆ ದೇವಿಯರ ಚಿತ್ರವನ್ನಿಲ್ಲಿ ನೋಡಬಹುದು. ಪಶ್ಚಿಮದ ಕಂಬಗಳು ದ್ವಾರಪಾಲಕರನ್ನೊಂದಿದೆ. ಪೂರ್ವದಲ್ಲಿ ಹರಿದ ಸಿಂಹದ ಆವರಣಗಳಿವೆ. ಉತ್ತರದ ಕಂಬದಲ್ಲಿ ಮಹಿಷಾಸುರ ಮರ್ದಿನಿಯ ಚಿತ್ರವಿದ್ದು ಕೋಣದ ಚಿತ್ರ ಪಾದಸ್ಥಳದಲ್ಲಿದ್ದರೆ. ಸಿಂಹದ ಚಿತ್ರವು ದೇವಿಯ ಹಿಂದಿದೆ. ಈ ದೇವಿಯು ಎಂಟು ಕೈಗಳನ್ನು ಹೊಂದಿದ್ದಾಳೆ. ಅತ್ಯಂತ ವೈಭವಯುತ ಕೆತ್ತನೆಯೆಂದರೆ ರಾಜರಾಜೇಶ್ವರಿ ಮೂರ್ತಿ. ಇದು ದಕ್ಷಿಣದ ಕಂಬದಲ್ಲಿದೆ. ರಾಜರಾಜೇಶ್ವರಿ ಸುಕನಾಸಿಯಲ್ಲಿ ಕುಳಿತಿದ್ದು ಅರ್ಧಚಂದ್ರಾಕೃತಿಯ ಕಿರೀಟವನ್ನು ಧರಿಸಿದ್ದಾಳೆ. ಕೆಲವೊಂದು ಉಡುಪುಗಳು ಗುಲಾಬಿ ಬಣ್ಣದಾಗಿವೆ. ಆಕೆಯ ತಲೆಯ ಮೇಲೆ ಗಂಧರ್ವ ಕನ್ಯೆಯಿದ್ದು ಯೂರೋಪಿನ ಯುವತಿಯಂತೆ ತೋರುತ್ತಾಳೆ. ದೇವಿಯ ಬಲ ಮೊಣಕೈಯ ಕೆಳಗೆ ಕುರೂಪಿ ಹೆಣ್ಣನ್ನು ಹೋಲುವ ಚಿತ್ರವಿದೆ.

ಶಾರದಾ ದೇವಿಯ ಮಂದಿರವು ಹೆಚ್ಚು ಅಲಂಕೃತವಾಗಿಲ್ಲ. ಇಲ್ಲಿಯ ಗೋಡೆ ಚೌಕಾಕಾರಸ್ತಂಭದ ಅಷ್ಟಭುಜಾಕೃತಿಯಾಗಿದ್ದು ಮಾವಿನ ತೋರಣ ಆವರಣವನ್ನು ಹೊಂದಿದೆ. ಗೋಡೆಯು ಪಾಲಿಷ್ ಮಾಡಲ್ಪಟ್ಟಿದ್ದು ಅಡಿಪಾಯದ ಮೇಲೆ ಕೀರ್ತಿಮುಖದ ಅನುಕರಣೆಗಳಿವೆ. ಇಲ್ಲಿ ಒಂದು ಲೋಹದ ಶಾರದ ಅಥವಾ ಸರಸ್ವತಿಯ ಮೂರ್ತಿಗಳಿವೆ. ಒಂದು ಮತ್ತೊಂದಕ್ಕಿಂತ ದೊಡ್ಡದಾಗಿದೆ. ಮೊದಲನೆಯದು 0.91 ಮೀಟರ್ (3 ಅಡಿ) ಇದ್ದರೆ ಮತ್ತೊಂದು 0,76 (2.5 ಅಡಿ) ಎತ್ತರವಾಗಿದೆ. ಮೊದಲನೆಯ ವಿಗ್ರಹವನ್ನು ವಿದ್ಯಾತೀರ್ಥ ಸ್ವಾಮಿಯವರು ಸ್ಥಾಪಿಸಿದ್ದಾರೆ. ಅಲ್ಲಿ ಯಂತ್ರಶಕ್ತಿಯ ರಹಸ್ಯ ರಚನೆಯನ್ನು ಶಂಕರಾಚಾರ್ಯರು ಮಾಡಿದ್ದರೆಂದು ನಂಬಲಾಗಿದೆ. ಅದರ ಪಕ್ಕದಲ್ಲಿ ಚಿಕ್ಕ ಮೂರ್ತಿಯನ್ನು ಪ್ರತಿಷ್ಠಾಪಿಸಿದ್ದರೆಂದು ಹೇಳಲಾಗಿದೆ. ಇದರ ಪ್ರಕಾರ ಉತ್ತರದಿಂದ ಸಂತುಷ್ಠರಾಗದ ವಿದ್ಯಾತೀರ್ಥರು ತಮ್ಮ ಮೇಲ್ವಿಚಾರಣೆಯಲ್ಲಿ ದೊಡ್ಡ ಮೂರ್ತಿಯನ್ನು ನಿರ್ಮಾಣ ಮಾಡಿಸಿದರು. ಈ ಮೂರ್ತಿಯು ಕುಳಿತ ಭಂಗಿಯಲ್ಲಿದ್ದು ನಾಲ್ಕು ಕೈಯಲ್ಲಿ ಮೂರರಲ್ಲಿ ಗುಲಾಬಿ, ಅಮೃತ ಪಾತ್ರೆ ಮತ್ತು ಪುಸ್ತಕ ಹಿಡಿದಿದ್ದಾಳೆ. ನಾಲ್ಕನೆಯ ಕೈಯು ಆಭಯ ಸ್ಥಿತಿಯಲ್ಲಿದೆ. ಇಲ್ಲಿರುವ ಶಾರದ ಮೂರ್ತಿಯು ಎರಡು ರೀತಿಯಿಂದ ವಿಶಿಷ್ಟವಾಗಿದೆ. ಮೊದಲನೆಯದು ಈ ದೇವಿಯ ಮೂಗು ಮತ್ತು ಆನೆಯ ಕೆಲಸ ನಿರ್ವಹಿಸುವ ಶಕ್ತಿಯನ್ನು ನೀಡುತ್ತಾಳೆ ಎಂಬ ನಂಬಿಕೆಯಿದೆ. ಮೆರವಣಿಗೆಯ ಉದ್ದೇಶಕ್ಕಾಗಿ ಎರಡು ವಿಗ್ರಹಗಳನ್ನು ಬಳಸಲಾಗುತ್ತದೆ. ಒಂದು ಬೆಳ್ಳಿಯ ವಿಗ್ರಹ ಕುಳಿತಿರುವ ಭಂಗಿಯಲ್ಲಿದ್ದು 0.305 ಮೀಟರ್ ಎತ್ತರವಿದೆ. ಮತ್ತೊಂದು ಬೆಳ್ಳಿಯ ವಿಗ್ರಹ. ಇದು 0.610 ಮೀ. ಎತ್ತರವಾಗಿದೆ. ಈ ಎರಡು ವಿಗ್ರಹಗಳಿಗೂ ಮೂಲ ವಿಗ್ರಹಗಳಿಗೆ ಅನ್ವಯಿಸುವ ಶಕ್ತಿಯನ್ನು ಹೊಂದಿಸಲಾಗಿದೆ. ದಕ್ಷಿಣದಲ್ಲಿ 10.7 ಮೀಟರ್ ಎತ್ತರದ ದೀಪಸ್ತಂಭವಿದೆ. ಇಲ್ಲಿ ಕೈ ಮುಗಿದು ನಿಂತಿರುವ ಮಹಿಳೆಯ ಚಿತ್ರವಿದೆ. ಮುಖ್ಯದ್ವಾರದಲ್ಲಿ ಸುಂದರ ಗೋಪುರವನ್ನು ಕಟ್ಟಿಸಲಾಗಿದೆ. ಕ್ರಿ.ಶ. 1978ರಲ್ಲಿ ಹೊಸ ಬಾಗಿಲುಗಳನ್ನು ಹಿತ್ತಾಳೆ ಮೌಲ್ಡ್‌ನಿಂದ ಮಾಡಿಸಲಾಗಿದೆ. ಅದರ ಮೇಲೆ ಹಲವಾರು ಚಿತ್ರಗಳನ್ನು ಕೆತ್ತಲಾಗಿದೆ. ಶಾರದಾಂಬೆಯ ವಾರ್ಷಿಕ ಜಾತ್ರೆಯು ಸೆಪ್ಟೆಂಬರ್–ಅಕ್ಟೋಬರ್ ತಿಂಗಳಲ್ಲಿ ಹತ್ತು ದಿನಗಳವರೆಗೆ ನಡೆಯುತ್ತದೆ.

## ವಿದ್ಯಾಶಂಕರ ದೇವಾಲಯ

ಕೇಂದ್ರ ಸರ್ಕಾರದಿಂದ ಸಂರಕ್ಷಿಸಲ್ಪಟ್ಟಿರುವ ಸ್ಮಾರಕ. ಶೃಂಗೇರಿಯಲ್ಲಿರುವ ಅತ್ಯಂತ ಸುಂದರ ಸ್ಮಾರಕವಿದು. ಗ್ರಾನೈಟ್ ಶಿಲೆಯಲ್ಲಿ ಕಟ್ಟಲ್ಪಟ್ಟಿರುವ ಈ ದೇವಾಲಯ ಪೂರ್ವಾಭಿಮುಖವಾಗಿದೆ ಮತ್ತು ತುಂಗಾ ನದಿಗೆ ಸಮಾನಾಂತರವಾಗಿ ಕಟ್ಟಲ್ಪಟ್ಟಿದೆ.

ವಿದ್ಯಾತೀರ್ಥರ ನೆನಪಿಗೆ ಕಟ್ಟಲ್ಪಟ್ಟ ಈ ದೇವಾಲಯ ದೃಶ್ಯ ಮನೋಹರ (ಕ್ರಿ.ಶ. 1346 ಮತ್ತು 1356ರ ಶಾಸನಗಳಲ್ಲಿ ಈ ವಿಷಯವಿದೆ). ತುಂಗಾ ನದಿಯು ಬೆಟ್ಟದಿಂದ ಸರಪಳಿಯ ರೀತಿಯಲ್ಲಿ ಹರಿಯುತ್ತಾ ಮೊದಲು ಪಶ್ಚಿಮಕ್ಕೆ ನಂತರ ಉತ್ತರಕ್ಕೆ ಕೊನೆಗೆ ಪೂರ್ವಕ್ಕೆ ಹರಿಯುತ್ತಾಳೆ. ಮೇಲುನೋಟಕ್ಕೆ ಹೊಯ್ಸಳ ಶೈಲಿಯಂತೆ ಕಂಡರೂ ವಾಸ್ತವಿಕವಾಗಿ ದ್ರಾವಿಡ ಶೈಲಿಯ ಕಲಾಕೃತಿಯನ್ನು ಹೊಂದಿರುವುದು ವಿಶೇಷ.[18] ಗಜಪೃಷ್ಠಾಕಾರದ ತಳವಿನ್ಯಾಸವನ್ನು ಹೊಂದಿರುವ ಇದರ ಬೃಹತ್ ವ್ಯಾಸ ಭಾರತದಲ್ಲಿಯೇ ಅಪೂರ್ವವೆಂಬುದು ತಜ್ಞರ ಅಭಿಪ್ರಾಯವಾಗಿದೆ (ಚಿತ್ರಸಂಖ್ಯೆ55).[19]

ಈ ದೇವಾಲಯದ ಯೋಜನೆಯು ಅತ್ಯಂತ ವಿಶಿಷ್ಟವೂ ವಿಚಿತ್ರವೂ ಆಗಿದೆ. ಇದರ ಸಂಶ್ಲೇಕ್ಷಣೀಯ ವಿನ್ಯಾಸ ಮತ್ತು ಅದರ ಪ್ರಸ್ತುತಪಡಿಸಿರುವ ವಿಧಾನ ಗಮನಾರ್ಹವಾಗಿದೆ. ಇದು ತನ್ನದೇ ಆದಂತಹ ಅದ್ವಿತೀಯ ಶೈಲಿಯನ್ನೊಂದಿದ್ದು, ಚಾಳುಕ್ಯ, ಹೊಯ್ಸಳ, ದ್ರಾವಿಡ ಮತ್ತು ಇಂಡೋ ಆಯೂರ ಕಟ್ಟಡ ಶೈಲಿಯ ಸಂಮಿಶ್ರಣವಾಗಿದೆ. ಹೊಯ್ಸಳ ಶೈಲಿಯಿಂದ ವಿಜಯನಗರ ಶೈಲಿಗೆ ಪರಿವರ್ತನೆ ಕಾಲದ ದ್ಯೋತಕವಾಗಿದೆ. ಈ ದೇವಾಲಯ ನೋಡುಗರಿಗೆ ಬೌದ್ಧರ ಚೈತ್ಯದ ರೀತಿಯಲ್ಲಿ ತೋರುತ್ತದೆ ಈ ದೇವಾಲಯ ಆರು ದ್ವಾರಗಳನ್ನೊಂದಿದ್ದು ಪ್ರತಿ ದ್ವಾರದಲ್ಲಿ ಮೆಟ್ಟಿಲುಗಳಿದ್ದು ಇಕ್ಕೆಲಗಳಲ್ಲಿ ಆನೆಯ ಮೂರ್ತಿಗಳನ್ನೊಂದಿದೆ(ಚಿತ್ರಸಂಖ್ಯೆ56). ಆರು ಬಾಗಿಲುಗಳಲ್ಲಿ ದ್ವಾರಪಾಲಕರ ಚಿತ್ರಗಳಿದ್ದು ಎರಡರಲ್ಲಿ ಶಿವ, ಎರಡರಲ್ಲಿ ಶಕ್ತ ಮತ್ತು ಇನ್ನೆರಡರಲ್ಲಿ ವೈಷ್ಣವ ದ್ವಾರಪಾಲಕರಿದ್ದಾರೆ. ಮೂರು ಕಲ್ಪನೆಗಳ ಸಂಶ್ಲೇಷಣೆ ಇಲ್ಲಿದೆ. ಈ ದೇವಾಲಯದಲ್ಲಿ ಮುಖಮಂಟಪವಿಲ್ಲ ಅಡಿಪಾಯದ ಮೇಲೆ ನಿಂತ ಈ ದೇವಾಲಯದ ತಳಪಾಯ 1.5 ಮೀಟರ್ ಎತ್ತರವಾಗಿದ್ದು, ಅದರ ಮೇಲೆ ಮತ್ತೆ 2.4 ಮೀಟರ್ ಕಪೋಲವಿದೆ. ಈ ದೇವಾಲಯವನ್ನು ಕ್ರಿ.ಶ. 1360ರ ಸುಮಾರಿನಲ್ಲಿ ವಿಜಯನಗರದ ಅರಸರು ನಿರ್ಮಿಸಿದರೆಂದು ಶಾಸನಗಳಿಂದ ತಿಳಿಯಬಹುದು.[20]

ಕಪೋಲದಲ್ಲಿರುವ ಬ್ಯಾಂಡ್‌ಗಳು ಮನೋಲ್ಲಾಸದ ಬೆಳಕು ಕತ್ತಲೆಯ ಸಮ್ಮಿಶ್ರಣವನ್ನು ಹೊಂದಿ ಹೊಯ್ಸಳರ ಕಲಾತ್ಮಕತೆಯ ಕೆಲಸವನ್ನು ತೋರಿಸುತ್ತದೆ. ಹೊರಗೋಡೆಯಲ್ಲಿನ ಕೆಳಭಾಗದಲ್ಲಿ ಕುದುರೆಗಳು, ಆನೆಗಳು, ಸಿಂಹಗಳು, ಪೌರಾಣಿಕ ದೃಶ್ಯಗಳ ಕುಬ್ಜ ಮನುಷ್ಯ ಮತ್ತು ಇತರೆಯವರ ಚಿತ್ರಗಳಿವೆ(ಚಿತ್ರಸಂಖ್ಯೆ57). ಬಾಗಿಲ ಬಳಿಯಲ್ಲಿ ಬಹಳ ದೊಡ್ಡದಾದ ಮೂರ್ತಿಗಳಿದ್ದು ಅವು ತೋರಣಗಳ ಕೆಳಗಿನಂತೆ ಇವೆ. ಅತ್ಯಂತ ಮುಖ್ಯವಾಗಿರುವವು ತೋರಣದ ಕೆಳಗಿದ್ದು ಅಲಂಕೃತವಾಗಿದೆ. ಮೊದಲ ಸರಣಿಯಲ್ಲಿ ಅಲ್ಲೊಂದು ಇಲ್ಲೊಂದು

ಬಂಡೆಗಳಿವೆ. ಆರನೇ ಗುಂಪಿನಲ್ಲಿ ಸಣ್ಣಪುಟ್ಟ ವಿಭಾಗಗಳಿದ್ದು ಪುರಾಣ ಮತ್ತು ಸಂಪ್ರದಾಯದ ವಿವಿಧ ಕಥೆಗಳ ಚಿತ್ರಗಳಿವೆ. ಇಲ್ಲಿರುವ ಗಮನಾರ್ಹ ವಾಸ್ತುಶಿಲ್ಪಗಳೆಂದರೆ ಅರ್ಜುನನು ಅಶ್ವಮೇಧ ಯಾಗವನ್ನು ಮಾಡುತ್ತಿರುವ ಚಿತ್ರವಿದೆ. ಇದು ದಕ್ಷಿಣ ಮತ್ತು ನೈರುತ್ಯ ಗೋಡೆಗಳವರೆಗೆ ಹಬ್ಬಿದೆ. ಇಂದ್ರಶಿಲದಲ್ಲಿ ಅರ್ಜುನನು ಇತರೆ ಮುನಿಗಳೊಂದಿಗೆ ತಪಸ್ಸು ಮಾಡುತ್ತಿರುವ ಚಿತ್ರಗಳಿವೆ. ಬೇಟೆಗಾರನೊಂದಿಗೆ ಅರ್ಜುನ ನಿಷ್ಪ್ರಯೋಜಕನಾಗಿ ಸೆಣಸುತ್ತಿರುವ ದೃಶ್ಯವಿದೆ. ಇಲ್ಲಿ ಶಿವನು ಬೇಟೆಗಾರನಾಗಿ ಬಂದಿರುತ್ತಾನೆ. ಬಹಳಷ್ಟು ಸೆಣಸಾಟದ ನಂತರ ಶಿವ–ಪಾರ್ವತಿಯರು ಪ್ರತ್ಯಕ್ಷರಾಗಿ ಅರ್ಜುನನಿಗೆ ಪಾಶುಪತಾಸ್ತ್ರವನ್ನು ನೀಡುವ ದೃಶ್ಯಗಳು ಸಹ ಇಲ್ಲಿವೆ. ಉತ್ತರದ ಗೋಡೆಯಲ್ಲಿ ಆಚಾರ್ಯರು ತನ್ನ ಅನುಯಾಯಿಗಳಿಗೆ ಬೋದನೆ ಮಾಡುತ್ತಿರುವ ಚಿತ್ರವಿದೆ. ಆಚಾರ್ಯರು ಎತ್ತರವಾದ ಪೀಠದಲ್ಲಿ ಕುಳಿತಿದ್ದು ಕೊರಳಿಗೆ ಸರವನ್ನು ಮತ್ತು ತಲೆಗೆ ಕೋನಾಕೃತಿಯ ಕಿರೀಟವನ್ನು ಧರಿಸಿದ್ದು ಬಲಗೈಯಲ್ಲಿ ಚಿನ್‌ಮುದ್ರೆಯಿದೆ. ಎಡಗೈಯಲ್ಲಿ ಪುಸ್ತಕವಿದೆ. ವಿವಿಧ ಭಂಗಿಯಲ್ಲಿರುವ ಯೋಗಿನಿಯರ ಚಿತ್ರಗಳು ಇಲ್ಲಿವೆ. ಎಂಟನೆ ಸಮುಚ್ಛಯದಲ್ಲಿ ಯಕ್ಷರು ಮತ್ತು ನೃತ್ಯಗಾರರು ವಿವಿಧ ನೃತ್ಯ ಭಂಗಿಯಲ್ಲಿರುವ ಚಿತ್ರಗಳಿದ್ದು ಅವರೊಂದಿಗೆ ಡ್ರಮ್ ಮತ್ತು ಪೈಪ್ ಊದುತ್ತಿರುವವರು ಸುತ್ತುವರೆದಿದ್ದಾರೆ. ಕುಬ್ಜರ ಸರಣಿ ಚಿತ್ರಗಳ ಮೇಲೆ ವಿವಿಧ ದೇವತೆಗಳ ಚಿತ್ರಗಳಿವೆ. ಇಲ್ಲಿಯ ಚಿತ್ರದಲ್ಲಿರುವ ಮೂರ್ತಿಗಳ ಕೈಯಲ್ಲಿ ಹಾರವಿದ್ದು ಕೊನೆಯಲ್ಲಿ ಐದು ಹೆಡೆಯ ಹಾವಿದೆ. ಆತನನ್ನು ಮೃತ್ಯು ದೇವನೆಂದು ಕರೆಯಲಾಗಿದೆ. ಇದರೊಂದಿಗೆ ನಾಲ್ಕು ಕೈಗಳ ಯಮನಿದ್ದಾನೆ. ಎರಡು ಕಡೆ ನಾಯಿ ಮತ್ತು ಮೃತ್ಯು ಇದ್ದು ಕಟಾಂಜನದ ಮೇಲೆ ಕೋಣವಿದೆ. ಬೆತ್ತಲೆಯಲ್ಲಿರುವ ಭೈರವನು ತನ್ನ ಕೈಯಲ್ಲಿ ಬಟ್ಟಲು ಮತ್ತು ದಂಡವನ್ನು ಹಿಡಿದಿದ್ದಾನೆ. ಪಾದಸ್ಥಲದಲ್ಲಿ ಚೇಳನ್ನು ಕೆತ್ತಲಾಗಿದೆ. ವೃತ್ತಾಕಾರದ ಮಂಡಲದಲ್ಲಿ ಸಾವಿತ್ರಿಯು ಪದ್ಮಾಸನ ಭಂಗಿಯಲ್ಲಿದ್ದಾಳೆ. ಈಕೆಯು ನಾಲ್ಕು ತಲೆಯನ್ನು ಹೊಂದಿದ್ದು ಹತ್ತು ಕೈಗಳನ್ನು ಹೊಂದಿದ್ದಾಳೆ. ಮೂರು ತಲೆಗಳು ಒಂದು ಸಾಲಿನಲ್ಲಿದ್ದು ಉಳಿದ ಮತ್ತೊಂದು ಮೇಲಿನ ಸಾಲಿನಲ್ಲಿದೆ. ಇದೊಂದು ವಿಶಿಷ್ಟವಾದ ರಚನೆಯಾಗಿದೆ.

ಕಟಾಂಜನದ ಮೇಲೆ ಬುದ್ಧನು ಬೆತ್ತಲೆಯಲ್ಲಿದ್ದು ಜಿನ್ನನ ಸ್ವರೂಪದಲ್ಲಿದ್ದಾನೆ (ಚಿತ್ರಸಂಖ್ಯೆ58). ಮಧ್ಯಕಾಲೀನ ಬ್ರಾಹ್ಮಣರು ಬದ್ಧನನ್ನು ಈ ರೀತಿಯಾಗಿ ಪ್ರತಿನಿಧಿಸುತ್ತಿದ್ದರು. ಇಲ್ಲಿ ಕಲ್ಕಿಯ ಚಿತ್ರವನ್ನು ಕೆತ್ತಿದ್ದು ಒಂದು ಕೈಯಲ್ಲಿ ಕತ್ತಿಯನ್ನು ಹಿಡಿದಿದ್ದಾನೆ. ಮತ್ತೊಂದು ಕೈಯಲ್ಲಿ ಕುದುರೆಯ ಲಾಗಾಮನ್ನಿಡಿದು ಕುದುರೆ ಸವಾರಿ ಮಾಡುತ್ತಿದ್ದಾನೆ. ಅವನ ಪಾದಸ್ಥಳದಲ್ಲಿ ಯೋಧನೊಬ್ಬನಿದ್ದಾನೆ. 'ಪರಶುರಾಮನು ಯುದ್ಧ ಖಡ್ಗವನ್ನು ಬಲಗೈಯಲ್ಲಿ ಮತ್ತು ಬಾಣವನ್ನು ಎಡೆಗೈಯಲ್ಲಿ ಹಿಡಿದಿದ್ದಾನೆ. ಈತನ ಪಾದಸ್ಥಲದಲ್ಲಿ ಗರುಡ ಮತ್ತು ಹಾವುಗಳಿವೆ. ಇಲ್ಲಿ ಶಿವನು

ಅರ್ಧನಾರೀಶ್ವರ, ತ್ರಿಪುರಾಂತಕ, ನಟರಾಜ, ಗಜಸಂಹಾರ ಮೂರ್ತಿ ಮತ್ತು ಕುಮಾರಿ ರೂಪದಲ್ಲಿದ್ದಾನೆ. ವಿಷ್ಣುವು ವರಾಹ, ನರಸಿಂಹ, ವಾಮನ ಮತ್ತು ವೇಣುಗೋಪಾಲ ರೂಪದಲ್ಲಿದ್ದಾನೆ. ವೀರಭದ್ರ ನೃತ್ಯನಿರತ ಗಣೇಶ ಮತ್ತು ಶಂಕರಭೈರವರ ಚಿತ್ರಗಳಿವೆ.

ಎರಡು ಅರ್ಧಾವೃತ್ತಗಳು ಪೂರ್ವ ಮತ್ತು ಪಶ್ಚಿಮ ತುದಿಯ ಈ ದೇವಾಲಯವನ್ನು ಸಂಧಿಸುತ್ತವೆ. ಹೊರಭಾಗವು ಇದನ್ನು ಸಂಧಿಸುವುದರಿಂದ ಇದು ಎರಡು ಅರ್ಧಾವೃತ್ತಗಳು ಚೌಕದ ಮೇಲೆ ನಿಂತಿರುವಂತೆ ತೋರುತ್ತದೆ. ಈ ದೇವಾಲಯವು ಗರ್ಭಗೃಹ, ವಿಶಾಲವಾದ ಸುಕನಾಸಿ, ಅರ್ಧ ವೃತ್ತಾಕಾರದ ಪ್ರದಕ್ಷಿಣೆ ಸ್ಥಳ ಮತ್ತು ನವರಂಗವನ್ನೊಂದಿದೆ. ನವರಂಗವು ಮೂರು ಪ್ರವೇಶ ದ್ವಾರಗಳನ್ನೊಂದಿದ್ದು ಪೂರ್ವ ಪಶ್ಚಿಮ ಮತ್ತು ದಕ್ಷಿಣ ದಿಕ್ಕಿನಲ್ಲಿದ್ದು ಪ್ರದಕ್ಷಿಣವನ್ನು ಹೊಂದಿದೆ. ಗರ್ಭಗೃಹದ ಹೊರಭಾಗದಲ್ಲಿ ನಿಷೇಗಳಿದ್ದು 0.915 ಎತ್ತರದ ನಾಲ್ಕು ತಲೆಯ ಕುಳಿತಿರುವ ಬ್ರಹ್ಮನ ವಿಗ್ರಹವಿದೆ. ಬ್ರಹ್ಮನೊಂದಿಗೆ ದಕ್ಷಿಣದಲ್ಲಿ ಸರಸ್ವತಿ ಇದ್ದಾಳೆ. ನಾಲ್ಕು ಕೈಯುಳ್ಳ ಲಕ್ಷ್ಮೀನಾರಾಯಣ ಕಟಾಂಜನದ ಮೇಲೆ ಪಶ್ಚಿಮದಲ್ಲಿದ್ದಾನೆ. ಉತ್ತರದಲ್ಲಿ ನಾಲ್ಕು ಕೈಯುಳ್ಳ ಉಮಾಮಹೇಶ್ವರಿ ಮತ್ತು ಕಟಾಂಜನದ ಮೇಲೆ ನಂದಿ ಮತ್ತು ಸಿಂಹದ ಮೇಲೆ ಸವಾರಿ ಮಾಡುತ್ತಾ ಮಹಿಷಾಸುರನನ್ನು ಮರ್ದನ ಮಾಡುತ್ತಿರುವ ಎಂಟು ಕೈಗಳ ದುರ್ಗೆಯ ವಿಗ್ರಹವಿಲ್ಲಿದೆ. ಇದರೊಂದಿಗೆ ಕಾಲಭೈರವ ಮೂರ್ತಿಯು ಇಲ್ಲಿದೆ. ಗುಹೆಗಳು ಎರಡಿದ್ದು ಹೊಯ್ಸಳ ದೇವಾಲಯದಲ್ಲಿ ಬಿರುಡೆಯ ರೀತಿಯ ಹನಿಗಳನ್ನೊಂದಿದೆ ಮತ್ತು ಕಲ್ಲಿನ ಸರಪಳಿ ಇದೆ. ಮೇಲ್ಛಾವಣಿಯು ಕಲ್ಲಿನಿಂದ ಕೂಡಿದೆ ಮತ್ತು ಬಾಗಿದ ರೀತಿಯಲ್ಲಿದ್ದು ಮಳೆಯಿಂದ ಬಿದ್ದ ನೀರು ನೇರವಾಗಿ ಕೆಳಬೀಳುವಂತೆ ಮತ್ತು ಮಳೆ ನೀರು ಜಿನುಗುವುದನ್ನು ತಡೆಗಟ್ಟುವಂತೆ ರಚಿಸಲಾಗಿದೆ.

**ನವರಂಗ:** ನವರಂಗವು 12 ದೊಡ್ಡ ಕಂಬಗಳನ್ನೊಂದಿದ್ದು ವಿಜಯನಗರ ರೀತಿಯಲ್ಲಿದೆ. ಪ್ರತಿಯೊಂದು ಕಂಬವು ಅಲಂಕೃತ ಅಡಿಪಾಯದ ಮೇಲಿದ್ದು, ಸಮಾನಾಂತರ ಸಮತಲವನ್ನು ಹೊಂದಿದೆ. ಇದು ಸುಂದರ ಮೇಲ್ಭಾಗದ ವಾಸ್ತುಶಿಲ್ಪವನ್ನು ಹೊಂದಿದೆ. ಚೌಕಾಕಾರದ ಮೌಲ್ಡಿಂಗ್ಸ್ ಹೊಂದಿದೆ. ಸರಪಳಿ ಆವರಣದಲ್ಲಿ ಮಾವಿನಹಣ್ಣಿನಾಕೃತಿಯ ಸಾಲುಗಳಲ್ಲಿವೆ. ಮುಂಭಾಗದ ಗುಂಪಿನಲ್ಲಿ ವಿಶಾಲವಾದ ಚಿತ್ರಗಳಿವೆ. ಈ ಗುಂಪುಗಳಲ್ಲಿ ಆನೆಯ ಚಿತ್ರ ಮತ್ತು ಸೊಂಡಿಲು ಕೆಳಗಿವೆ. ವಿಶಾಲವಾದ ಸಿಂಹವು ನಾಯಕನ ಸವಾರಿಯೊಂದಿಗಿರುವ ಚಿತ್ರವಿದೆ. ಈ ಚಿತ್ರದ ಮೇಲೆ ಆನೆಗಳು, ಸಿಂಹಗಳು, ಶರಭಗಳು ಆವರಣದಲ್ಲಿರುವ ಚಿತ್ರಗಳನ್ನು ಕೆತ್ತಲಾಗಿದೆ. ಸಂಪೂರ್ಣ ಕಂಬಗಳು ಅಲಂಕೃತವಾಗಿದ್ದು ಹೆಚ್ಚು ಆವರಣಗಳಿಂದ ತುಂಬಿಹೋಗಿದೆ.

ಹಿಂಭಾಗದಲ್ಲಿ ಅಲಂಕೃತ ಚೌಕಸ್ತಂಭ ಕಳಸದವರೆಗೆ ಮುಂದುವರೆದಿದೆ. ಈ ಕಂಬಗಳು ಹನ್ನೆರಡು ರಾಶಿಗಳನ್ನೊಂದಿದ್ದು ಮೇಷ ವೃಷಭ ಮತ್ತು ಇತರೆ ರಾಶಿಗಳನ್ನೊಂದಿದೆ. ಹುಟ್ಟುವ ಸೂರ್ಯನ ಕಿರಣಗಳು ಒಂದೊಂದು ತಿಂಗಳಲ್ಲಿ ಒಂದೊಂದು ಕಂಬದ ಮೇಲೆ ಬೀಳುತ್ತದೆ. ಸಿಂಹಗಳ ಬಾಯಿಯಲ್ಲಿ ದೊಡ್ಡ ಕಲ್ಲುಗಳಿದ್ದು ಅವುಗಳನ್ನ ಅದರೊಳಗೆ ಹೊರಳಾಡಿಸಬಹುದು. ಆದರೆ ಹೊರ ತೆಗೆಯಲು ಸಾಧ್ಯವಿಲ್ಲ. ನವರಂಗದ ಮಧ್ಯದಲ್ಲಿ 4.9 ಮೀ. ಎತ್ತರದ ಸುಂದರ ವಿನ್ಯಾಸದ ಕಮಲ ಗುಂಬಜಾಕೃತಿಯಲ್ಲಿದೆ. ವಿಶಾಲವಾದ ದಳಗಳು ಇಲ್ಲಿವೆ. ಮುಖ್ಯವಾದ ಚಿತ್ರ ಪಕ್ಷಿಗಳು ಆಹಾರವನ್ನು ತಿರುಗು–ಮುರುಗು ಭಂಗಿಯಲ್ಲಿರುವ ಮೂಗಿನಿಂದ ಕುಕ್ಕಿ ತಿನ್ನುತ್ತಿರುವುದು. ಇಲ್ಲಿ ಲೋಹದ ಮೂರ್ತಿಗಳಿದ್ದು ಪ್ರಮುಖವಾಗಿ ನಂಬಿನಾರಾಯಣ ತಾಂಡವೇಶ್ವರ ಮತ್ತು ಶ್ರೀನಿವಾಸ ಪ್ರಮುಖವು. ಇಲ್ಲಿ ಅಮೃತಶಿಲೆಯ ಮೂರ್ತಿಗಳು ಸಹ ಇವೆ.

ವಿಷ್ಣುವಿನ ಚಕ್ರ ಮತ್ತು ಶಂಖವನ್ನು ತನ್ನ ಮುಂದಿನ ಕೈಗಳ ಕೆಳಭಾಗದಲ್ಲಿ ಹಿಡಿದಿದ್ದರೆ ಅದನ್ನು ನಂಬಿನಾರಾಯಣನೆಂದು ಶ್ರೀವೈಷ್ಣವರು ನಂಬುತ್ತಾರೆ. ತಾಂಡವೇಶ್ವರನು ಬೆಂಕಿಯಾಕೃತಿಯ ಉಂಗುರದ ಸುತ್ತಾ ಇದ್ದು ಆತನ ಜಟೆಯಲ್ಲಿ ಗಂಗೆಯು ಕೈ ಮುಗಿದ ಮೂರ್ತಿಯು ತನ್ನ ಮನಮೋಹಕತೆ ಮತ್ತು ಅರ ನಿರ್ಮಾಣ ದೃಷ್ಟಿಯಿಂದ ವಿಶಿಷ್ಟವಾಗಿದೆ.

ಪ್ರದಕ್ಷಿಣವು ನವರಂಗದಿಂದ ಸುಕನಾಸಿಯನ್ನು ಪ್ರತ್ಯೇಕಿಸುತ್ತದೆ. ಸುಕನಾಸಿಯಲ್ಲಿ ಗಣಪತಿ ಮತ್ತು ಮಹಿಷಾಸುರ ಮರ್ದಿನಿಯರ ಮಂದಿರಗಳಿವೆ. ಗಣಪತಿ ಮಂದಿರದಲ್ಲಿ ಶನಿಯ ಮೂರ್ತಿಯಿದೆ. ಈ ಮೂರ್ತಿಯನ್ನು ಎಣ್ಣೆಯಲ್ಲಿ ತೋರಿಸಲಾಗುತ್ತದೆ. ಕೆಲವೊಂದು ವಿಶೇಷ ಸಮಯದಲ್ಲಿ ಈ ಮೂರ್ತಿಯನ್ನು ನವರಂಗಕ್ಕೆ ತಂದು ಎಣ್ಣೆ ಮಜ್ಜನ ಮಾಡಿಸುತ್ತಾರೆ. ಸುಕನಾಸಿಯಲ್ಲಿ ಹರಿಹರ ಉತ್ಸವ ವಿಗ್ರಹವಿದೆ. ನವರಂಗದಲ್ಲಿ ಮೂರು ಬಾಗಿಲುಗಳಿದ್ದು ಪ್ರದಕ್ಷಿಣಕ್ಕೆ ದಾರಿ ತೋರಿಸುತ್ತದೆ. ಮುಖದ್ವಾರದಲ್ಲಿ ಶೈವ ದ್ವಾರಪಾಲಕರಿದ್ದಾರೆ. ಪ್ರದಕ್ಷಿಣ 1.5 ಮೀ. ಅಗಲವಿದ್ದು, ಕಿರಿದಾಗಿದೆ. ಸುಕನಾಸಿ ಮತ್ತು ಗರ್ಭಗೃಹವನ್ನು ಸುತ್ತುವರೆದಿದೆ. ಪ್ರದಕ್ಷಿಣೆಯ ಎದುರಿಗೆ ದಕ್ಷಿಣ, ಪಶ್ಚಿಮ ಮತ್ತು ಉತ್ತರದ ಗೂಡುಗಳಲ್ಲಿ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ ವಿಗ್ರಹಗಳಿವೆ. ಸುಕನಾಸಿಯ ಬಾಗಿಲಲ್ಲಿ ನಂದಿಕೇಶ್ವರ ದಕ್ಷಿಣದಲ್ಲಿ ಮತ್ತು ಉತ್ತರದಲ್ಲಿ ಭೃಂಗಿನಿಯರಿದ್ದಾರೆ. ಮುಂದೆ ಗರ್ಭಗೃಹವಿದೆ.

ಗರ್ಭಗೃಹದಲ್ಲಿ ವಿದ್ಯಾಶಂಕರ ಮೂರ್ತಿಯಿದೆ. ಇದು 0.46 ಮೀಟರ್ ಎತ್ತರವಾಗಿದೆ. ಗುರು ವಿದ್ಯಾತೀರ್ಥರು ಲಿಂಬಿಕ್ ಯೋಗದಲ್ಲಿ ತೊಡಗಿ ಜೀವನದಿಂದ ನಿರ್ಗಮಿಸಿದರಂತೆ.

ಗರ್ಭಗೃಹದಲ್ಲಿ ಐದು ಕೊಠಡಿಗಳಿವೆ. ಅದರಲ್ಲಿ ವಿದ್ಯಾಗಣಪತಿ, ಬ್ರಹ್ಮ, ವಿಷ್ಣು, ಮಹೇಶ್ವರ ಮತ್ತು ದುರ್ಗೆಯ ವಿಗ್ರಹಗಳಿವೆ. ವಿದ್ಯಾಗಣಪತಿಯು ಹೊಯ್ಸಳ ಕಲಾ ಪ್ರತಿಭೆಯನ್ನು ತೋರುತ್ತದೆ.

**ವಿಮಾನ:** ಇಲ್ಲಿಯ ವಿಮಾನವು ಚಾಲುಕ್ಯ ದ್ರಾವಿಡ ಮತ್ತು ಉತ್ತರ ಭಾರತೀಯ ಲಕ್ಷಣಗಳನ್ನು ಸಮ್ಮಿಶ್ರಣಗಳನ್ನೊಂದಿದೆ.[21] ಇದು ಕಂಬದ ಕಲ್ಲಿನ ಮೇಲಿದೆ. ಇದು ಮೆಟ್ಟಿಲು ಮೆಟ್ಟಿಲು ರೀತಿಯ ಪಿರಮಿಡ್. ಮೇಲ್ಛಾವಣಿಯ ಚೌಕದ ಮೇಲೆ ಅಲಂಕೃತವಾದ ಸಾಲುಗಳಿವೆ. ಮೂಲೆಯ ಸ್ಥಾನದಲ್ಲಿ ನಂದಿ ವಿಗ್ರಹಗಳಿವೆ. ಮುಂದಿನ ಪಿರಮಿಡ್ ಮೂರು ಅಂತಸ್ತುಗಳಿದ್ದು ದ್ರಾವಿಡ ಶೈಲಿಯಲ್ಲಿದೆ(ಚಿತ್ರಸಂಖ್ಯೆ59). ಅಂತ್ಯದಲ್ಲಿ ಬಂಗಾರದ ಕಳಸವಿದೆ. ಸುತ್ತ ಚಾಲುಕ್ಯ ಕಾಲದ ಕಲ್ಲುಗಳನ್ನು ಹೊಂದಿದೆ. ಶಿಖರದ ಮುಂಭಾಗದಲ್ಲಿ ಸುಕನಾಸಿಯ ಮುಖದಲ್ಲಿ ಕೀರ್ತಿಮುಖವಿದ್ದು ನಿಂತಿರುವ ಶಿವನ (ಸದಾಶಿವ) ಮೂರ್ತಿಯನ್ನು ಹೊಂದಿದೆ. ಕಾರ್ತೀಕ ಮಾಸದಲ್ಲಿ ವಿದ್ಯಾಶಂಕರ ದೇವರ ರಥೋತ್ಸವ ನಡೆಯುತ್ತದೆ.

## ಮಲಹನಿಕೇಶ್ವರ ದೇವಾಲಯ

ಈ ಸ್ಥಳದ ಬೆಟ್ಟದಲ್ಲಿ ಮಲ್ಲಿಕಾರ್ಜುನನಿಗೆ ಸಮರ್ಪಿಸಿರುವ ದೇವಾಲಯವಿದೆ. ಇದನ್ನು **'ಮಲಹನಿಕೇಶ್ವರ'** ಎಂತಲೂ ಕರೆಯುತ್ತಾರೆ. ಈ ದೇವಾಲಯವು ಮಧ್ಯಮ ಪ್ರಕಾರದ್ದಾಗಿದ್ದು ಎರಡು ಪ್ರಾಕಾರಗಳನ್ನೊಂದಿದೆ. ಇವುಗಳು 14ನೇ ಶತಮಾನದಲ್ಲಿ ವಿಜಯನಗರ ಅರಸರ ಆಳ್ವಿಕೆಯಲ್ಲಿ ಕಟ್ಟಿರಬಹುದೆಂದು ನಂಬಲಾಗಿದೆ.[22] ಇದು ಚಚ್ಚೌಕಾರದ ಗರ್ಭಗೃಹದ, ಚಚ್ಚೌಕಾರದ ಸುಕನಾಸಿ ಮತ್ತು ಚಚ್ಚೌಕಾರದ ನವರಂಗವನ್ನೊಂದಿದೆ. ಗರ್ಭಗೃಹದಲ್ಲಿರುವ ಮಲ್ಲಿಕಾರ್ಜುನ ಲಿಂಗವು 0.12 ಮೀಟರ್ ಎತ್ತರವಿದೆ.

ಪುರಾಣದ ಪ್ರಕಾರ ಮುನಿ ಋಷ್ಯಶೃಂಗನು ಈ ಲಿಂಗವನ್ನು ಪೂಜಿಸಿದ್ದನೆಂದು ಹೇಳಲಾಗಿದೆ. ಈ ಲಿಂಗದಲ್ಲಿ ಋಷ್ಯಶೃಂಗನ ತಂದೆ ಐಕ್ಯವಾಗಿದ್ದರಿಂದ ಇದನ್ನು ವಿಭಂಡಕ ಲಿಂಗವೆಂತಲೂ ಕರೆಯಲಾಗಿದೆ. ಸುಕನಾಸಿಯ ಪ್ರವೇಶ ದ್ವಾರದಲ್ಲಿ ದ್ವಾರಪಾಲಕನ ಮತ್ತು ಚೌರಿ ಬೀಸುತ್ತಿರುವ ಮಹಿಳೆಯರ ಚಿತ್ರಗಳಿವೆ. ನವರಂಗದ ಪಶ್ಚಿಮದಲ್ಲಿ ಗಣಪತಿ, ದಕ್ಷಿಣದಲ್ಲಿ ದುರ್ಗಾ ಮತ್ತು ಉತ್ತರದಲ್ಲಿ ಮಹಿಷಾಸುರ ಮರ್ದಿನಿಯರ ಮೂರ್ತಿಗಳಿವೆ. ಮಧ್ಯದ ಮೇಲ್ಛಾವಣಿಯಲ್ಲಿ ಭುವನೇಶ್ವರಿಯ ಸುಂದರ ಮೂರ್ತಿಯನ್ನು ಕೆತ್ತಲಾಗಿದೆ. ನವರಂಗ ಮತ್ತು ಮುಖಮಂಟಪದಲ್ಲಿರುವ ಕಂಬಗಳು 16 ಸಮ ವಿಭಾಗಗಳನ್ನೊಂದಿದ್ದು, ನಾಲ್ಕು ಮುಖಗಳನ್ನೊಂದಿದೆ. ಇವುಗಳಲ್ಲಿ ದೇವಾನುದೇವತೆಗಳ ಚಿತ್ರಗಳನ್ನು ಕೆತ್ತಲಾಗಿದೆ. ದೀಪಸ್ತಂಭದಲ್ಲಿ ಗಣಪತಿಯ ವಿಗ್ರಹಗಳನ್ನು ನರಸಿಂಹಭಾರತಿ ಸ್ವಾಮಿಗಳು ಕೆತ್ತಿದ್ದಾರೆಂದು ಹೇಳಲಾಗಿದೆ.

ಕ್ರಿ.ಶ.1621ರ[23] ಶಾಸನವೊಂದರ ಪ್ರಕಾರ ಪುಟ್ಟಪ್ಪಯ್ಯ ಎನ್ನುವ ವ್ಯಕ್ತಿಯು ಈ ದೇವಸ್ಥಾನವನ್ನು ರಿಪೇರಿ ಮಾಡಿ ದತ್ತಿಯನ್ನು ನೀಡಿದ್ದರೆಂದು ಹೇಳಲಾಗಿದೆ. ಈ ದೇವಾಲಯದ ಪೂರ್ವಕ್ಕೆ ಹೊನ್ನೆ ದೇವಾಲಯವಿದೆ. ಇದನ್ನು 17ನೇ ಶತಮಾನದಲ್ಲಿ ಹೊನ್ನಗಶೆಟ್ಟಿಯು ಕಟ್ಟಿಸಿರಬಹುದೆಂದು ನಂಬಲಾಗಿದೆ. ಇದೊಂದು ಒಳ್ಳೆಯ ರಚನೆಯಾಗಿದ್ದು ಇಲ್ಲಿಯ ಗರ್ಭಗೃಹದಲ್ಲಿರುವ ವಿಗ್ರಹವನ್ನು ವಿಶ್ವೇಶ್ವರ ಲಿಂಗವೆಂದು ಕರೆಯುತ್ತಾರೆ. ಹತ್ತಿರದಲ್ಲಿಯೇ ನೀಲಕಂಠೇಶ್ವರ ದೇವಾಲಯವಿದೆ. ಇದನ್ನು ಕ್ರಿ.ಶ. 1695ರಲ್ಲಿ ರಾಜಗೋಪಾಲ ಭಟ್ಟನು ನಿರ್ಮಿಸಿದನೆಂದು ಹೇಳಲಾಗಿದೆ.

## ಜನಾರ್ಧನ ದೇವಾಲಯ

ಕ್ರಿ.ಶ.1386ರಲ್ಲಿ ವಿಜಯನಗರದ ಅರಸ ಬುಕ್ಕ ಅಥವಾ ಹರಿಹರರ ಆಳ್ವಿಕೆಯ ಸಮಯದಲ್ಲಿ ಕಟ್ಟಿಸಿದಂತೆ ತೋರುವ ಜನಾರ್ಧನ ದೇವಾಲಯವು ವಿದ್ಯಾಶಂಕರ ದೇವಾಲಯದ ಉತ್ತರಕ್ಕಿದೆ.[24] ಈ ದೇವಾಲಯದಲ್ಲಿ ಗರ್ಭಗೃಹ, ಸುಕನಾಸಿ ಮತ್ತು ಚಿಕ್ಕದಾದ ನವರಂಗ ಮತ್ತು ಮುಖಮಂಟಪ ಮತ್ತು ಉತ್ತರದಲ್ಲಿ ಗರುಡ ಮಂದಿರ ಮತ್ತು ದಕ್ಷಿಣದಲ್ಲಿ ಹನುಮಾನ್ ಮಂದಿರವಿದೆ. ಇಲ್ಲಿನ ಕಂಬಗಳಲ್ಲಿ ಹದಿನಾರು ಸಮತಲದ ಕೆತ್ತನೆಗಳಿದ್ದು ಚಚ್ಚೌಕದ ಮೌಲ್ಡಿಂಗ್ಸ್‌ನಿಂದ ಜೋಡಿಸಲ್ಪಟ್ಟಿವೆ. ಮೇಲ್ಛಾವಣಿಯು ವಿಶೇಷವಾಗಿದ್ದು ಬಾಗಿದ ಅಂಕಣಗಳನ್ನೊಂದಿದೆ. ಮುಂದಿನ ಹೊರಾಂಗಣವು ಮೂರು ಅಂಕಣಗಳನ್ನು ಹೊಂದಿದೆ. ಜನಾರ್ಧನ ವಿಗ್ರಹ ಸುಂದರವಾಗಿದ್ದು 1.3 ಮೀಟರ್ ಎತ್ತರವಾಗಿದೆ. ನವರಂಗದ ಗೋಡೆಯಲ್ಲಿ ಶಂಕರಾಚಾರ್ಯರ 0.610 ಮೀಟರ್ ಎತ್ತರದ ಮೂರ್ತಿ ಇದ್ದು ಒಂದು ಕೈ ಅಭಯ ಮತ್ತು ಚಿನ್‌ಮುದ್ರೆಯ ರೀತಿಯಲ್ಲಿವೆ. ಕಟಾಂಜನದ ಮೇಲೆ ನಾಲ್ಕು ಜನ ಶಂಕರ ಅನುಯಾಯಿಗಳ ಮೂರ್ತಿಗಳಿವೆ.

ವಿಘ್ನೇಶ್ವರ ದೇವಾಲಯದ ಹಿಂಬದಿಯಲ್ಲಿ ಈ ಹಿಂದಿನ ಸ್ವಾಮಿಗಳ ಸಮಾಧಿಗಳಿವೆ. ಪ್ರತಿಯೊಂದರ ಮುಂದೆ ಲಿಂಗವಿದೆ. ಈ ದೇವಾಲಯದ ಮುಂದೆ ಹಲವಾರು ಮಂದಿರಗಳಿದ್ದು ಕೋದಂಡರಾಮ, ವಾಗೇಶ್ವರಿ, ಹರಿಹರೇಶ್ವರ, ಶಂಕರನಾರಾಯಣ, ಸುರೇಶ್ವರಚಾರ್ಯ, ನರಸಿಂಹ ಭಾರತಿ, ಅಭಿನವ ಸಚ್ಚಿದಾನಂದ ಭಾರತಿ, ಸಚ್ಚಿದಾನಂದ ಭಾರತಿ ಮತ್ತು ಬ್ರಹ್ಮರಾಕ್ಷಸ (ಇದನ್ನು ಮಲಯಾಳಿ ಬ್ರಹ್ಮನೆಂದು ಕರೆಯುತ್ತಾರೆ) ಇಲ್ಲಿ 1973ರಲ್ಲಿ ಕಟ್ಟಿಸಿದಂತಹ ಪ್ರವಚನ ಮಂದಿರವಿದೆ. ಇತ್ತೀಚೆಗೆ ಬಿಡಿಸಿರುವ ವರ್ಣಚಿತ್ರಗಳಿವೆ. ಇವು ಶಂಕರಾಚಾರ್ಯರ ಬದುಕನ್ನು ಬಿಂಬಿಸುತ್ತವೆ. ಇದರ ಪಕ್ಕದಲ್ಲಿಯೇ ಸಂಸ್ಕೃತ ಪಾಠಶಾಲೆ, ವಾಚನಾಲಯ ಮತ್ತು ಅತಿಥಿ ಗೃಹಗಳಿವೆ. ತುಂಗಾನದಿಯ ಆಚೆ ನರಸಿಂಹವನವಿದೆ. ಸಾಮಾನ್ಯವಾಗಿ ಇಲ್ಲಿ ಸಂತರು ವಾಸಿಸುತ್ತಾರೆ. ಇಲ್ಲಿ

ಸುಂದರ ತೋಟವಿದೆ. ಇಲ್ಲಿ ಸುಂದರ ಹಸಿರು ಪರಿಸರವಿದೆ. ಇಲ್ಲಿ ಸಚ್ಚಿದಾನಂದ ವಿಲಾಸ ಆಶ್ರಮ, ಕಾಲಭೈರವ, ಸಚ್ಚಿದಾನಂದ ಶಿವಭಿನವ ನರಸಿಂಹ ಭಾರತಿ ಮತ್ತು ಚಂದ್ರಶೇಖರ ಭಾರತಿ ಮತ್ತು ಗೋಶಾಲೆ ಇದೆ. ಇಲ್ಲಿ ಶಂಕರಾಚಾರ್ಯರ 0.610 ಮೀ. ಎತ್ತರವಾದ ಮೂರ್ತಿಯಿದೆ. ಇಲ್ಲಿ ರತ್ನಗರ್ಭ ಗಣಪತಿ, ಚಂದ್ರಮೌಳೇಶ್ವರ ಲಿಂಗ, ಶ್ರೀಯಂತ್ರಶಾರದಾ, ದಕ್ಷಿಣಮೂರ್ತಿ, ಲಕ್ಷ್ಮೀನರಸಿಂಹ, ವಿಷ್ಣು ಸಾಲಿಗ್ರಾಮ ಮುಂತಾದವುಗಳನ್ನು ಆಚಾರ್ಯರು ಪೂಜಿಸುತ್ತಾರೆ. ಇಲ್ಲಿ ಇತರೆ ಮಂದಿರಗಳಿವೆ. ಶೃಂಗೇರಿಯ ಕುಗ್ರಾಮ ಸಚ್ಚಿದಾನಂದಪುರದಲ್ಲಿ ಸಚ್ಚಿದಾನಂದೇಶ್ವರ ಮತ್ತು ಸುಬ್ರಹ್ಮಣ್ಯ ಮಂದಿರಗಳಿವೆ.

## ಜೈನ ಬಸದಿ

ಶೃಂಗೇರಿ ಪಟ್ಟಣದ ಮಧ್ಯಭಾಗದಲ್ಲಿ ಹಳೆಯ ಬಸದಿಯಿದೆ. ಇದನ್ನು ಪಾರ್ಶ್ವನಾಥ ತೀರ್ಥಂಕರರಿಗೆ ಸಮರ್ಪಿಸಲಾಗಿದೆ. ಹೊಯ್ಸಳರ ದೊರೆಗಳಾದ ವಿಷ್ಣುವರ್ಧನ ಮತ್ತು ಒಂದನೆಯ ನರಸಿಂಹರ ಸಮಯದಲ್ಲಿ ರಚಿತವಾದ ಎರಡು ಶಾಸನಗಳು, ಮೊದಲನೆಯದು ಕ್ರಿ.ಶ. 1150 ಮತ್ತೊಂದು ಕ್ರಿ.ಶ. 1160/61. ಇವೆರಡು ಜೈನ ಶಾಸನಗಳು. ಮೊದಲನೆಯದು ಭಾಗಶಃ ಹಾಳಾಗಿದ್ದು ಅದರ ಸಾರಾಂಶ ಸ್ಪಷ್ಟವಾಗಿರುವುದಿಲ್ಲ. ಎರಡನೆ ಶಾಸನವು ಶ್ರೀಮನ್ನಿದುಗೊಡ ವಿಜಯನಾರಾಯಣ ಶಾಂತಿಶೆಟ್ಟಿಯ ವಂಶಸ್ಥರಾದ ಮರಿಶೆಟ್ಟಿಯ ಸ್ಮರಣಾರ್ಥ ಈ ದೇವಾಲಯಕ್ಕೆ ದತ್ತಿಯನ್ನು ನೀಡಿದ ಬಗ್ಗೆ ಮಾಹಿತಿಯನ್ನಿಡುತ್ತದೆ.[25] ಮುಂದುವರೆದು ಈ ಶಾಸನವು ಭಂಜರು ಮತ್ತು ನಾನದೇಶಿಯರು ತಾವು ಮಾರಿದ ವಸ್ತುಗಳ ಹಣದಿಂದ ಈ ದೇವಾಲಯಕ್ಕೆ ತೆರಿಗೆಯನ್ನು ನೀಡಲು ಒಪ್ಪಿದ್ದ ಬಗ್ಗೆ ಮಾಹಿತಿ ನೀಡುತ್ತದೆ. ಈ ಸ್ಥಳದಲ್ಲಿ ಕ್ರಿ.ಶ. 1166ಕ್ಕಿಂತ ಮುಂಚೆಯೇ ಜೈನ ದೇವಾಲಯವಿದ್ದ ಬಗ್ಗೆ ಮಾಹಿತಿ ನೀಡುತ್ತದೆ ಹಾಗೂ ಈ ಸ್ಥಳದಲ್ಲಿ ಜೈನರ ಗಮನಾರ್ಹ ಪ್ರಭಾವವಿತ್ತೆನ್ನುವುದರ ಬಗ್ಗೆ ದೃಢಪಡಿಸುತ್ತದೆ. ಶೃಂಗೇರಿಯಲ್ಲಿಯು ಸಹ ಹಲವಾರು ಜೈನ ಕುಟುಂಬಗಳಿರುವುದನ್ನು ಗಮನಿಸಬಹುದು. ಈ ಬಸದಿಯು ಗರ್ಭಗೃಹ, ಸುಕನಾಸಿ, ಪ್ರದಕ್ಷಿಣ ಮತ್ತು ನವರಂಗಗಳನ್ನೊಂದಿದ್ದು, ಸಮತಲದ ಷಟ್‌ಭುಜಾಕೃತಿಯ ಕಂಬಗಳಿಂದ ಕೂಡಿದೆ. ಇವು ಚಕ್ರಾಕೃತಿಯ ಮೌಲ್ಡಿಂಗ್ಸ್‌ಗಳನ್ನೊಂದಿದೆ. ಮೂಲತಃ ಮುಖಮಂಟಪವನ್ನು ಈ ಬಸದಿಯಲ್ಲಿ ನಂತರದ ಕಾಲದಲ್ಲಿ ಬೇರೆ ಕಡೆಗಳಿಂದ ತಂದು ನಿರ್ಮಿಸಲಾಗಿದೆ. ಮುಖ್ಯ ಕಟ್ಟಡವು ವಿಚಿತ್ರವಾದ ಇಳಿಜಾರುಕೃತಿಯಾಗಿದ್ದು, ಗ್ರಾನೈಟ್ ಬಂಡೆಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಶಿಲೆಯ ಪಾರ್ಶ್ವನಾಥನ 0.305 ಮೀಟರ್ ಎತ್ತರದ ಮೂರ್ತಿಯಿದೆ. ಏಳು ಹೆಡೆಯ ಎರಡು ನಾಗರ ಹಾವುಗಳು ಒಂದಕ್ಕೊಂದು ತಳಕು

ಹಾಕಿಕೊಂಡಿರುವ ಚಿತ್ರವನ್ನು ಪ್ರಭಾವಳಿಯ ಮೇಲೆ ಕೆತ್ತಲಾಗಿದೆ. ಸುಕನಾಸಿಯಲ್ಲಿ 0.305 ಮೀಟರ್ ಎತ್ತರದ ಪದ್ಮಾವತಿ ವಿಗ್ರಹವಿದೆ. ಈ ದೇವಾಲಯದಲ್ಲಿ ಕಲ್ಲಿನ ಮತ್ತು ಲೋಹದ ತೀರ್ಥಂಕರರ ಪ್ರತಿಮೆಗಳಿವೆ. ಇಲ್ಲಿ ವರ್ಧಮಾನ ಮತ್ತು ಇತರೆ ಇಪ್ಪತ್ಮೂರು ತೀರ್ಥಂಕರರ ಕಂಚಿನ ವಿಗ್ರಹಗಳ ಸಮೂಹವಿದೆ. ಇದರೊಂದಿಗೆ ಕ್ಷೇತ್ರಪಾಲ ವಿಗ್ರಹವಿದೆ.

**ಪ್ರವಾಸಿಗರಿಗಿರುವ ಅನುಕೂಲಗಳು**

ನಾಡಿನ ಎಲ್ಲ ಪ್ರಮುಖ ಸ್ಥಳಗಳಿಂದಲೂ ಯಾತ್ರಿಕರು ಶೃಂಗೇರಿಗೆ ಬರುವುದಕ್ಕೆ ನೇರವಾದ ಬಸ್ಸಿನ ಸೌಕರ್ಯವಿದೆ.

ಶೃಂಗೇರಿಯಲ್ಲಿ ವಸತಿ ಸೌಕರ್ಯಕ್ಕೆ ಯಾರೂ ಕಷ್ಟಪಡಬೇಕಾಗಿಲ್ಲ. ಶ್ರೀ ಮಠದ ಮುಖ್ಯದ್ವಾರದ ಎಡಗಡೆ ಶ್ರೀ ಮಠಕ್ಕೆ ಹೊಂದಿಕೊಂಡಂತೆ ಶ್ರೀ ಶಂಕರ ನಿಕೇತನ, ಅದರ ಎದುರಗಡೆ ಅತಿಥಿ ಗೃಹ ಅಲ್ಲಿಂದ ಮುಂದಕ್ಕೆ ಹೋದರೆ ಬಸ್ ನಿಲ್ದಾಣದ ಸಮೀಪದಲ್ಲಿ ತಿರುಪತಿ ದೇವಸ್ಥಾನದ ಆಡಳಿತ ಮಂಡಳಿಯವರು ಕಟ್ಟಿಸಿದ್ದ ಶ್ರೀ ಮಠದ ಆಡಳಿತದಲ್ಲಿರುವ ವಸತಿಗೃಹ; ಶ್ರೀ ಮಠದ ಮಹಾದ್ವಾರದ ಮುಂದಿನ ಭಾರತೀಬೀದಿಯಲ್ಲಿರುವ ಭಾರತೀ ವಿಹಾರ; ಶ್ರೀ ಮಠದ ಮುಖ್ಯದ್ವಾರದಿಂದ ಒಳಗೆ ಬಂದರೆ ಎಡಗಡೆ ಶ್ರೀ ಶಂಕರ ಕೃಪಾ ಹೀಗೆ ಅನೇಕ ವಸತಿ ಗೃಹಗಳನ್ನು ಹಿಂದಿನ ಪೀಠಾಧೀಶ ಶ್ರೀ ಶ್ರೀ ಅಭಿನವ ವಿದ್ಯಾತೀರ್ಥರು ಯಾತ್ರಾರ್ಥಿಗಳ ಸೌಕರ್ಯಕ್ಕಾಗಿ ನಿರ್ಮಾಣ ಮಾಡಿಸಿರುತ್ತಾರೆ.

ಶ್ರೀ ಮಠಕ್ಕೆ ಪ್ರವೇಶಿಸುವ ಮಹಾದ್ವಾರದ ಹೊರಗೆ ಎಡಭಾಗದಲ್ಲಿ "ಶ್ರೀ ಶಾರದಾ ಕೃಪಾ" ಮತ್ತು ಅದರ ಎದುರಿಗೆ 'ಯಾತ್ರಿ ನಿವಾಸ' ಎಂಬ ಎರಡು ಸುಸಜ್ಜಿತ ಯಾತ್ರಿಕ ವಸತಿ ಸಂಕೀರ್ಣಗಳನ್ನು ಶ್ರೀ ಶ್ರೀ ಭಾರತೀ ತೀರ್ಥರು ನಿರ್ಮಾಣ ಮಾಡಿಸಿದ್ದಾರೆ. ಶ್ರೀ ಮಠದ ಮುಖ್ಯದ್ವಾರದ ಸಮೀಪದಲ್ಲಿಯೇ ಶ್ರೀ ಮಠದ ಪ್ರಕಟಣೆಗಳು ಆಧ್ಯಾತ್ಮಿಕ ಗ್ರಂಥಗಳು ಮುಂತಾದವುಗಳ ಮಾರಾಟದ ಆಕರ್ಷಕ ಮಳಿಗೆ ಇದೆ. ಶ್ರೀ ಮಠದ ಮುಂಭಾಗದ ರಥ ಬೀದಿಯ ಪ್ರಾರಂಭದಲ್ಲಿಯೇ ಬಲ ಪಕ್ಕದಲ್ಲಿ ಯಾತ್ರಿಕರ ವಸತಿಯ ಕಾಟೇಜುಗಳ ನಿರ್ಮಾಣ ಕಾರ್ಯ ಪ್ರಾರಂಭವಾಗಿದೆ.

ವಸತಿಗೃಹ ಸೌಕರ್ಯಕ್ಕಾಗಿ ಶ್ರೀ ಮಠದ ಮುಖ್ಯದ್ವಾರದ ಬಳಿ ಇರುವ ಸ್ವಾಗತಕಾರರನ್ನು ಸಂಪರ್ಕಿಸಿ, ಸೌಕರ್ಯವನ್ನು ಪಡೆಯಬಹುದು. ಶೃಂಗೇರಿಗೆ ಬರುವ ಎಲ್ಲ ಯಾತ್ರಿಕರಿಗೂ ಶ್ರೀ

ಮಠದಲ್ಲಿ ಭೋಜನದ ವ್ಯವಸ್ಥೆಗಾಗಿ ಶ್ರೀ ಮಠದ ಪಾರುಪತ್ತೇದಾರರಿಗೆ ಮುಂಚಿತವಾಗಿ ತಿಳಿಸಬೇಕಾಗುತ್ತದೆ.

**ಆಕರ್ಷಕ ಭವ್ಯ ಭೋಜನ ಶಾಲೆ:** ಶ್ರೀ ಮಠಕ್ಕೆ ಪ್ರತಿ ದಿನವೂ ರಾಷ್ಟ್ರದ ವಿವಿಧ ಭಾಗಗಳಿಂದ ಬರುವ ಸಹಸ್ರಾರು ಸಂಖ್ಯೆ ಭಕ್ತರಿಗೆ ಶುಚಿ ರುಚಿಯಾದ ಪ್ರಸಾದ ಭೋಜನವನ್ನು ವ್ಯವಸ್ಥಿತ ರೀತಿಯಲ್ಲಿ ನೀಡಲು ಅತ್ಯಂತ ಆಕರ್ಷಕ ವಿನ್ಯಾಸದ ಭವ್ಯ ಭೋಜನ ಶಾಲೆಯು ಈಚೆಗೆ ಉದ್ಘಾಟಿಸಲ್ಪಟ್ಟಿದೆ. ಒಂದೇ ಸಲಕ್ಕೆ 3 ಸಹಸ್ರ ಮಂದಿ ಕುಳಿತು ಊಟಮಾಡಲು ಅವಕಾಶವಿರುವ 31/2 ಕೋಟಿ ರೂ.ಗಳ ವೆಚ್ಚದ ಅತ್ಯಾಧುನಿಕ ತಾಂತ್ರಿಕ ನಿರ್ಮಾಣ ವಿಧಾನದಿಂದ ರೂಪುಗೊಂಡಿರುವ ಈ ಬೃಹತ್ ಕಟ್ಟಡವು ಇಡೀ ರಾಷ್ಟ್ರದಲ್ಲಿಯೇ ವಿಶಿಷ್ಟವಾದುದು.

ಶ್ರೀ ಶಾರದಾಂಬಾ, ಶ್ರೀ ವಿದ್ಯಾಶಂಕರ ಮತ್ತು ಇತರ ದೇವಾಲಯಗಳು ಬೆಳಿಗ್ಗೆ 6 ರಿಂದ 1 ಘಂಟೆಯವರೆಗೆ ಮತ್ತು ಸಾಯಂಕಾಲ 5 ರಿಂದ 9 ಘಂಟೆಯವರೆಗೆ ತೆರೆದಿರುತ್ತವೆ. ಭಕ್ತಾದಿಗಳು ಅಭಿಷೇಕ, ಅರ್ಚನಾದಿಗಳನ್ನು ಆ ಸಮಯದಲ್ಲಿ ಮಾಡಿಸಬಹುದು.

ವಿಶೇಷ ಪೂಜಾದಿಗಳನ್ನು ಮಾಡಿಸಲು ಅಪೇಕ್ಷಿಸುವವರು, ಅಂದರೆ, ಶ್ರೀ ಶಾರದಮ್ಮನವರಿಗೆ ದಿಂಡಿ ದೀಪಾರಾಧನೆ, ಲಕ್ಷಾರ್ಚನೆ, ಸುವಾಸಿನೀ ಪೂಜೆ, ಗಣಪತಿಗೆ ಮೋದಕ ಸೇವೆ, ಮಕ್ಕಳಿಗೆ ಅಕ್ಷರಾಭ್ಯಾಸ, ಮುಂತಾದವನ್ನು ಮಾಡಿಸಲು ಅಪೇಕ್ಷಿಸುವ ಭಕ್ತಾದಿಗಳು ಮುಂಚಿತವಾಗಿ ಶ್ರೀ ಮಠದ ಆಡಳಿತಾಧಿಕಾರಿಗಳಿಗೆ ಪತ್ರ ಬರೆದರೆ, ಆ ಸೇವೆಗಳನ್ನು ಮಾಡಿಸಲು ವ್ಯವಸ್ಥೆ ಮಾಡಲಾಗುವುದು.

ವರ್ಷಕ್ಕೊಂದು ಬಾರಿ ಶ್ರೀ ಶಂಕರಜಯಂತಿಯ ಸಂದರ್ಭದಲ್ಲಿ ಶ್ರೀ ಮಠದ ವತಿಯಿಂದ ಧರ್ಮೋಪನಯನವನ್ನು ಏರ್ಪಾಡು ಮಾಡಲಾಗುತ್ತದೆ. ಈ ಸಂದರ್ಭವನ್ನು ಉಪಯೋಗಿಸಿಕೊಳ್ಳಲು ಅಪೇಕ್ಷಿಸುವವರು ಶ್ರೀ ಮಠದ ಆಡಳಿತಾಧಿಕಾರಿಗಳನ್ನು ಸಂಪರ್ಕಿಸಬೇಕು. ಇದಲ್ಲದೇ ಚಂಡೀಹೋಮ, ರುದ್ರಹೋಮವೇ ಮೊದಲಾದ ಹೋಮ ಹವನಗಳನ್ನು ಮಾಡಲು ಇಚ್ಛಿಸುವವರು ಮುಂಚಿತವಾಗಿ ಶ್ರೀ ಮಠಕ್ಕೆ ಬರೆದರೆ, ವ್ಯವಸ್ಥೆ ಮಾಡಲಾಗುವುದು. ಭಕ್ತಾದಿಗಳು ತಮ್ಮ ಹರಕೆ ಮತ್ತು ಕಾಣಿಕೆಗಳನ್ನು ಸಲ್ಲಿಸಲೂ ಸಹ ಉಚಿತವಾದ ವ್ಯವಸ್ಥೆ ಇದೆ.

**ವಿದ್ಯಾತೀರ್ಥ ಸೇತು:** ಮಳೆಗಾಲದಲ್ಲಿ ತುಂಗೆಯು ತುಂಬಿ ಹರಿಯುವಾಗ ನರಸಿಂಹವನಕ್ಕೆ ಹೋಗಲು ದೋಣಿ–ಜಂಗಲ್‌ಗಳ ಬಳಕೆ ಅನಿವಾರ್ಯವಾಗಿತ್ತು. ಪ್ರವಾಹ ಹೆಚ್ಚಿದಾಗ ಅದೂ

ಸಾಧ್ಯವಾಗದೆ ತೊಂದರೆಯಾಗುತ್ತಿತ್ತು. ಮಳೆಗಾಲ ಕಳೆದ ನಂತರವೂ ಮರದಹಂಗಾಮಿ ಸಾಲಾಗಿ ಹಾಕಿ ಅದರ ಮೇಲೆ ಓಡಾಡಬೇಕಾಗುತ್ತಿತ್ತು. ಈ ಎಲ್ಲಾ ತೊಂದರೆಗಳನ್ನು ತಪ್ಪಿಸುವ ಸಲುವಾಗಿ ಬ್ರಹ್ಮೈಕ್ಯ ಗುರುವರ್ಯ ಶ್ರೀ ಶ್ರೀ ಅಭಿನವ ವಿದ್ಯಾತೀರ್ಥರು ಶಾಶ್ವತ ಸೇತುವೆಯ ನಿರ್ಮಾಣ ಕಾರ್ಯವನ್ನು ಪ್ರಾರಂಭ ಮಾಡಿಸಿದರು. ಲಕ್ಷಾಂತರ ರೂಪಾಯಿಗಳ ಖರ್ಚಿನ ಈ ಅಗಾಧ ಕೆಲಸವು ನವೀನ ತಾಂತ್ರಿಕ ನಿಪುಣರ ಮೇಲ್ವಿಚಾರಣೆಯಲ್ಲಿ ಮುಂದುವರಿಯಿತು. ಆದರೆ ನಿರ್ಮಾಣ ಕಾರ್ಯ ಮುಗಿಯುತ್ತ ಬರುತ್ತಿದೆ ಎನ್ನುವಾಗಲೇ ಶ್ರೀ ಶ್ರೀ ಅಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳವರು ಬ್ರಹ್ಮೈಕ್ಯರಾದರು. ನಂತರ ಭದ್ರವೂ–ಭವ್ಯವೂ ಆದ ಈ ಸೇತುವೆಗೆ ಅವರ ಶಿಷ್ಯ ಗುರುವರ್ಯ ಶ್ರೀ ಶ್ರೀ ಭಾರತೀ ತೀರ್ಥರು "ವಿದ್ಯಾತೀರ್ಥ ಸೇತು" ಎಂಬ ಅರ್ಥ ಪೂರ್ಣ ಹೆಸರನ್ನಿಟ್ಟು 1990ರಲ್ಲಿ ಉದ್ಘಾಟಿಸಿ ಗುರು ಭಕ್ತಿಯನ್ನು ಸಮರ್ಪಿಸಿದರು.

## 'ಕರ್ನಾಟಕ ಕವಿ ಚೂತವನಚೈತ್ರ' ಲಕ್ಷ್ಮೀಶನ ದೇವನೂರು

ಮಹಾಕವಿಯೊಬ್ಬ ಬಾಳಿ ಬದುಕಿದ ಇತಿಹಾಸ ನಮಗೆ ಮೊದಲಿನಿಂದಲೂ ಅಷ್ಟು ಪ್ರಮುಖ ಎನಿಸದೆ ಆತ ಕೊಟ್ಟ ಮಹಾಕೃತಿಯನ್ನು ಮೆಚ್ಚಿಕೊಳ್ಳುವುದು ಭಾರತೀಯನ ಜಾಯಮಾನ. ಆದರೆ ಪ್ರಾಚೀನ ಕಾವ್ಯಗಳನ್ನು ತಿಳಿಯಬೇಕಾದರೆ ನಮ್ಮ ದೃಷ್ಟಿಕೋನದಲ್ಲಿ ಈಗ ಅನಿವಾರ್ಯವಾಗಿ ಬದಲಾವಣೆಗಳಾಗಿದೆ. ಕೃತಿಯೊಂದನ್ನು ಓದಿ ಅಧ್ಯಯನ ಮಾಡುವುದಾದಲ್ಲಿ ಆತನ ಪರಿಸರ, ಪ್ರಯೋಗಿಸಿದ ಭಾಷೆ, ಸ್ಥಳೀಯ ಸಂಪ್ರದಾಯ, ನಂಬಿಕೆ, ಬಾಳಿ ಬದುಕಿದ್ದ ಪ್ರದೇಶಗಳ ಸಾಕಷ್ಟು ಮಾಹಿತಿ ಓದುಗನಿಗೆ ಅನಿವಾರ್ಯವೆನಿಸುತ್ತದೆ. ಇವುಗಳ ಹಿನ್ನೆಲೆ ಇರದಿದ್ದಲ್ಲಿ ಆ ಕೃತಿಯ ಅಧ್ಯಯನ ಅಪರಿಪೂರ್ಣ ಎನಿಸುವುದು. ಕಾವ್ಯರಚನಕಾರನಾದ ಕವಿ ತನ್ನ ವೈಯಕ್ತಿಕ ವಿವರ ಕೊಡದಿದ್ದಾಗ, ಕವಿಯ ವಿಚಾರಕ್ಕಾಗಿ, ಆಧಾರಗಳಿಗಾಗಿ ಹುಡುಕಬೇಕಾಗುತ್ತದೆ. ಕವಿ ಕೊಟ್ಟ ಬಾಹ್ಯ ಅಥವಾ ಕಾವ್ಯ ಆಂತರಿಕ ಆಧಾರಗಳಿಂದ ಸಂಶೋಧಕ ಕವಿಯ ಕಾಲ ದೇಶಗಳ ಬಗ್ಗೆ ತನ್ನ ವಿವರಗಳನ್ನು ಕೊಡುತ್ತಾನೆ. ಕವಿಯ ಕುರಿತಂತೆ ಒಬ್ಬೊಬ್ಬ ವಿದ್ಯಾಂಸನೂ ತನ್ನದೇ ಆದ ರೀತಿಯಿಂದ ವಿಚಾರ ಮಾಡುವುದರಿಂದ ಕಾಲ, ದೇಶಗಳ ಮಾಹಿತಿ ಗೊಂದಲಕ್ಕೆ ಒಳಗಾಗುತ್ತದೆ. ಇದ್ದುದರಲ್ಲಿ ವಿದ್ವಾಂಸರ ವಿವೇಚನೆಯಲ್ಲಿ ಅತಿ ಸಂಭಾವ್ಯವೆನಿಸುವ ಸಾಧಾರಪೂರ್ವಕವಾದ ನಿಲುವನ್ನು ಅನಿವಾರ್ಯವಾಗಿ ಒಪ್ಪಿಕೊಳ್ಳಬೇಕಾಗುತ್ತದೆ. ಈ ರೀತಿಯ ಗೊಂದಲಕ್ಕೆ ಒಳಗಾಗಿ ಬಹುಜನ ವಿದ್ವಾಂಸರ ನಿಲುವನ್ನು ಒಪ್ಪಿ ಲಕ್ಷ್ಮೀಶನ ಜನ್ಮಸ್ಥಳ ಕಡೂರು ತಾಲೂಕಿನ ದೇವನೂರು ಎಂದು ತೀರ್ಮಾನಿಸಲಾಗಿದೆ.

ಪಾಶ್ಚಿಮಾತ್ಯ ದೇಶಗಳಲ್ಲಿ ಕವಿ ಹುಟ್ಟಿ ತಮ್ಮ ದೇಶಕ್ಕೆ ಕೀರ್ತಿತಂದಿದ್ದು ಅವರಿಗೆ ಬಹು ಹೆಮ್ಮೆಯ ವಿಚಾರ. ಅದಕ್ಕಾಗಿ ಆತನ ಜನ್ಮಸ್ಥಳವನ್ನು ಪ್ರವಾಸಿ ತಾಣವನ್ನಾಗಿ ಮಾಡುವುದಲ್ಲದೆ ಆ ಕವಿಯ ಮನೆಯನ್ನು ಸ್ಮಾರಕವಾಗಿ ಸಂರಕ್ಷಿಸುತ್ತಾರೆ. ಕವಿ ಬಳಸಿದ ಲೇಖನಿ ಮತ್ತಿತರ ವಸ್ತುಗಳನ್ನು ಜೋಪಾನವಾಗಿ ರಕ್ಷಿಸಿ ಪ್ರದರ್ಶನಕ್ಕಿಡುತ್ತಾರೆ. ಆದರೆ ನಮ್ಮಲ್ಲಿ ಆ ರೀತಿಯ ಅಭಿಮಾನ ಬೆಳೆದುಬರಲಿಲ್ಲ. ಏನಾದರೂ ಮಾಡುವುದಾದಲ್ಲಿ ಅದು ಸರ್ಕಾರದ ಜವಾಬ್ದಾರಿಯೆಂದು ನಾವು ಭಾವಿಸುತ್ತೇವೆ. ಒಂದು ಕಾಲದಲ್ಲಿ ಲಕ್ಷ್ಮೀಶನ ದೇಗುಲ ಮತ್ತು ಕವಿಯ ಬಗೆಗಿನ ವಿಚಾರ ಚರ್ಚಾಸ್ಪದವಾಗಿತ್ತು. ಇಂದು ಅದು ಗೊಂದಲಕ್ಕೆ ಅವಕಾಶವಿಲ್ಲದಂತೆ ನಿರ್ದಿಷ್ಟವಾಗಿ ಲಕ್ಷ್ಮೀಶನ ಜನ್ಮಸ್ಥಳ ಕಡೂರಿನ ದೇವನೂರು ಎಂದು ಸಾಧಾರಣವಾಗಿ ನಿರೂಪಿಸಲಾಗಿದೆ.

ಕನ್ನಡ ಸಾರಸ್ವತ ಪ್ರಪಂಚಕ್ಕೆ ಮಹಾಕಾವ್ಯವೊಂದನ್ನು ನೀಡಲು ಪ್ರಭಾವ ನೀಡಿದ ಸುಂದರ ಪ್ರಕೃತಿದೃಶ್ಯದ ರಮನೀಯಸ್ಥಳ ದೇವನೂರು. ಈ ಊರಿನ ಪ್ರಕೃತಿಯ ದೃಶ್ಯಗಳೇ ಕಾವ್ಯದಲ್ಲಿ ವರ್ಣಿತಗೊಂಡತಿವೆ. ಈ ಊರಿನ ದೂರದ ಬೆಟ್ಟಗಳು, ಮಂದಮಾರುತವನ್ನು ಬೀಸುವ ವಿಶಾಲವಾದ ಕೆರೆ, ಶಾಲಿವನಗಳು, ಕಂಗು, ತೆಂಗು, ಬಾಳೆ, ಕಪಿತ್ಥ, ನೇರಳೆ ಜಂಬೀರ ಫಲವೃಕ್ಷಗಳು ಮನಸ್ಸಿಗೆ ಚೇತೋಹಾರಿಯಾದದ್ದು. ಕಾವ್ಯದಲ್ಲಿ ವರ್ಣಿತವಾದ ಪ್ರಕೃತಿ ಇಂದೂ ಜೀವಂತವಾಗಿದೆ. ಇಂಥಹ ಪ್ರಕೃತಿಯ ನಡುವೆ ಬೆಳೆದ ಕವಿ ಅದನ್ನು ಕಾವ್ಯದಲ್ಲಿ ಚಿತ್ರಿಸಿದ್ದರಿಂದಲೇ ಈತ 'ಕವಿ ಚೂತವನ ಚೈತ್ರ'ನೆಂಬ ಬಿರುದಿಗೆ ಪಾತ್ರನಾದ. ಈ ಬಿರುದು ಆತನ ಸೌಂದರ್ಯಾನುಭೂತಿಗೆ ಸಿಕ್ಕ ಗೌರವ ಎನ್ನಬಹುದು.

ಐತಿಹಾಸಿಕವಾಗಿ ಈ ಊರು ದ್ವಾರಸಮುದ್ರದ ಆಡಳಿತದ ವ್ಯಾಪ್ತಿಗೆ ಸೇರಿತ್ತು. ಹಿಂದೆ ಸೈನ್ಯವು ಈ ಹಳ್ಳಿಯಲ್ಲಿ ಬೀಡುಬಿಟ್ಟು ವಿಶ್ರಾಂತಿಗೊಳ್ಳುತ್ತಿದ್ದುದಕ್ಕೆ ಇತಿಹಾಸ ಗ್ರಂಥಗಳು ಮಾಹಿತಿ ನೀಡುತ್ತವೆ. ದೇವನೂರು ಒಂದು ಪುಟ್ಟಗ್ರಾಮ. ಚಿಕ್ಕಮಗಳೂರು ಜಿಲ್ಲೆಗೆ ಸೇರಿದ್ದು. ಜಿಲ್ಲಾ ಕೇಂದ್ರದಿಂದ ಸುಮಾರು 40 ಕಿ.ಮೀ. ದೂರದಲ್ಲಿದೆ. ಈ ಹಳ್ಳಿಯಲ್ಲಿ ಸುಮಾರು 800 ಮನೆಗಳಿದ್ದು ಅನ್ವರ್ಥಕವೆನಿಸುವಂತೆ 35ಕ್ಕೂ ಮೇಲ್ಪಟ್ಟು ದೇವಾಲಯಗಳಿವೆ. ಮತೀಯ ಸೌಹಾರ್ದ ಇಲ್ಲಿಯ ವೈಶಿಷ್ಟ್ಯ. ಕಾವ್ಯದಲ್ಲಿ ವ್ಯಕ್ತಗೊಳ್ಳುವ ಕುರುಬ, ಲಿಂಗಾಯತ, ಒಕ್ಕಲಿಗ, ಮಡಿವಾಳ, ಗಾಣಿಗ, ಬೆಸ್ತ, ತಿಗಳ, ದೇವಾಂಗ, ಈಡಿಗ, ಬ್ರಾಹ್ಮಣ ಮೊದಲಾದ ಜಾತಿಯವರು ಇಂದೂ ಸಾಂಸ್ಕೃತಿಕವಾಗಿ ಒಂದಾಗಿ ಬದುಕುತ್ತಿದ್ದಾರೆ. ಕವಿಗೆ ಸಂಬಂಧಿಸಿದ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಜಾತಿ ಭೇದವಿಲ್ಲದೆ ಒಂದಾಗಿ ಈಗಲೂ ಉತ್ಸವಾದಿಗಳನ್ನು ನಡೆಸುತ್ತಿದ್ದಾರೆ. ಈ

ಸ್ಥಳದ ಅನೇಕ ದೇವಾಲಯಗಳಲ್ಲಿನ ಮಹತ್ವ ಹಾಗೂ ವಿಶಿಷ್ಟತೆ ಪಡೆದ ದೇಗುಲಗಳೆಂದರೆ ಪ್ರಧಾನವಾಗಿ ಕವಿಯ ಆರಾಧ್ಯದೈವ ಶ್ರೀ ಲಕ್ಷ್ಮೀಕಾಂತ ಸ್ವಾಮಿ ಮತ್ತು ರುದ್ರಭಟ್ಟ ಕವಿಯ ಆರಾಧ್ಯದೈವವೆಂದು ಐತಿಹ್ಯಗೊಂಡಿರುವ ಶ್ರೀ ಸಿದ್ದೇಶ್ವರಸ್ವಾಮಿ ದೇಗುಲಗಳು. ಇವೆರಡೂ ಭಕ್ತರಿಗೆ ಶಾಂತಿಯ ಗುಡಿಗಳೂ, ಸಹೃದಯರಿಗೆ ಅಭಿಮಾನದ ನೆಲೆಯೂ, ಸಂಶೋಧಕರಿಗೆ ಆಸಕ್ತಿಯ ತಾಣವೂ ಆಗಿ ವಿಶಿಷ್ಟವೆನಿಸಿವೆ.

## ಶ್ರೀ ಲಕ್ಷ್ಮೀಕಾಂತ ದೇವಾಲಯ, ದೇವನೂರು

ದೇವನೂರು ಕಡೂರು ತಾಲ್ಲೂಕು ಕೇಂದ್ರದಿಂದ ಸುಮಾರು 17 ಕಿ.ಮೀ. ದೂರದಲ್ಲಿದೆ.[26] ಶ್ರೀ ಲಕ್ಷ್ಮೀಕಾಂತ ದೇವಾಲಯ ಸುಮಾರು ಒಂದೂವರೆ ಎಕರೆ ಪ್ರದೇಶದಲ್ಲಿ ವಿಶಾಲವಾಗಿ ಕಟ್ಟಿರುವ ಗುಡಿ. ಈ ದೇಗುಲದ ವೈಶಿಷ್ಟ್ಯ ವಾಸ್ತುಶೈಲಿಯಲ್ಲಿದೆ. ಬಹು ಒರಟು ಕಲ್ಲುಗಳೂ ಕಂಬಗಳಲ್ಲಿ ಕೆತ್ತಿರುವ ಸಾಂಸ್ಕೃತಿಕವಾದ ಪ್ರತಿಮೆಗಳು, ಮುಂಬಾಗಿಲು ದೊಡ್ಡದಾಗಿದ್ದು ಶಿಲೆಯಿಂದಲೇ ಕಟ್ಟಲಾಗಿದೆ. ಹೆಬ್ಬಾಗಿಲ ಒಳಗೆ ಅನೇಕ ಕಂಬಗಳ ಪಡಸಾಲೆಯಿದ್ದು ಅದರಲ್ಲಿ ನರಸಿಂಹ, ಹನುಮ, ಮತ್ಸ್ಯ ಮುಂತಾದ ಪ್ರತಿಮೆಗಳನ್ನು ಕೆತ್ತಲಾಗಿದೆ. ಶ್ರೀಕೃಷ್ಣನ ಭಾಗವತದ ಚಿತ್ರಣಗಳೂ ಕೆಲವಿದೆ. ಹೆಬ್ಬಾಗಿಲಿನಿಂದ ಒಳಗಿನ ಗರ್ಭಗುಡಿಯ ಶ್ರೀ ಸ್ವಾಮಿಯ ಮೂರ್ತಿ ಎತ್ತರವಾಗಿ ಕಾಣುವಲ್ಲಿ ದ್ವಾರಗಳ ತಾಂತ್ರಿಕ ಕೌಶಲ್ಯವು ಕಾರಣ(ಚಿತ್ರಸಂಖ್ಯೆ60). ಪ್ರಾಕಾರದ ನಡುವೆ ಲಕ್ಷ್ಮೀಕಾಂತ ಗುಡಿ, ಲಕ್ಷ್ಮೀಗುಡಿ ಎಡಭಾಗಕ್ಕೆ ಕವಿ ಕಟ್ಟಿದ್ದೆಂದು ಐತಿಹಾಸಿಕವಾಗಿ ಪ್ರಸಿದ್ಧಿಗೊಂಡಿರುವ ಕಾವ್ಯ ಮಂಟಪಗಳಿವೆ. ಇವೆಲ್ಲವೂ ಒರಟುಕಲ್ಲಿನ ಕಂಬಗಳಿಂದ, ಗಟ್ಟಿಯಾದ ಹಾಸುಗಲ್ಲುಗಳಿಂದ ರಚಿತವಾಗಿವೆ. ಕಂಬಗಳು ಬಹುದೊಡ್ಡದಾಗಿದ್ದು ಶ್ರೀಕೃಷ್ಣನ, ಮಹಾಭಾರತದ ಪಾತ್ರಗಳ ಚಿತ್ರ ಪ್ರತಿಮೆಗಳಿಂದ ಕೂಡಿವೆ. ಈ ಗುಡಿಯ ವಿನ್ಯಾಸ ಚಿಕ್ಕ ತಿರುಪತಿ, ಶ್ರೀರಂಗಪಟ್ಟಣ, ಮುಳಬಾಗಿಲುಗಳ ದೇಗುಲಗಳನ್ನು ಹೋಲುತ್ತದೆ. ಮಹಾದ್ವಾರದ ಮೇಲೆ ಕೆಲವಾರು ವರ್ಷಗಳ ಹಿಂದೆ ಶೇಷಶಯನನಾದ ಶ್ರೀ ವಿಷ್ಣುವಿನ ವಿಗ್ರಹವೂ, ಆತನ ಸೇವೆ ಮಾಡುತ್ತಿರುವ ಶ್ರೀದೇವಿ ಭೂದೇವಿಯರಿಂದ ಕೂಡಿರುವ ವಿಮಾನಮಂಟಪವನ್ನು ನಿರ್ಮಿಸಿ, ದೇವರ ಎದುರಿಗೆ ಭಕ್ತಕವಿ ಲಕ್ಷ್ಮೀಶನನ್ನು ಧ್ಯಾನಯೋಗದಲ್ಲಿರುವಂತೆ ಮಾಡಿ ಇಡಲಾಗಿದೆ(ಚಿತ್ರಸಂಖ್ಯೆ61).

ಲಕ್ಷ್ಮೀಕಾಂತನ ಮೂಲಗುಡಿ ಮುಖಮಂಟಪ, ನವರಂಗ, ಆಳ್ವಾರ ಮಂಟಪ ಗರ್ಭಗುಡಿಗಳಿಂದ ಕೂಡಿದೆ. ಒಳಗಿನ ಕಂಬಗಳು ಬಹು ನುಣುಪಾಗಿದ್ದು ಕಲಾತ್ಮಕವೆನಿಸುವುವು. ಮುಖಮಂಟಪ ವಿಶಾಲ ಹಜಾರದಿಂದ ಕೂಡಿದೆ. ಉತ್ಸವಮೂರ್ತಿಯನ್ನು ಮೆರೆಸಲು ಅಲ್ಲಿಯೇ ಸಿದ್ಧಗೊಳಿಸಿ ಅಲಂಕರಿಸುತ್ತಾರೆ. ಮುಂದಿನ ನವರಂಗದಲ್ಲಿ ನಾಲ್ಕು ಕಂಬಗಳ ಮಧ್ಯದ ನೃತ್ಯ

ರಂಗದ ಪೀಠದ ಮೇಲೆ ಲಕ್ಷ್ಮೀಕಾಂತ ಶ್ರೀದೇವಿ, ಭೂದೇವಿಯರ ಉತ್ಸವ ಮೂರ್ತಿಗಳನ್ನು ಸರ್ವಾಲಂಕಾರಭೂಷಿತವಾಗಿ ಇರಿಸಲಾಗಿದೆ. ತ್ರಿಭಂಗಿಗಳಿಂದ ಕೂಡಿದ ದೇವಿಯ ವಿಗ್ರಹ ಹಾಗೂ ಸಮಭಂಗಿಯ ಲಕ್ಷ್ಮೀಕಾಂತನ ವಿಗ್ರಹಗಳನ್ನು ತಾಮ್ರದಿಂದ ನಿರ್ಮಿಸಲಾಗಿದೆ, ಪಕ್ಕದಲ್ಲಿನ ಹಜಾರದಲ್ಲಿ ಕವಿ ಲಕ್ಷ್ಮೀಶನ ವಿಗ್ರಹವನ್ನು ಪ್ರಸಿದ್ಧ ಗಮಕಿ ಶ್ರೀ ಕೌಶಿಕರು ನಿರ್ಮಿಸಿಕೊಟ್ಟಿದ್ದು ಕಮಾನು ಮಂಟಪದಲ್ಲಿ ಸ್ಥಾಪಿಸಲಾಗಿದೆ. ಪದ್ಮಾಸನದಲ್ಲಿ ಕುಳಿತಿರುವ ವಿಗ್ರಹವು ಧ್ಯಾನಯೋಗದಲ್ಲಿದ್ದು ಕವಿಯ ಭಕ್ತಿ ಭಾವವನ್ನು ಪ್ರತಿಬಿಂಬಿಸುತ್ತದೆ. ಆಳ್ವಾರ ಮಂಟಪದ ಓವರಿಯ ದ್ವಾರದ ಅಕ್ಕಪಕ್ಕಗಳಲ್ಲಿ ಹಾಗೂ ನವರಂಗಗಳಲ್ಲಿ ದಶಾವತಾರದ ಚಿತ್ರಗಳನ್ನು ಬರೆಸಲಾಗಿದೆ. ಇಡೀ ನವರಂಗ ಕಲ್ಲಿನಿಂದಲೇ ಜೋಡಣೆಗೊಂಡು ಸದೃಢವಾಗಿ ನಿರ್ಮಿತವಾಗಿದೆ.

ಮುಂದಿನ ಕೋಣೆಯಲ್ಲಿ ದ್ವಾದಶ ಆಳ್ವಾರರ ಪ್ರತಿಮೆಗಳಿದ್ದು ಅವೆಲ್ಲವೂ ನಮಸ್ಕಾರಪೂರ್ವಕ ಪದ್ಮಾಸನದಲ್ಲಿವೆ. ಇವುಗಳ ಜೊತೆಯಲ್ಲಿ ಅನಂತ ನಾರಾಯಣ, ಶ್ರೀರಾಮಾನುಜಾಚಾರ್ಯ, ಶ್ರೀದೇಶಿಕ, ವಿಶ್ವಸೇನ, ಗಣಪತಿಯ ವಿಗ್ರಹಗಳು ಕಲಾತ್ಮಕವೆನಿಸಿವೆ. ಭಾಗವತ ಸಂಪ್ರದಾಯದವನಾದ ಶ್ರೀ ಲಕ್ಷ್ಮೀಶನ ಭಾಗವತ ಕಾವ್ಯ ಸಂಪ್ರದಾಯದಂತೆ ಶ್ರೀ ಸಿದ್ಧೇಶ್ವರಸ್ವಾಮಿಯ ಆಭರಣವನ್ನು ಪೀಠಸ್ಥಿತಗೊಳಿಸಿ ದಿನನಿತ್ಯವೂ ಪೂಜೆ ಸಲ್ಲಿಸುವುದು ವಿಶೇಷ. ಕವಿಯ ಆಶಯ ಹರಿ–ಹರ ಸಮಾನತೆಗೆ ಈಗಲೂ ಇದು ಪೂರಕವಾಗಿದೆ. "ಪಾವನತುಲಾ ಭರಣಮಂ ಮಾಡಿಕೊಂಡೆಸೆವ ಪಾವನತರ ಸ್ವರೂಪಂ" ಎಂಬ ವರ್ಣನಾಮ ರೂಪವಾದ ಮುಖಾಭರಣ ಇದಾಗಿದೆ. ಗರ್ಭಗುಡಿಯಲ್ಲಿ ಪಾಂಡವರು ಸ್ಥಾಪಿಸಿದ್ದೆಂದು ಹೇಳಲಾಗುವ ಶ್ರೀ ಲಕ್ಷ್ಮೀಕಾಂತಮೂರ್ತಿಯು ಶ್ರೇಷ್ಠ ಸಾಲಿಗ್ರಾಮ ಶಿಲೆ ಎಂದು ಹೇಳುವ ನುಣುಪಾದ ಕಪ್ಪು ಶಿಲೆಯಿಂದ ನಿರ್ಮಿತವಾಗಿದೆ. ಇದರ ಸ್ಥಾಪನೆಗೆ ಪುರಾಣೋಕ್ತವಾದ ಕಥೆಗಳು ಸಾಕಷ್ಟು ಪ್ರಚಲಿತ ಇವೆ. ಶ್ರೀ ಲಕ್ಷ್ಮೀಕಾಂತಸ್ವಾಮಿ ಎಂಬುದು ಇದರ ನಾಮವಾದರೂ ನಾರಾಯಣಮೂರ್ತಿ ಮಾತ್ರವಿದ್ದು ಲಕ್ಷ್ಮೀದೇವಿಯನ್ನು ಎಡಭಾಗದ ಗುಡಿಯಲ್ಲಿ ಸ್ಥಾಪಿಸಲಾಗಿದೆ. ಮೂರ್ತಿಯು ಅತ್ಯಂತ ಕಲಾತ್ಮಕವಾಗಿದ್ದು ನಖಶಿಖಪರ್ಯಂತ ಆಭರಣಗಳಿಂದ ಸಮನ್ವಿತವಾಗದೆ. ವಿಗ್ರಹದ ಕೆಳಗೆ ಈರ್ವರು ಸ್ತ್ರೀಯರು ಸ್ವಾಮಿಗೆ ಚಾಮರವಿಕ್ಕುತ್ತಿದ್ದಾರೆ. ಪೂರ್ಣ ಅಲಂಕಾರ ಮಾಡಿದಲ್ಲಿ ಮೂರ್ತಿ ಅತ್ಯಂತ ತೇಜೋರೂಪವಾಗಿಯೂ, ರಮಣೀಯವಾಗಿಯೂ ತೋರಿ ಆಹ್ಲಾದವನ್ನುಂಟು ಮಾಡುವುದು. ಎಡಭಾಗದ ಬೇರೆಯ ಗುಡಿಯಲ್ಲಿರುವ ಲಕ್ಷ್ಮೀಯ ವಿಗ್ರಹವೂ ಕರಿಶಿಲೆಯಿಂದಲೇ ನಿರ್ಮಾಣಗೊಂಡಿದೆ. ಆಭಯ, ವರದ ಹಸ್ತಗಳಿಂದ ಕೂಡಿದ ಎರಡೂವರೆ ಅಡಿಯ ವಿಗ್ರಹವು ಭಕ್ತಿ ಶಾಂತಭಾವಗಳಿಂದ ಸಂತಸಗೊಳಿಸುತ್ತದೆ. ಮೂಲಗುಡಿಯಷ್ಟೇ ಪ್ರಾಧಾನ್ಯ ಪಡೆದ ಶ್ರೀದೇವಿಗೆ ನಿತ್ಯಾರ್ಚನೆ ವೇದೋಕ್ತವಾಗಿ ನಡೆಯುವುದು. ಮೂಲಗುಡಿಯ

ಮತ್ತು ಶ್ರೀದೇವಿಯ ಗುಡಿಯಲ್ಲಿನ ದ್ವಾರಗಳನ್ನು ಈಚೆಗೆ ಬಹು ಕಲಾತ್ಮಕವಾಗಿ ನಿರ್ಮಿಸಿ ಜೋಡಿಸಲಾಗಿದ್ದು, ಬಾಗಿಲುಗಳಲ್ಲಿ ಶ್ರೀಕೃಷ್ಣನ ವಿವಿಧ ಭಂಗಿಗಳು, ಚಕ್ರ, ಕಮಲಗಳನ್ನು ಕುಸುರಿ ಕಲೆಯ ಹಾಗೆ ಕೆತ್ತಲಾಗಿದೆ.[27]

**ಕಾವ್ಯಮಂಟಪ:** ಗುಡಿಯ ಪ್ರಾಕಾರಕ್ಕೆ ತಾಗಿ ನಿರ್ಮಿತವಾಗಿರುವ ಕಾವ್ಯಮಂಟಪ ಬಹು ವಿಶಾಲವಾಗಿದ್ದು ನಮ್ಮ ಸಾಂಸ್ಕೃತಿಕ ರಾಯಭಾರಿಯಂತೆ, ಪುರಾಣೋಕ್ತವಾದ ನಾನಾ ವಿಷಯಗಳಿಗೆ ಆಗರವಾಗಿದೆ. ಇಲ್ಲಿ ಶಿಲ್ಪಕಲೆಯ ಸೂಕ್ಷ್ಮತೆ ಇಲ್ಲವಾದರೂ ಸಾಹಿತ್ಯಕ ಮತ್ತು ಕಾವ್ಯಧಾರ ಹೇತುಕವೆನಿಸುವ ಪರಿವೇಶವನ್ನು ಕಾಣಬಹುದು. ಕುಮಾರವ್ಯಾಸನನ್ನು ಕುರಿತ ಒದ್ದೆ ಮಡಿಯ ಐತಿಹ್ಯದ ಕಥೆಯ ಹಾಗೆ ಲಕ್ಷ್ಮೀಶನೂ ಸ್ನಾನಮಾಡಿ ದೇವತಾರ್ಚನೆಯ ನಂತರ ಒದ್ದೆಯಲ್ಲೇ ಕಾವ್ಯಸೃಷ್ಟಿಗೆ ಕುಳಿತುಕೊಳ್ಳುತ್ತಿದ್ದ ಜಗುಲಿಯಲ್ಲಿಯೇ ಈಗಲೂ ಆತನ ಬಗೆಗಿನ ಉತ್ಸವ ಗೋಷ್ಠಿಗಳು ನಡೆಯುತ್ತಿವೆ. ಈ ಮಂಟಪ ಎರಡು ಭಾಗಗಳಲ್ಲಿದ್ದು, ಕೆಳಭಾಗ 30 ಅಡಿ ಎತ್ತರದ ಕಂಬಗಳಿಂದ ಕೂಡಿ ಮೂರು ಅಂಕಣಗಳನ್ನು ಹೊಂದಿದೆ. ಇದು ದೊಡ್ಡ ಹಜಾರದಂತಿದ್ದು ಕಾರ್ಯಕ್ರಮದಲ್ಲಿ ಕುಳಿತುಕೊಳ್ಳಲು ಉತ್ತಮ ಆಕಾರವೆನಿಸಿದೆ. ಮೇಲುಭಾಗದ ಮಂಟಪದಲ್ಲಿ ಕವಿ ನೆಲೆಸಿದ್ದರ ಕುರುಹಾಗಿ, ಕಾವ್ಯಸೃಷ್ಟಿಯ ನೆನಪಿಗಾಗಿ ಅಮೃತ ಶಿಲೆಯ ಜಗತಿಯನ್ನುಳ್ಳ ಸ್ಮಾರಕ ಮಾಡಿದ್ದು ಕವಿವಿಗ್ರಹವನ್ನು ಸ್ಥಾಪಿಸಿಲಾಗಿದೆ. ಸ್ಮಾರಕದ ಸುತ್ತಲಿನ ಕಂಬಗಳಲ್ಲಿ ಕಾವ್ಯಕ್ಕೆ ಸಂಬಂಧಿಸಿದ ಯಾಗಾಶ್ವದ ಚಿತ್ರಣ, ಶ್ರೀಕೃಷ್ಣ ಬಲರಾಮರ ಚಿತ್ರಣ, ಮತ್ಸ್ಯಯಂತ್ರ ಬೋಧನ, ಮತ್ತು ಶ್ರೀಕೃಷ್ಣನ ಅವತಾರದ ಅನೇಕ ಸಂದರ್ಭಗಳನ್ನು ಕೆತ್ತಲಾಗಿದೆ. ಕಂಬದ ನಾಲ್ಕುಭಾಗಗಳಲ್ಲಿ ಕವಿಯ ವೈಷ್ಣವ ಭಕ್ತಿಯನ್ನು ಬಿಂಬಿಸುವ ಚಿತ್ರಗಳು ಮನಸೆಳೆಯುತ್ತವೆ. ಇದಲ್ಲದೆ ವಿಶಿಷ್ಟವೆನಿಸುವ ಸರ್ವಧರ್ಮ ಸಮನ್ವಯತೆಯನ್ನು ಸಾರುವ ಶ್ರೀ ಶಂಕರ, ರಾಮಾನುಜ, ಕಬೀರ, ನಾನಕ ಮೊದಲಾದ ವಿಗ್ರಹಗಳನ್ನು ಕಡೆಯಲಾಗಿದೆ. ಕವಿಮಂಟಪ ಕವಿಯ ಬಗೆಗಿನ ವಿವಾದಕ್ಕೆ ಉತ್ತರ ನೀಡುವ ಬಾಹ್ಯ ಆಧಾರವಾಗಿದ್ದು ಕಾವ್ಯದ ಘಟನೆಗಳಿಗೆ ಪೂರಕವೆನಿಸಿವೆ. ಈಗಲೂ ಕವಿಜಯಂತಿ, ವಿಚಾರಗೋಷ್ಠಿ ಗಮಕ ಕಲಾಸ್ಪರ್ಧೆ, ಕಾವ್ಯವಾಚನಗಳು ಈ ಮಂಟಪದಲ್ಲೇ ನಡೆಯುತ್ತಿವೆ. ಸಂಶೋಧಕರನೇಕರು ಅಧ್ಯಯನ ನಡೆಸಲು ಬಂದರೆ ಹೆಚ್ಚು ಆಸಕ್ತಿವಹಿಸುವುದು ಕವಿಯಿಂದ ನಿರ್ಮಿತಿಗೊಂಡು ಸಂರಕ್ಷಿತ ಸ್ಮಾರಕವೆನಿಸಿರುವ ಈ ಮಂಟಪದ ಬಗ್ಗೆ ಇದು ಈಚೆಗೆ ಶಿಥಿಲಗೊಳ್ಳುತ್ತಿರುವುದರಿಂದ ದುರಸ್ಥಿಗಾಗಿ ಲಕ್ಷ್ಮೀಶನ ಅಭಿಮಾನಿಗಳು ಪ್ರಯತ್ನಪಡತೊಡಗಿದ್ದಾರೆ. ದೇವಾಲಯದ ಎದುರು ಮಾರ್ಗದಲ್ಲಿ ಲಕ್ಷ್ಮೀಶ ಕವಿಯ ಮನೆದಳವಿದ್ದು ಈಚೆಗೆ ಸರ್ಕಾರ ಅಲ್ಲಿ ಕವಿಸ್ಮಾರಕ ಮಂದಿರವನ್ನು ನಿರ್ಮಿಸಿಕೊಟ್ಟಿದೆ.

**ಪ್ರವಾಸಿಗರಿಗಿರುವ ಅನುಕೂಲಗಳು**

1. ಬಸ್ ಹಾಗೂ ರೈಲಿನ ಸೌಲಭ್ಯವಿದೆ.
2. ಬರುವ ಪ್ರವಾಸಿಗರಿಗೆ ಹೋಟೆಲ್ ವ್ಯವಸ್ಥೆ ಇದೆ.

**ಅನಾನುಕೂಲಗಳು**

ಪ್ರವಾಸಿಗರು ಉಳಿದುಕೊಳ್ಳಲು ವಸತಿ ಸೌಲಭ್ಯವಿಲ್ಲ.

## ಇನಾಮ್ ದತ್ತಾತ್ರೇಯ ಪೀಠ, ಬಾಬಾಬುಡನ್‌ಗಿರಿ

ಬಾಬಾಬುಡನ್‌ಗಿರಿ ಇನಾಮ್ ದತ್ತಾತ್ರೇಯ ಪೀಠ ಜಾಗರಾ ಹೋಬಳಿಯ ಒಂದು ಹಳ್ಳಿ. ಇದು ಬಾಬಾಬುಡನ್‌ಗಿರಿಯಲ್ಲಿದ್ದು ಚಿಕ್ಕಮಗಳೂರಿನಿಂದ ಉತ್ತರಕ್ಕೆ 30 ಕಿ.ಮೀ. ದೂರದಲ್ಲಿದೆ.

ಅತ್ತಿಗುಂಡಿ, ಈ ಸ್ಥಳವು ಇನಾಂ ದತ್ತಾತ್ರೇಯ ಪೀಠದಿಂದ ನೈರುತ್ಯಕ್ಕೆ 8 ಕಿ.ಮೀ. ದೂರದಲ್ಲಿರುವ ಕುಗ್ರಾಮವಾಗಿದೆ. ಬಾಬಾಬುಡನ್‌ಗಿರಿಯ ಪುರಾತನ ಹೆಸರು ಚಂದ್ರದ್ರೋಣ ಪರ್ವತ. ಬಾಬಾಬುಡನ್ ದಕ್ಷಿಣ ಗಿರಿಶ್ರೇಣಿಗಳ ಈ ಸ್ಥಳವನ್ನು ತನ್ನ ಆವಾಸಸ್ಥಾನವಾಗಿ ಆಯ್ಕೆ ಮಾಡಿಕೊಂಡಿದ್ದರೆಂದು ಹೇಳಲಾಗಿದೆ. ಆತನು ಯಮನ್‌ನಿಂದ ತಂದ ಕಾಫಿ ಬೀಜಗಳಿಂದ ಕಾಫಿ ಸಸಿಗಳನ್ನು ಈ ಸ್ಥಳದಲ್ಲಿ ಬೆಳೆಸಿದನೆಂದು ನಂಬಲಾಗಿದೆ. ಈ ಸ್ಥಳದಲ್ಲಿ ಲ್ಯಾಂಡ್‌ರೈಟ್ ಶಿಲೆಯ ಗುಹೆಗಳಿದ್ದು ಈ ಗುಹೆಗಳಲ್ಲಿ ದತ್ತಾತ್ರೇಯ ಸ್ವಾಮಿ, ಹಜರತ್ ದಾದಾ ಹಯಾತ್ ಮೀರ್ ಖಲಂದರ್ ಮುಂತಾದವರು ತಪಸ್ಸನ್ನು ಆಚರಿಸಿ ಈ ಗುಹೆಗಳನ್ನು ಪವಿತ್ರಗೊಳಿಸಿದರೆಂದು ನಂಬಲಾಗಿದೆ. ಈ ಸ್ಥಳಕ್ಕೆ ಹಿಂದೂಗಳು ಮತ್ತು ಮುಸ್ಲಿಮರು ಯಾತ್ರೆ ಕೈಗೊಳ್ಳುತ್ತಾರೆ. ಗುರು ದತ್ತಾತ್ರೇಯ ಪುನರ್‌ಜನ್ಮವು ಈ ಸ್ಥಳದಲ್ಲಿ ಆಗಿತ್ತು ಎಂದು ನಂಬಲಾಗಿದೆ.

ವಿಶಾಲವಾದ ಈ ಗುಹೆಯು ದಕ್ಷಿಣಾಭಿಮುಖವಾಗಿದ್ದು ವರಾಂಡ ಮತ್ತು ಮುಖ ಮಂಟಪವನ್ನೊಂದಿದೆ(ಚಿತ್ರಸಂಖ್ಯೆ62). ಮುಂಭಾಗವು 1525x4 ಮತ್ತು 58x197 ಮೀಟರ್‌ಗಳ ವಿಸ್ತೀರ್ಣ ಹೊಂದಿದೆ.[28] ಕಲ್ಲಿನ ಗೋಡೆಯಿಂದ ಎರಡು ಭಾಗಗಳಾಗಿ ಈ ಗುಹೆಯನ್ನು ವಿಭಾಗಿಸಲಾಗಿದೆ(ಚಿತ್ರಸಂಖ್ಯೆ63). 1.07x0.76 ಮೀಟರ್‌ಗಳ ಬಾಗಿಲು ಹಿಂದೂ ಕಲಾತ್ಮಕತೆಯನ್ನು ಹೊಂದಿದೆ. ಈ ಗುಹೆಯಲ್ಲಿ ಕೆಲವು ಮೆಟ್ಟಿಲುಗಳನ್ನಿಳಿದು ಬಲಭಾಗಕ್ಕೆ ತಿರುಗಿದರೆ ಚಿಕ್ಕ ಬಾಗಿಲನ್ನು ನೋಡಬಹುದು. ಈ ಬಾಗಿಲಲ್ಲಿ ಮತ್ತೊಂದು ಸಣ್ಣ ಬಾಗಿಲಿದ್ದು ವೃತ್ತಾಕಾರದಲ್ಲಿದೆ. ಬಾಗಿಲಿನ ಬಲಭಾಗದಲ್ಲಿ ಆಸನವಿದ್ದು ಅದು 1.07 ಮೀಟರ್‌ಗಳ

ಎತ್ತರದಲ್ಲಿದೆ. ಪಕ್ಕದಲ್ಲಿ ನೀರಿನ ಚಿಲುಮೆ ಇದ್ದು ಸನ್ಯಾಸಿಗಳ ಶುದ್ಧೀಕರಣ ಕ್ರಿಯೆಗಳಿಗೆ ನೀರೊದಗಿಸುತ್ತಿತ್ತಂತೆ. ಮಳೆಗಾಲದಲ್ಲಿ ಈ ನೀರಿನ ಚಿಲುಮೆಯು ತುಂಬಿ ಹರಿಯುತ್ತದೆ. ಸನ್ಯಾಸಿಯ ಅನುಯಾಯಿಗಳ ಅನುಕೂಲಕ್ಕಾಗಿ ಪಕ್ಕದಲ್ಲಿ ಸಭಾ ಮಂಟಪವಿದೆ. ಉತ್ತರದ ಗೋಡೆಯಲ್ಲಿ ಶಿಷ್ಯರಿಗಾಗಿ ನಾಲ್ಕು ಆಸನಗಳಿವೆ. ಉತ್ತರದಲ್ಲಿನ ಹೊರ ಗೋಡೆಯ ಮೇಲೆ ಪದ್ಮಾಕೃತಿಯ ಕಿಟಕಿಯಿದ್ದು ನಾಲ್ವರು ಶಿಷ್ಯರ ಗೋರಿಗಳನ್ನು ನೋಡಬಹುದು. ದಕ್ಷಿಣಕ್ಕೆ ಮತ್ತೊಂದು ಗುಹೆಯಿದ್ದು ಈ ಗುಹೆಯ ಮೂಲಕ ಹುಲಿಯು ಈ ಸ್ಥಳಕ್ಕೆ ಬರುತ್ತಿತ್ತೆಂದು ನಂಬಲಾಗಿದೆ. ಪಶ್ಚಿಮ ದಿಕ್ಕಿನಲ್ಲಿರುವ ಗುಹೆಯು 1.8 ಮೀಟರ್‌ಗಳ ಆಳವಾಗಿದೆ. ಎರಡು ಗುಹೆಗಳ ಮಧ್ಯೆ 4.5x3, 5x2.4 ಮೀಟರ್‌ಗಳ ಕಾರಿಡಾರ್‌ವೊಂದಿದ್ದು ಹಿಂದೂ ಶೈಲಿಯ ರೀತಿಯಲ್ಲಿದೆ.

ಈ ಗುಹೆಯ ಬಾಗಿಲಿನ ಮೇಲೆ ನೀಷೇಯು 1.22 ಮೀಟರ್‌ಗಳಿದ್ದು ಬೆಳ್ಳಿಯಿಂದ ಕೂಡಿದ ಶ್ರೀಗಂಧದ ಫ್ರೇಂನ್ನು ಹೊಂದಿದೆ. ಈ ಗುಹೆಯ ಎಡಭಾಗದಲ್ಲಿ ಕೆಲವೊಂದು ರಾಜಕುಮಾರರು ಬಂದು ಕುಳಿತುಕೊಳ್ಳಲು ಅನುವಾಗುವಂತೆ ಸಭಾಮಂಟಪವನ್ನು ರಚಿಸಲಾಗಿದೆ. ಇಲ್ಲಿ ಕಪ್ಪು ಬಾವಿಯಿದ್ದು 1.5 ಮೀಟರ್ ಇರುವ ಈ ಬಾವಿಯನ್ನು ಗಂಧದಬಾವಿ (ಶ್ರೀಗಂದದ ಸುವಾಸನೆಯ ಬಾವಿ) ಎಂದು ಕರೆಯಲಾಗಿದೆ. ಇದಕ್ಕೆ ಕಾರಣ ಹೊಂದಿದೆ. ಈ ಸ್ಥಳದಲ್ಲಿ ಮಕ್ಕಳಿಲ್ಲದ ಹೆಂಗಸರು ಯಾತ್ರೆ ಕೈಗಳ್ಳುತ್ತಾರೆ ಮತ್ತು ಹೊಸ ಬಳೆಗಳನ್ನು ತೊಟ್ಟು ಹಳೇ ಬಳೆಗಳನ್ನು ತೆಗೆಯುತ್ತಾರೆ.

ಈ ಗುಹೆಯ ಪ್ರವೇಶದ್ವಾರದಲ್ಲಿ ಬಹುದೊಡ್ಡವಾದ ಮುರಿದ ಕಪ್ಪುಕಲ್ಲಿನ ಬಂಡೆಯಿದೆ. ಇದರ ಹತ್ತಿರದಲ್ಲಿಯೇ ಶಾಸನವೊಂದಿದೆ. ಈ ಪರ್ಶಿಯನ್ ಶಾಸನವು ಕ್ರಿ.ಶ. 1005ಕ್ಕೆ ಸಂಬಂಧಪಟ್ಟದ್ದಾಗಿದೆ. ಅಲ್ಲಿಯ ಅಕ್ಷರಗಳಲ್ಲಿ 'ದತ್ತಾತ್ರೇಯ' ಮತ್ತು 'ದಾದ' ಎಂಬ ಇಂಗ್ಲಿಷ್ ಮತ್ತು ಕನ್ನಡ ಪದಗಳು ಇದ್ದು. ಈ ಶಾಸನ ಆಧುನಿಕ ಕಾಲಕ್ಕೆ ಸಂಬಂಧಪಟ್ಟದ್ದಾಗಿದೆ.

ಕ್ರಿ.ಶ. 1830ಕ್ಕೆ ಸಂಬಂಧಪಟ್ಟ ಶಾಸನವೊಂದು 'ಹಜರತ್ ಸಯ್ಯದ್ ಮಿರ್ ಷಾ ಖಾದ್ರಿ ಸಜ್ಜಾದಿ'ರವರ ಸಾವಿನ ಬಗ್ಗೆ ತಿಳಿಸುತ್ತದೆ. ಕ್ರಿ.ಶ. 1852ಕ್ಕೆ ಸಂಬಂಧಪಟ್ಟ ಮತ್ತೊಂದು ಶಾಸನವು ಭಂಡಾಖಾನ್‌ನ ಪ್ರವೇಶ ದ್ವಾರದಲ್ಲಿದ್ದು ಈ ಕಟ್ಟಡದ ನಿರ್ಮಾಣದ ಸ್ಮರಣಾರ್ಥದ ಬಗ್ಗೆ ರಚಿಸಲಾಗಿದೆ.[29]

ಬೆಳ್ಳಿಯ ಕೋಲುಗಳಲ್ಲಿ ಶಾಸನವು ಮೂರನೇ ಕೃಷ್ಣರಾಜ ಒಡೆಯರ್‌ರವರು ನೀಡಿರುವ ಉಡುಗೊರೆಯ ಬಗ್ಗೆ ತಿಳಿಸುತ್ತದೆ. ದಕ್ಷಿಣ ಮೇಲ್ಭಾಗದಲ್ಲಿ ಹಲವಾರು ಗೋರಿಗಳಿವೆ. ಮೆಟ್ಟಿಲುಗಳ

ಪಕ್ಕದಲ್ಲಿ ಸ್ಥಳೀಯರಾಗಿದ್ದ ಸಜ್ಜಾದ ನಿಶಾನ್ ವಾಸದ ಮನೆಗಳು ಮತ್ತು ವಂಶಪಾರಂಪರ್ಯವಾದ ಸಂಸ್ಥೆಯಿದೆ. ಕೆಳದಿಯ ರಾಣಿ ಚೆನ್ನಮ್ಮಾಜಿಯೂ ಈ ವಾಸದ ಕಟ್ಟಡಗಳನ್ನು ನಿರ್ಮಿಸಿದ್ದಳೆಂದು ನಂಬಲಾಗಿದೆ. ಈ ಸ್ಥಳದ ಎಲ್ಲಾ ಸಂಕೀರ್ಣಗಳನ್ನು ವೀಕ್ಷಿಸಿದ ಮೇಲೆ ಬೆಟ್ಟದ ಸಾಲುಗಳಲ್ಲಿ ಸುಂದರವಾದ ತಂಗುದಾಣವಿದೆ. ಇದನ್ನು ಮೈಸೂರಿನ ನಾಲ್ಕನೇ ಕೃಷ್ಣರಾಜ ಒಡೆಯರ್ ಕಟ್ಟಿಸಿದ್ದರೆಂದು ಹೇಳಲಾಗಿದೆ.

ಹದಿನೆಳನೇ ಶತಮಾನದಲ್ಲಿ ಆಳ್ವಿಕೆ ನಡೆಸಿದ ದೊರೆ ಆದಿಲ್‌ಷಾಹಿಯು ಸಯ್ಯದ್ ಖಾದ್ರಿ ಕುಟುಂಬದ ಮದುವೆಯಾದ ವ್ಯಕ್ತಿಯು ಈ ಸಂಸ್ಥೆಯ ಮುಖ್ಯಸ್ಥನಾಗುವ ಸಂಪ್ರದಾಯವನ್ನು ಜಾರಿಗೆ ತಂದನಂತೆ. ಆತನನ್ನು 'ಸಜ್ಜಾದ್ ನಿಕ್ಷೀನ್' ಎಂದು ಕರೆಯಲಾಗುತ್ತಿತ್ತು. ಈ ಪೀಠದ ಪೂಜೆಯನ್ನು ಮದುವೆಯಾಗದ ಬ್ರಹ್ಮಚಾರಿಯಾದ ಫಕೀರನು ಮಾಡಬೇಕಿತ್ತು. ತೆಂಗಿನಕಾಯಿ, ಎಲೆಗಳು, ಸಕ್ಕರೆ ಕಜ್ಜಾಯ, ಹೂವು ಇತ್ಯಾದಿಗಳನ್ನು ಮತ್ತು ಸುವಾಸನಭರಿತ ಊದುಬತ್ತಿಗಳನ್ನು ಪೂಜೆಯ ಸಮಯದಲ್ಲಿ ಅರ್ಪಿಸಲಾಗುವುದು. ಕೆಲವೊಂದು ಹಿಂದೂ ಹಾಗೂ ಮುಸ್ಲಿಂ ದೊರೆಗಳು ಈ ಸಂಸ್ಥೆಗೆ ಉದಾರವಾಗಿ ದತ್ತಿಯನ್ನು ನೀಡಿದ್ದಾರೆ. ಟಿಪ್ಪು ಸುಲ್ತಾನನು ಇಪ್ಪತ್ತು ಹಳ್ಳಿಗಳನ್ನು ಈ ಸಂಸ್ಥೆಗೆ ದಾನವಾಗಿ ನೀಡಿದ್ದನೆಂದು ಹೇಳಲಾಗಿದೆ. ಹಿಂದೂ ಪಂಚಾಂಗದನ್ವಯ ವಾರ್ಷಿಕ ಜಾತ್ರೆ ಅಥವಾ ಉರುಸ್ ಮೂರು ದಿನಗಳ ಕಾಲ ನಡೆಯುತ್ತದೆ. ಈ ಸಂದರ್ಭದಲ್ಲಿ ಹಿಂದೂಗಳು ಮತ್ತು ಮುಸ್ಲಿಮರು ಭಾಗವಹಿಸುತ್ತಾರೆ. ಈ ಹಳ್ಳಿಗೆ ಹೊಂದಿಕೊಂಡಂತೆ ಕಡಿಮೆ ಜನಸಂಖ್ಯೆ ಬಾಹುಳ್ಯವುಳ್ಳ ಹಳ್ಳಿಯಿದೆ. ಇಲ್ಲಿ ಕೇವಲ 25 ಜನರಿದ್ದಾರೆ. 1971ರಲ್ಲಿ ಸ್ಥಳವು 258 ಹೆಕ್ಟೇರ್ ಭೂಮಿಯನ್ನು ಹೊಂದಿತ್ತು. ಪಕ್ಕದಲ್ಲಿರುವ ಇನಾಂ ದತ್ತಾತ್ರೇಯ ಪೀಠದೊಂದಿಗೆ ಭಿನ್ನತೆಯನ್ನು ಗುರುತಿಸುವ ಉದ್ದೇಶದಿಂದ ಈ ಹಳ್ಳಿಯನ್ನು ಸರ್ಕಾರಿ ದತ್ತಾತ್ರೇಯ ಪೀಠವೆಂದು ಕರೆಯಲಾಗಿದೆ.

## ಅಂಗಡಿ ದೇವಾಲಯಗಳು

**ಪಾತಾಳರುದ್ರೇಶ್ವರ ದೇವಾಲಯ:** ಈ ದೇವಾಲಯವು ಮೂಡಗೆರೆಯಿಂದ ದಕ್ಷಿಣಕ್ಕೆ ಸು. 18 ಕಿ.ಮೀ. ದೂರದಲ್ಲಿದೆ. ಈ ಗ್ರಾಮವು ಹೊಯ್ಸಳ ರಾಜರ ಮೂಲಸ್ಥಾನ ಎಂದು ತಿಳಿಯಲಾಗಿದೆ. ಸಳನೆಂಬುವನು ಸುದತ್ತಾಚಾರ್ಯ ಗುರುಗಳ ಆದೇಶದಂತೆ ಆಶ್ರಮಕ್ಕೆ ಬಂದ ಹುಲಿಯೊಂದನ್ನು ಕೊಂದದ್ದು ಈ ಊರಿನಲ್ಲೇ ಎಂದು ತಿಳಿಯಲಾಗಿದೆ. ಗುರುಗಳು ಹುಲಿಯನ್ನು ಕೊಲ್ಲಲ್ಲು ಪೊಯ್ಸಳ ಎಂದು ಹೇಳಿದುದರಿಂದ ಸಳನ ವಂಶ ಹೊಯ್ಸಳ ವಂಶ ಎಂದು ಹೆಸರಾಯಿತು.[30] ಈ ಅಂಗಡಿಗೆ ಸೊಸೆವೂರು. ಶಶಕಪುರ ಎಂದೂ ಹೆಸರುಗಳಿದ್ದವು.[31] ಗ್ರಾಮದ

ಉತ್ತರಭಾಗದಲ್ಲಿರುವ ಒಂದು ಸಣ್ಣ ಗುಡ್ಡದ ಮೇಲೆ ಕೇಶವ, ಪಾತಾಳರುದ್ರೇಶ್ವರ, ಶಿವ ದೇವಾಲಯವಿದ್ದು ಇವುಗಳಿರುವ ಪಕ್ಕದ ಸಣ್ಣ ದಿಬ್ಬದಲ್ಲಿ ಬಸದಿಯಿದೆ. ಬಸದಿಯ ಪೂರ್ವಕ್ಕೆ ವಾಸಂತಿಕಾದೇವಿ ದೇವಾಲಯವಿದೆ.

ಪಾತಾಳರುದ್ರೇಶ್ವರ ದೇವಾಲಯವನ್ನು ಸ್ಥಳೀಯರು ವೀರಭದ್ರ ದೇವಾಲಯ ಎಂದೂ ಕರೆಯುತ್ತಾರೆ.[32] ಇದು ಊರಿನ ನೈರುತ್ಯ ಭಾಗದಲ್ಲಿದ್ದು ಕೇಶವ ದೇವಾಲಯ ಮತ್ತು ಶಿವ ದೇವಾಲಯಗಳ ನಡುವೆ ಇದೆ ದೇವಾಲಯವು ಪೂರ್ವ ಹೊಯ್ಸಳರ ಕಾಲದ ರಚನೆ.[33] ದೇವಾಲಯವು ಪೂರ್ವಾಭಿಮುಖವಾಗಿದ್ದು ಇದನ್ನು ಕೆಂಪು ಮರಳುಶಿಲೆಯಿಂದ ಕಟ್ಟಲಾಗಿದೆ. ಸು. 4 ಅಡಿ ಎತ್ತರದ ಅಧಿಷ್ಠಾನದ ಮೇಲಿದೆ ಅಧಿಷ್ಠಾನವು ಉಪಪೀಠದ ಮೇಲಿದ್ದು ಉಪಾನ, ಪದ್ಮ ಕಂಪ ಹಾಗೂ ತ್ರಿಪಟ್ಟ ಕುಮುದವನ್ನು ಹೊಂದಿದೆ. ದೇವಾಲಯವು ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪವನ್ನು ಹೊಂದಿದ್ದು ಪ್ರಸ್ತುತ ದೇವಾಲಯವು ಭಗ್ನವಾಗಿದೆ, ಈಗ ಕೇಂದ್ರ ಪುರಾತತ್ವ ಇಲಾಖೆ ಇದರ ಜೀರ್ಣೋದ್ಧಾರ ಕೆಲಸ ಕೈಗೊಂಡಿದೆ.

**ರಾಮೇಶ್ವರ ದೇವಾಲಯ:** ಅಂಗಡಿ ಗ್ರಾಮದ ನೈರುತ್ಯ ಭಾಗದಲ್ಲಿರುವ ಈ ದೇವಾಲಯವನ್ನು ಸ್ಥಳಿಯರು ಮಲ್ಲೇಶ್ವರ, ಮಲ್ಲಿಕಾರ್ಜುನ ಎಂದೂ ಕರೆಯುತ್ತಾರೆ. ಇದು ಪಾತಾಳೇಶ್ವರ ದೇವಾಲಯದ ಪಕ್ಕದಲ್ಲಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವನ್ನು ಕೆಂಪು ಮರಳುಶಿಲೆಯಿಂದ ಕಟ್ಟಲಾಗಿದೆ. ಸು. 4 ಅಡಿ ಎತ್ತರದ ಅಧಿಷ್ಠಾನದ ಮೇಲಿರುವ ಈ ದೇವಾಲಯ ಪೂರ್ವಹೊಯ್ಸಳರ ಕಾಲದಲ್ಲಿ ಕಟ್ಟಲಾಗಿದೆ.[34] ಅಧಿಷ್ಠಾನವು ಉಪಪೀಠದ ಮೇಲಿದ್ದು ಉಪಾನ. ಪದ್ಮ, ಕಂಪ, ಹಾಗೂ ತ್ರಿಪಟ್ಟ ಕುಮುದವನ್ನು ಹೊಂದಿದೆ. ದೇವಾಲಯವು ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪವನ್ನು ಹೊಂದಿದ್ದು ಈಗ ಗರ್ಭಗೃಹ ಮಾತ್ರ ಉಳಿದಿದ್ದು ಇನ್ನುಳಿದ ಭಾಗಗಳು ಭಗ್ನವಾಗಿವೆ ಪ್ರಸ್ತುತ ದೇವಾಲಯವನ್ನು ಕೇಂದ್ರ ಪುರಾತತ್ವ ಇಲಾಖೆಯು ಜೀರ್ಣೋದ್ಧಾರದ ಕೆಲಸ ಮಾಡುತ್ತಿದೆ.

**ಲೋಕೇಶ್ವರ ದೇವಾಲಯ:** ಚಿಕ್ಕಮಗಳೂರಿನಿಂದ ಆಗ್ನೇಯ ದಿಕ್ಕಿಗೆ ಸುಮಾರು 8 ಕಿ.ಮೀ. ದೂರದಲ್ಲಿದ್ದು ಪೂರ್ವಾಭಿಮುಖವಾಗಿದೆ. ಇದನ್ನು ಗ್ರಾನೈಟ್ ಶಿಲೆಯಿಂದ ನಿರ್ಮಿಸಲಾಗಿದೆ. ಈ ದೇವಾಲಯಕ್ಕೆ ಕ್ರಿ.ಶ. 1249ರಲ್ಲಿ ಹೊಯ್ಸಳ ದೊರೆ ಸೋಮೇಶ್ವರನ ಕಾಲದಲ್ಲಿ ದಾನ ನೀಡಿದ ಉಲ್ಲೇಖವಿದೆ. ಆದುದ್ದರಿಂದ ಈ ದೇವಾಲಯ ಕ್ರಿ.ಶ. 1249ಕ್ಕೂ ಪೂರ್ವದಲ್ಲಿಯೇ ರಚನೆಗೊಂಡಿರಬೇಕು. ಇದೊಂದು ದ್ವಿಕೂಟಾಚಲ ದೇವಾಲಯ ಎರಡು ಗರ್ಭಗೃಹಗಳು, ಸುಕನಾಸಿ ಮತ್ತು ನವರಂಗವನ್ನು ಹೊಂದಿದೆ.[35]

ಪಶ್ಚಿಮ ಗರ್ಭಗೃಹದಲ್ಲಿ 1 ಅಡಿ ಎತ್ತರದ ಪೀಠದ ಮೇಲೆ 2 ಅಡಿ ಎತ್ತರದ ಲಿಂಗವಿದೆ. ಉಳಿದಂತೆ ಯಾವುದೇ ಅಲಂಕರಣವಿಲ್ಲ. ಸುಕನಾಸಿಯ ಬಲಭಾಗದಲ್ಲಿ ನಂದಿ ಮೇಲೆ ಉಮಾಮಹೇಶ್ವರ, ನವಿಲಿನ ಮೇಲೆ ಕುಳಿತಿರುವ ತ್ರಿಮುಖ ಷಣ್ಮುಖ, ಸಪ್ತಾಶ್ವ ಪೀಠದ ಮೇಲೆ ಸೂರ್ಯನ ಶಿಲ್ಪವಿದೆ. ಎಲ್ಲಾ ಶಿಲ್ಪಗಳು ಹೊಯ್ಸಳರ ಕಾಲದ ಲಕ್ಷಣಗಳನ್ನು ಹೊಂದಿವೆ. ನವರಂಗದಲ್ಲಿ ನಾಲ್ಕು ಸ್ವತಂತ್ರ ಕಂಬಗಳಿದ್ದು 9 ಅಂಕಣವಿದೆ. ಮಧ್ಯದ ಅಂಕಣ ವಿಶಾಲವಾಗಿದೆ ಭುವನೇಶ್ವರಿಯು ಮೂಲೆ ಕಲ್ಲುಗಳಿಂದ ಅಲಂಕೃತಗೊಂಡಿದೆ.

**ಅಂಬಳೆ**

**ವೀರಭದ್ರ ದೇವಾಲಯ:** ವೀರಭದ್ರ ದೇವಾಲಯವು ಅಂಬಳೆ ಗ್ರಾಮದ ಮಧ್ಯಭಾಗದಲ್ಲಿದ್ದು ಪೂರ್ವಾಭಿಮುಖವಾಗಿದೆ ಇದೊಂದು ಚಿಕ್ಕ ದೇವಾಲಯ. ಈ ದೇವಾಲಯ ಸ್ವಲ್ಪ ಭಗ್ನವಾಗಿದೆ. ವಾಸ್ತುಶೈಲಿಯ ದೃಷ್ಠಿಯಲ್ಲಿ ನೋಡಿದಾಗ ವಿಶೇಷತೆ ಕಂಡುಬರುವುದಿಲ್ಲ. ಇಲ್ಲಿರುವ ಶಿಲ್ಪಗಳು ಹೊಯ್ಸಳರ ಕಾಲದವು.[36] ಇದನ್ನು ಗ್ರಾಮದವರು ಲೋಕೇಶ್ವರ ದೇವಾಲಯದಂತೆಯೇ ಜೀರ್ಣೋದ್ಧಾರಮಾಡಿದ್ದಾರೆ.

ಗರ್ಭಗೃಹದಲ್ಲಿ ನಂದಿ ಪೀಠದ ಮೇಲೆ 4 ಅಡಿ ಎತ್ತರದ ವೀರಭದ್ರನ ಶಿಲ್ಪವಿದೆ. ಇದಕ್ಕೆ ಸುಂದರವಾದ ಪ್ರಭಾವಳಿಯಿದೆ. ಸುಕನಾಸಿಯ ಎಡಭಾಗದಲ್ಲಿ ಪಾಣಿಪೀಠದ ಮೇಲೆ ಸುಂದರವಾದ ನಂದಿಯಿದೆ ಬಹುಶಃ ಈ ಪಾಣಿಪೀಠ ಬೇರೊಂದು ದೇವಾಲಯದ್ದಿರಬೇಕು. ನವರಂಗದಲ್ಲಿ ನಾಲ್ಕು ಸ್ವತಂತ್ರ ಕಂಬಗಳಿದ್ದು ನವರಂಗ 9 ಅಂಕಣವಿದ್ದು ಮಧ್ಯದ ಅಂಕಣ ವಿಶಾಲವಾಗಿದೆ. ಈ ಅಂಕಣದಲ್ಲಿ ಪದ್ಮಮಂಡಲ ವಿತಾನದ ಭುವನೇಶ್ವರಿಯಿದೆ. ಮುಂಭಾಗದಲ್ಲಿ 3 ಅಂಕಣದ ತೆರೆದ ಮುಖಮಂಟಪವಿದೆ ಇಲ್ಲಿಯ ಭುವನೇಶ್ವರಿಯಲ್ಲಿಯೂ ಪದ್ಮಮಂಡಲ ವಿತಾನವಿದೆ.

**ಓಂಕಾರೇಶ್ವರ ದೇವಾಲಯ:** ಅಂಬಳೆ ಗ್ರಾಮದ ಆಗ್ನೇಯ ದಿಕ್ಕಿನಲ್ಲಿರುವ ಪುಷ್ಕರಿಣಿಯ ದಡದಲ್ಲಿರುವ ಈ ದೇವಾಲಯ ಪೂರ್ವಾಭಿಮುಖವಾಗಿದೆ. ಸೋಪುಗಲ್ಲಿನಿಂದ ಕಟ್ಟಲಾಗಿರುವ ದೇವಾಲಯ ಗರ್ಭಗೃಹ ಹಾಗೂ ತೆರೆದ ಮುಖಮಂಟಪವನ್ನು ಹೊಂದಿದೆ. ಇದು ಚೌಕಾಕಾರವಾಗಿದ್ದು ಹೊಯ್ಸಳರ ಕಾಲದಲ್ಲಿ ಕಟ್ಟಲಾಗಿದೆ.[37] ಗರ್ಭಗೃಹದಲ್ಲಿ ಪಾಣಿಪೀಠದ ಮೇಲೆ 1 ಅಡಿ ಎತ್ತರದ ಲಿಂಗವಿದೆ. ಭುವನೇಶ್ವರಿಯಲ್ಲಿ ಪದ್ಮದ ಅಲಂಕರಣೆಯಿಂದೆ ಗರ್ಭಗೃಹದ ದ್ವಾರಬಂಧದಲ್ಲಿ ಶೈವದ್ವಾರಪಾಲಕರಿದ್ದು ದ್ವಾರಪಾಲಕರ ಪಕ್ಕದಲ್ಲಿ ಬೇತಾಳಗಳ ಚಿತ್ರಗಳಿವೆ.

ದ್ವಾರದ ಬದಿಯಲ್ಲಿ ಅಲಂಕಾರಕವಾದ ಏಳು ಪಟ್ಟಿಕೆಗಳಿವೆ ಮೇಲ್ಭಾಗದಲ್ಲಿ ಅಷ್ಟೇನು ಅಲಂಕರಣವಿಲ್ಲ.

**ಬ್ರಹ್ಮಸಮುದ್ರ:** ಕಡೂರಿನಿಂದ ಆಗ್ನೇಯಕ್ಕೆ ಸು. 15 ಕಿ.ಮೀ. ದೂರದಲ್ಲಿರುವ ಒಂದು ಸಣ್ಣ ಗ್ರಾಮವಾಗಿದೆ. ಇಲ್ಲಿ 15 ರಿಂದ 20 ಕುಟುಂಬಗಳು ಮಾತ್ರ ಇದ್ದು ಊರಿಗೆ ಹೊಂದಿಕೊಂಡಂತೆ ಒಂದು ದೊಡ್ಡ ಕೆರೆ ಇದೆ. ಇದು ಭಾಗಶಃ ಹೂಳು ತುಂಬಿಕೊಂಡಿದೆ. ಈ ಕೆರೆಯನ್ನು ಹಿಂದೆ ಬ್ರಹ್ಮಸಮುದ್ರ ಎಂದು ಕರೆಯಲಾಗುತ್ತಿತ್ತು. ಅದುದ್ದರಿಂದ ಈ ಊರಿಗೆ ಈ ಹೆಸರು ಬಂದಿದೆ. ಇದನ್ನು ಶಾಸನದಲ್ಲಿ ಲಕ್ಷ್ಮೀನಾರಾಯಣಪುರ ಎಂದು ಉಲ್ಲೇಖಿಸಲಾಗಿದ್ದು,[38] ಇಲ್ಲಿ ಎರಡು ದೇವಾಲಯಗಳಿವೆ. ಒಂದು ಶೈವ ಮತ್ತೊಂದು ವೈಷ್ಣವ ದೇವಾಲಯಗಳಾಗಿವೆ. ಈ ಗ್ರಾಮದಲ್ಲಿ ಸುಮಾರು 20 ಶಾಸನಗಳು ಕಂಡುಬಂದಿದ್ದು ಇವುಗಳಲ್ಲಿ ಹೊಯ್ಸಳರ ಕಾಲದ ಶಾಸನಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ಇದನ್ನು ಗಮನಿಸಿದರೆ ಈ ಪ್ರಾಂತ್ಯವು ಹೊಯ್ಸಳರ ಕಾಲದಲ್ಲಿ ಬಹಳ ಪ್ರಸಿದ್ಧಿ ಪಡೆದ ಸ್ಥಳವಾಗಿರಬೇಕು.

**ನಾಕನಾಥೇಶ್ವರ (ಶಿವ) ದೇವಾಲಯ:** ಬ್ರಹ್ಮಸಮುದ್ರದಲ್ಲಿ ಶಿವ ದೇವಾಲಯವೆಂದು ಕರೆಯಲಾಗುವ ಈ ದೇವಾಲಯವನ್ನು ಶಾಸನದಲ್ಲಿ ನಾಕನಾಥೇಶ್ವರ ಎಂದು ಉಲ್ಲೇಖಿಸಲಾಗಿದೆ. ದೇವಾಲಯವು ಪೂರ್ವಾಭಿಮುಖವಾಗಿದ್ದು ಊರಿನ ಪಶ್ಚಿಮ ಭಾಗದಲ್ಲಿದೆ ಇದನ್ನು ಹೊಯ್ಸಳ ರಾಜ ಒಂದನೆಯ ನರಸಿಂಹನ ಮಂತ್ರಿ ನಾಕಿಮಯ್ಯ ಎಂಬುವವನು ಕ್ರಿ.ಶ. 1169ರಲ್ಲಿ ನಿರ್ಮಿಸಿದನು.[39] ಈ ಮೂಲ ದೇವಾಲಯ ಸಂಪೂರ್ಣವಾಗಿ ಭಗ್ನಗೊಂಡಿದ್ದು ಇತ್ತೀಚಿಗೆ ಇಲ್ಲೊಂದು ಹೆಂಚಿನ ಮನೆಯನ್ನು ಕಟ್ಟಿದ್ದು ಅದರ ಗೋಡೆಯನ್ನು ಮಣ್ಣಿನಿಂದ ಕಟ್ಟಲಾಗಿದೆ. ಈಗ ಇಲ್ಲಿ ಮೂಲ ಗುಡಿಯು ಕಂಡುಬರುವುದಿಲ್ಲ ಹಾಗೂ ಈಗ ಕಟ್ಟಿರುವ ದೇವಾಲಯ ಎರಡು ಅಂಕಣವಿದೆ. ಗರ್ಭಗೃಹದಲ್ಲಿ ಪೀಠದ ಮೇಲೆ 1 ಅಡಿ ಎತ್ತರದ ಲಿಂಗವಿದ್ದು ಅನಂತರದ ಅಂಕಣದಲ್ಲಿ ಎರಡು ನಂದಿ ಶಿಲ್ಪವಿದ್ದು ಇವು ಸುಂದರ ಅಲಂಕರಣೆಯನ್ನು ಹೊಂದಿದ್ದು ಬಹಳ ಸುಂದರವಾಗಿ ಕೆತ್ತಿದ್ದಾರೆ.

**ಬಾಳೆಹೊನ್ನೂರಿನ ದೇವಾಲಯ:** ಬಾಳೆಹೊನ್ನೂರು ನರಸಿಂಹರಾಜಪುರದ ದಕ್ಷಿಣಕ್ಕೆ ಸು. 32 ಕಿ.ಮೀ. ದೂರದಲ್ಲಿ ಭದ್ರಾ ದಂಡೆಯ ಎಡಭಾಗದಲ್ಲಿರುವ ಊರು. ವಿಜಯನಗರ ರಾಜ ಸದಾಶಿವರಾಯನು ಈ ಪ್ರಾಂತ್ಯದಲ್ಲಿ ಆಡಳಿತ ನಡೆಸಿದನೆಂದು ತಿಳಿದುಬರುತ್ತದೆ.[40] (ತುಂಗಾ ಮತು ಭದ್ರಾ ನದಿಗಳು ಸಂಗಮವಾಗುವ ಜಾಗವನ್ನು ಬೊಮ್ಮನಕಲ್ಲು ಎಂದು ಕರೆಯುತ್ತಾರೆ ಇಲ್ಲಿ ಕೆಲವು ಜೈನ ಶಿಲ್ಪಗಳಿವೆ) ಬಾಳೆಹೊನ್ನೂರಿನ ಸಮೀಪದ ಬಾಳೆಹಳ್ಳಿಯಲ್ಲಿ ವೀರಶೈವ

ಪಂಚಾಚಾರ್ಯರಲ್ಲಿ ಪ್ರಮುಖರಾದ ರೇಣುಕಾಚಾರ್ಯರು ಸ್ಥಾಪಿಸಿದ ಮಠವಿದ್ದು ಇದನ್ನು ರಂಭಾಪುರಿ ಜಗದ್ಗುರುಗಳ ಮಠ ಎಂದೂ ಕರೆಯುತ್ತಾರೆ.[41] ಇಲ್ಲಿ ಒಂದು ವೀರಭದ್ರ ದೇವಾಲಯವಿದೆ.

**ವೀರಭದ್ರ ದೇವಾಲಯ:** ಬಾಳೆಹೊನ್ನೂರಿನ ರಂಭಾಪುರಿ ಮಠಕ್ಕೆ ಹೊಂದಿಕೊಂಡಂತಿರುವ ಉತ್ತರಾಭಿಮುಖವಾಗಿರುವ ಈ ದೇವಾಲಯವನ್ನು ಒರಟು ಗ್ರಾನೈಟ್ ಶಿಲೆಯಿಂದ ಕಟ್ಟಲಾಗಿದೆ. ದೇವಾಲಯವು ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪವನ್ನು ಹೊಂದಿದೆ. ಅರಗ ಪ್ರಾಂತ್ಯವನ್ನು ನೋಡಿಕೊಳ್ಳುತ್ತಿದ್ದ ಒಂದನೆಯ ಬುಕ್ಕರಾಯನ ಮಂತ್ರಿ ವಿರೂಪಣ್ಣ ಒಡೆಯರ್ ಎಂಬುವನು ಕ್ರಿ.ಶ. 1369ರಲ್ಲಿ ಈ ದೇವಾಲಯಕ್ಕೆ ದವಸ ಧಾನ್ಯಗಳನ್ನು ಭೂಮಿಯನ್ನೂ ವೀರೇಶ್ವರನಿಗೆ ದಾನ ನೀಡಿರುವುದರ ಬಗ್ಗೆ ಶಾಸನದಲ್ಲಿ ಉಲ್ಲೇಖವಿದೆ.[42] ಅದುದರಿಂದ ಈ ದೇವಾಲಯ ಕ್ರಿ.ಶ. 1369ಕ್ಕಿಂದ ಮುಂಚಿನ ರಚನೆಯಾಗಿದೆ. ದೇವಾಲಯದ ವಾಸ್ತುಶೈಲಿಯ ಲಕ್ಷಣಗಳನ್ನು ಗಮನಿಸಿ ಹೇಳುವುದಾದರೆ ಇದನ್ನು ವಿಜಯನಗರದ ಕಾಲದಲ್ಲಿ ಕಟ್ಟಲಾಗಿದೆ ಎಂದು ಹೇಳಬಹುದು. ಮಠದ ಮುಖ್ಯ ದ್ವಾರದ ಎರಡು ಬದಿಯಲ್ಲೂ ಹೊಯ್ಸಳರ ಕಾಲದ ಎರಡು ಅಲಂಕಾರಿಕ ಕಂಬಗಳಿವೆ ಸ್ಥಳಿಯರು ಈ ಕಂಬಗಳನ್ನು ಮೂಲ ದೇವಾಲಯದ್ದು ಎಂದು ಹೇಳುತ್ತಾರೆ. ಈ ದೇವಾಲಯವು ಹೊಯ್ಸಳರ ಕಾಲದಲ್ಲಿ ನಿರ್ಮಿತಗೊಂಡು ತದನಂತರದಲ್ಲಿ ಭಗ್ನವಾಗಿ ವಿಜಯನಗರದ ಕಾಲದಲ್ಲಿ ಪುನರುಜ್ಜೀವನಗೊಂಡಿರಬೇಕು.

ಗರ್ಭಗೃಹದಲ್ಲಿ 1.5 ಅಡಿ ಎತ್ತರದ ಪೀಠದ ಮೇಲೆ 3 ಅಡಿ ಎತ್ತರದ ವೀರಭದ್ರನ ಶಿಲ್ಪವಿದೆ ಇದು ಹೊಯ್ಸಳರ ಕಾಲದ್ದಾಗಿದೆ. ಗರ್ಭಗೃಹಕ್ಕೆ ಹೊಂದಿಕೊಂಡಂತೆ ಸುಕನಾಸಿಯಿದ್ದು ಇದರ ಲಲಾಟಬಿಂಬದಲ್ಲಿ ಶಿವನ ಶಿಲ್ಪವಿದೆ. ಸುಕನಾಸಿಯ ಎಡಭಾಗದಲ್ಲಿ ಒಂದು ಸಣ್ಣ ಗುಡಿಯಿದ್ದು ಇಲ್ಲಿ ಶ್ರೀ ಸಿದ್ದೇಶ್ವರರು ಶಂಕರಾಚಾರ್ಯರಿಗೆ ಲಿಂಗದಾನ ಮಾಡುತ್ತಿರುವ ಶಿಲ್ಪವಿದೆ. ಇದು 18–19ನೆಯ ಶತಮಾನದಾಗಿದ್ದು ಬಲಭಾಗದಲ್ಲಿರುವ ಗುಡಿಯಲ್ಲಿ ಸೋಮೇಶ್ವರ ಎಂದು ಕರೆಯುವ 1 ಅಡಿ ಎತ್ತರದ ಲಿಂಗವಿದೆ. ನವರಂಗವು 9 ಅಂಕಣವಿದ್ದು ಇಲ್ಲಿ 4 ಸ್ವತಂತ್ರ ಕಂಬಗಳಿವೆ. ಕಂಬಗಳ ಕೆಲವು ಭಾಗಗಳಲ್ಲಿ ನಂದಿ, ಗಣೇಶ, ಹಂಸ ಮುಂತಾದ ಉಬ್ಬು ಶಿಲ್ಪಗಳಿವೆ ಗಣೇಶ ಶಿಲ್ಪವನ್ನು ಉದ್ಭವ ಗಣೇಶ ಎಂದು ಕರೆಯುತ್ತಾರೆ.

## ಹಿರೇಮಗಳೂರಿನ ದೇವಾಲಯಗಳು

**ಅಮೃತೇಶ್ವರ ದೇವಾಲಯ**: ಈ ದೇವಾಲಯ ಯೂಪಸ್ತಂಭದ ಪಶ್ಚಿಮಭಾಗದಲ್ಲಿದೆ. ಚಿಕ್ಕ ದೇವಾಲಯವಾಗಿದ್ದು ಇದನ್ನು ಕ್ರಿ.ಶ. ಸು. 9ನೆಯ ಶತಮಾನದಲ್ಲಿ ಕಟ್ಟಲಾಗಿದೆ.[43] ದೇವಾಲಯದ ಭಿತ್ತಿ, ಶಿಖರ ಹಾಗೂ ಕೆಲವು ಭಾಗಗಳು ಭಗ್ನವಾಗಿದ್ದು ಇವುಗಳನ್ನು ಇತ್ತೀಚೆಗೆ ಇಟ್ಟಿಗೆ ಮತ್ತು ಗಾರೆಯನ್ನು ಬಳಸಿ ಪುನರುಜ್ಜೀವನಗೊಳಿಸಿದ್ದಾರೆ. ಚೌಕಾಕಾರದ ಗರ್ಭಗೃಹದಲ್ಲಿ ಎರಡೂವರೇ ಅಡಿ ಎತ್ತರವಿರುವ ಲಿಂಗವಿದೆ. ನವರಂಗದಲ್ಲಿ ನಾಲ್ಕು ಕಂಬಗಳಿದ್ದು ಒಂಭತ್ತು ಅಂಕಣಗಳನ್ನು ಹೊಂದಿದ್ದು ಈ ಕಂಬಗಳು ನೊಣವಿನಕೆರೆಯ ನೊಣಂಬೇಶ್ವರ ಮತ್ತು ಗಂಗೇಶ್ವರ ದೇವಾಲಯದ ಕಂಬಗಳ ಮಾದರಿಯಲ್ಲಿವೆ.[44] ನವರಂಗದ ಪ್ರತಿ ಅಂಕಣದಲ್ಲೂ ಒಂದೊಂದು ಭುವನೇಶ್ವರಿಯಿದ್ದು ಪ್ರತಿಯೊಂದರಲ್ಲೂ ಪದ್ಮದ ಅಲಂಕರಣವನ್ನು ಕಾಣಬಹುದು. ದ್ವಾರಬಂಧದ ಎರಡು ಬದಿಯಲ್ಲೂ ಅಲಂಕಾರ ಪಟ್ಟಿಕೆಗಳನ್ನು ಕೆತ್ತಲಾಗಿದೆ. ನವರಂಗದಲ್ಲಿ ಸು. 2 ಅಡಿ ಎತ್ತರದ ಸರಸ್ವತಿ ಮತ್ತು ನಂದಿ ಶಿಲ್ಪ, 3 ಅಡಿ ಎತ್ತರದ ವೀರಭದ್ರ ಶಿಲ್ಪ, 3 ಅಡಿ ಎತ್ತರದ ಮಹಿಷಮರ್ಧಿನಿಯ ಶಿಲ್ಪಗಳಿವೆ. ಇವುಗಳೆಲ್ಲವು ಬಿಡಿಶಿಲ್ಪಗಳಾಗಿದ್ದು ವೀರಭದ್ರ ಮತ್ತು ಮಹಿಷಮರ್ಧಿನಿ ಶಿಲ್ಪಗಳು ವಿಜಯನಗರ ಕಾಲದ್ದಾಗಿವೆ.[45] ದೇವಾಲಯದ ಸೋಪಾನದಲ್ಲಿ ಹಾರುವ ಹಂಸಗಳ ಚಿತ್ರವಿದೆ. ದೇವಾಲಯದ ಹೊರಭಾಗದಲ್ಲಿ ಸು. 4 ಅಡಿ ಎತ್ತರವಿರುವ ಭಗ್ನವಾಗಿರುವ ಮತ್ತೊಂದು ಮಹಿಷಮರ್ಧಿನಿಯ ಶಿಲ್ಪವಿದೆ. ಇನ್ನುಳಿದಂತೆ ದೇವಾಲಯದ ಕೆಲವು ಭಾಗಗಳನ್ನು ನವೀಕರಿಸಲಾಗಿದೆ.

**ಮಲ್ಲಿಕಾರ್ಜುನ ದೇವಾಲಯ:** ಈ ದೇವಾಲಯ ಹಿರೇಮಗಳೂರಿನ ಅಮೃತೇಶ್ವರ ದೇವಾಲಯದ ಬಲಭಾಗದಲ್ಲಿದೆ. ಇಲ್ಲಿರುವ ಲಿಂಗ ಮತ್ತು ನಂದಿ ಶಿಲ್ಪ ಹೊಯ್ಸಳ ಲಕ್ಷಣಗಳನ್ನು ಹೊಂದಿದೆ. ಮೂಲ ದೇವಾಲಯ ಭಗ್ನಗೊಂಡಿದ್ದು ಒಂದು ಅಂಕಣದ ಹೆಂಚಿನ ಮನೆಯಲ್ಲಿ ಲಿಂಗವನ್ನು ಇಟ್ಟು ಪೂಜೆ ಸಲ್ಲಿಸುತ್ತಿದ್ದಾರೆ. ಇಲ್ಲಿ ಸು. 4 ಅಡಿ ಎತ್ತರದ ಪಾಣಿಪೀಠದ ಮೇಲೆ ಲಿಂಗವಿದೆ. ಇದರ ಎದುರು ಭಾಗದ ಹೊರ ಆವರಣದಲ್ಲಿ ನಂದಿ ಶಿಲ್ಪವಿದೆ. ಇದು ಹೆಚ್ಚಿನ ಅಲಂಕರಣವಿಲ್ಲದ ಶಿಲ್ಪವಾಗಿದ್ದು ವಿಭಿನ್ನವಾಗಿದೆ. ಕಿಗ್ಗದ ಋಷ್ಯಶೃಂಗೇಶ್ವರ, ಚನ್ನಪಟ್ಟಣದ ನೀಲಕಂಠೇಶ್ವರ ದೇವಾಲಯದ ನಂದಿ ಶಿಲ್ಪಗಳನ್ನು ಇದು ಹೋಲುತ್ತದೆ.

**ಪಾತಾಳೇಶ್ವರ ದೇವಾಲಯ:** ಈ ದೇವಾಲಯವು ಹಿರೇಮಗಳೂರಿನಲ್ಲಿರುವ ಸಿದ್ಧಪುಷ್ಕರಣಿಯ ದಡದಲ್ಲಿದ್ದು ಪೂರ್ವಾಭಿಮುಖವಾಗಿದೆ. ಮೂಲ ದೇವಾಲಯ ಸಂಪೂರ್ಣವಾಗಿ ಭಗ್ನವಾಗಿದ್ದು

ಇದನ್ನು ಇತ್ತೀಚೆಗೆ ಜೀರ್ಣೋದ್ಧಾರ ಮಾಡಲಾಗಿದೆ. ಇಲ್ಲಿ ಸು. 2 ಅಡಿ ಎತ್ತರದ ಪೀಠದ ಮೇಲೆ ಲಿಂಗವಿದೆ. ಇದರ ಮುಂಭಾಗದಲ್ಲಿ ಎರಡು ನಂದಿ ಶಿಲ್ಪವಿದೆ.

**ಶಿವ ದೇವಾಲಯ:** ಈ ದೇವಾಲಯವು ಸಿದ್ಧಪುಷ್ಕರಣಿಯ ಬಲಭಾಗದಲ್ಲಿದ್ದು ಇದನ್ನು ಸ್ಥಳೀಯರು ಮಲ್ಲಿಕಾರ್ಜುನಸ್ವಾಮಿ ಎಂದೂ ಕರೆಯುತ್ತಾರೆ. ಇಲ್ಲಿಯ ಮೂಲ ದೇವಾಲಯ ಸಂಪೂರ್ಣವಾಗಿ ಭಗ್ನವಾಗಿದ್ದು ಇತ್ತೀಚೆಗೆ ಪುನರ್ ನಿರ್ಮಾಣ ಮಾಡಲಾಗಿದೆ. ಗರ್ಭಗುಡಿಯಲ್ಲಿ ಸು. 2 ಅಡಿ ಎತ್ತರದ ಪೀಠದೊಂದಿಗೆ ಲಿಂಗವಿದ್ದು ಮುಂಭಾಗದಲ್ಲಿ ನಂದಿ ಶಿಲ್ಪವಿದೆ. ಈ ದೇವಾಲಯದ ಹಿಂಭಾಗದಲ್ಲಿ ಭಗ್ನವಾಗಿರುವ ಸು. 3 ಅಡಿ ಎತ್ತರದ ಮಹಿಷಮರ್ಧಿನಿ ಶಿಲ್ಪವಿದೆ. ಇದೊಂದು ಸಾಧಾರಣ ಶಿಲ್ಪವಾಗಿದ್ದು ದ್ವಿಬಾಹುಗಳಿಂದ ಕೂಡಿದ್ದು ಬಹಳ ಮೋಹಕವಾಗಿದೆ. ಈ ಶಿಲ್ಪ ಲಕ್ಷಣಗಳನ್ನು ಗಮನಿಸಿದರೆ ಪೂರ್ವಹೊಯ್ಸಳರ ಕಾಲದ ಶಿಲ್ಪವೆಂದು ಹೇಳಬಹುದು.

ಹಿರೇಮಗಳೂರಿಗೆ ಹೊಂದಿಕೊಂಡಂತೆ ಲಕ್ಷ್ಮೀಪುರವೆಂಬ ಗ್ರಾಮವಿದೆ. ಇಲ್ಲಿ ಗೌರವೇಶ್ವರ ದೇವಾಲಯವಿದ್ದು ಇದನ್ನು ಇತ್ತೀಚೆಗೆ ಕಟ್ಟಲಾಗಿದೆ. ಇಲ್ಲಿ ಸು. 1 ಅಡಿ ಪೀಠದ ಮೇಲೆ ಅರ್ಧ ಅಡಿ ಎತ್ತರದ ಲಿಂಗವಿದೆ. ಇದನ್ನು ಹಿರೇಮಗಳೂರಿನಿಂದ ತಂದು ಇಲ್ಲಿ ಪ್ರತಿಷ್ಠಾಪಿಸಲಾಗಿದೆ ಎಂಬ ಪ್ರತೀತಿಯಿದೆ. ಈ ಎಲ್ಲಾ ದೇವಾಲಯಗಳ ಕಾಲಘಟ್ಟವನ್ನು ನಿರ್ಧರಿಸುವುದು ಬಹಳ ಕಷ್ಟದ ಕೆಲಸವಾಗಿದೆ. ಏಕೆಂದರೆ ತೀರ ಅಗತ್ಯವಾದ ಶಾಸನಾಧಾರಗಳಾಗಲಿ ಅಥವಾ ಇತರೆ ದಾಖಲೆಗಳಾಗಲೀ ಹಾಗೂ ದೇವಾಲಯದ ಮೂಲ ವಾಸ್ತುವೂ ದೊರೆಯದೇ ಇರುವುದರಿಂದ ಕಾಲನಿರ್ಣಯ ಮಾಡುವುದು ಕಷ್ಟದ ಕೆಲಸವಾಗಿದೆ. ಲಿಂಗಗಳು, ನಂದಿ ಶಿಲ್ಪಗಳು ಹಾಗೂ ಇನ್ನಿತರ ಶಿಲ್ಪಗಳ ಲಕ್ಷಣಾಧಾರಗಳ ಮೇಲೆ ಇವುಗಳನ್ನು ಕ್ರಿ.ಶ. 10ನೆಯ ಶತಮಾನದಿಂದ 12ನೆಯ ಶತಮಾನದ ನಡುವೆ ನಿರ್ಮಾಣವಾಗಿರಬಹುದೆಂದು ಹೇಳಬಹುದು. ಆದರೆ ಮಹಿಷಮರ್ಧಿನಿ ಶಿಲ್ಪ, ಮಲ್ಲಿಕಾರ್ಜುನ ದೇವಾಲಯದ ಲಿಂಗ ಹಾಗೂ ನಂದಿ ಶಿಲ್ಪಗಳು ಹೊಯ್ಸಳರ ಕಾಲಕ್ಕಿಂತ ಪೂರ್ವಕಾಲದದ್ದೆಂದು ಹೇಳಬಹುದು.

**ಪರಶುರಾಮ ದೇವಾಲಯ:** ಈ ದೇವಾಲಯ ಹಿರೇಮಗಳೂರಿನ ಮಧ್ಯದಲ್ಲಿ ಎತ್ತರದ ಸ್ಥಳದಲ್ಲಿದ್ದು ಪೂರ್ವಾಭಿಮುಖವಾಗಿದ್ದು ಭಗ್ನವಾಗಿರುವ ಸ್ವಲ್ಪಭಾಗವನ್ನು ಜೀರ್ಣೋದ್ಧಾರ ಮಾಡಲಾಗಿದೆ. ಈ ದೇವಾಲಯವು ಗರ್ಭಗೃಹ, ಸುಕನಾಸಿ, ನವರಂಗವನ್ನು ಹೊಂದಿದೆ. ಗರ್ಭಗೃಹದಲ್ಲಿ 2 ಅಡಿ ಎತ್ತರದ ಪೀಠದ ಮೇಲೆ 2.5 ಅಡಿ ಎತ್ತರದ ಚೌಕಾಕಾರದ ಲಿಂಗವಿದೆ ಇದರ ಮೇಲ್ಭಾಗದಲ್ಲಿ ಸು. 9 ಇಂಚಿನಷ್ಟು ಮುಂಚಾಚಿದೆ. ಇದರ ಮುಂಭಾಗ ಸುತ್ತಿಗೆ ಅಥವಾ ಕೊಡಲಿಯ ಆಕಾರದಲ್ಲಿದ್ದರೂ ಚೌಕಾಕಾರವಾಗಿರುವುದು ವಿಶೇಷವಾಗಿದೆ. ಒಳಗಿನ ಲಿಂಗದ

ರುದ್ರ ಭಾಗದಲ್ಲಿ ಚೌಕಾಕಾರದ ಕಲ್ಲು ಇರುವುದರಿಂದ ಇದನ್ನು ಪರಶುರಾಮ ಲಿಂಗವೆಂದು ಕರೆಯುತ್ತಾರೆ. ಗೋವಾದ ಅರವೇಲಂನಲ್ಲಿ ಇಂತಹ ಲಿಂಗವನ್ನು ಕಾಣುತ್ತೇವೆ.[46] ಕರ್ನಾಟಕದಲ್ಲಿ ಪರಶುರಾಮನಿಗೆ ಪ್ರತ್ಯೇಕ ದೇವಾಲಯಗಳಿರುವುದು ಬಹಳ ವಿರಳವಾಗಿದ್ದು ಸಾಮಾನ್ಯವಾಗಿ ವಿಷ್ಣು ಶಿಲ್ಪದ ಪ್ರಭಾವಳಿಯಲ್ಲಿ ತೋರಿಸಲಾಗಿರುತ್ತದೆ. ದಶಾವತಾರ ಪಟ್ಟಿಕೆಯಲ್ಲಿ ಪರಶುವನ್ನು ಹಿಡಿದ ಒಬ್ಬ ಋಷಿಯ ಶಿಲ್ಪವನ್ನು ಬಿಡಿಸಲಾಗಿರುತ್ತದೆ. ಅಲ್ಲದೆ ಹೊಯ್ಸಳರ ಕೆಲವು ದೇವಾಲಯಗಳಲ್ಲಿರುವ ಭಿತ್ತಿ ಶಿಲ್ಪಗಳಲ್ಲಿ ಪರಶುರಾಮನನ್ನು ಚಿತ್ರಿಸಲಾಗಿದೆ.

ಗರ್ಭಗೃಹದ ದ್ವಾರಬಂಧದಲ್ಲಿ ಯಾವುದೇ ಅಲಂಕರಣವಿರುವುದಿಲ್ಲ ಹಾಗೂ ನವರಂಗದಲ್ಲಿ ಸಹ ಯಾವುದೇ ಅಲಂಕರಣ ಕಂಡುಬರುವುದಿಲ್ಲ. ಮುಖಮಂಟಪದಲ್ಲಿ 2 ಸ್ವತಂತ್ರ ಕಂಬಗಳಿವೆ ಇಲ್ಲಿಯ ಮೇಲ್ಭಾವಣಿಯ ಚಪ್ಪಡಿ ಕಲ್ಲಿನಲ್ಲಿ ಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವ ಇಬ್ಬರು ವ್ಯಕ್ತಿಗಳು ಪಕ್ಕದಲ್ಲಿ ನಂದಿ, ಸೂರ್ಯ, ಚಂದ್ರರನ್ನು ಶಿಲ್ಪಿಸಿದೆ. ಇದರ ಸುತ್ತಲೂ ಕ್ರಿ.ಶ. 8–9ನೆಯ ಶತಮಾನದ ಗಂಗರ ಕಾಲದ ಶಾಸನವಿದೆ. ದೇವಾಲಯದ ಗರ್ಭಗೃಹ ಮತ್ತು ಸುಕನಾಸಿಯ ಹೊರಭಿತ್ತಿಯನ್ನು ಚಪ್ಪಡಿ ಕಲ್ಲಿನಲ್ಲಿ ನಿರ್ಮಿಸಿದ್ದು ಮುಖಮಂಟಪದ ಭಿತ್ತಿಯನ್ನು ಇಟ್ಟಿಗೆ ಮತ್ತು ಗಾರೆಯಿಂದ ಇತ್ತೀಚೆಗೆ ನಿರ್ಮಿಸಿದ್ದಾರೆ. ಇಲ್ಲಿ ಯಾವುದೇ ಅಲಂಕರಣವಿರುವುದಿಲ್ಲ. ಗರ್ಭಗೃಹದ ಮೇಲೆ ಶಿಖರವಿದ್ದು ಇದನ್ನು ಇತ್ತೀಚೆಗೆ ನಿರ್ಮಿಸಲಾಗಿದೆ. ಈ ದೇವಾಲಯದ ವಾಸ್ತುವನ್ನು ಗಮನಿಸಿದಾಗ ಇದು ಕ್ರಿ.ಶ. 10–11ನೆಯ ಶತಮಾನದಲ್ಲಿ ಕಟ್ಟಿರಬಹುದೆಂದು ಊಹಿಸಬಹುದು.

**ಯೂಪಸ್ತಂಭ:** ಹಿರೇಮಗಳೂರಿನ ಈಶ್ವರ ದೇವಾಲಯದ ಮುಂಭಾಗದಲ್ಲಿ ಸು. 20 ಅಡಿ ಎತ್ತರದ ಒಂದು ಯೂಪಸ್ತಂಭವಿದೆ. ಪೌರಾಣಿಕ ಕಥಾನಾಯಕನಾದ ಜನಮೇಜಯನು ಸರ್ಪಯಾಗವನ್ನು ಮಾಡಿದಾಗ ಇದನ್ನು ನಿಲ್ಲಿಸಿದನೆಂಬ ಐತಿಹ್ಯವಿದೆ. ಪೂರ್ವ ಮತ್ತು ಪಶ್ಚಿಮ ಭಾಗದಲ್ಲಿರುವ ಮೊಗ್ಗುಗಳು ಹಾಗೂ ಸ್ತಂಭದ ಮೂಲೆಯನ್ನು ನೋಡಿದರೆ ಇದು ತ್ರಿಶೂಲದ ರೀತಿ ಕಾಣುತ್ತದೆ ಹಾಗೂ ಇದಕ್ಕೆ ಎತ್ತರದ ಘನಾಕೃತಿಯ ಪೀಠವಿದೆ. ಅದರ ಮೇಲೆ ಅಷ್ಟಕೋನಾಕೃತಿಯ ಅಲಂಕೃತ ಭಾಗವಿದೆ. ಅನಂತರ ಮತ್ತೊಂದು ಘನಾಕೃತಿಯ ಭಾಗವಿದ್ದು ಅದರ ಮೇಲ್ಭಾಗದಲ್ಲಿ ಚೌಕಾಕಾರದ ಬೋದಿಗೆಯಿದ್ದು ಅದರ ಮೇಲೆ ಕಮಲದ ಮೊಗ್ಗಿನ ಅಲಂಕಾರವಿದೆ. ಇದರ ಪೂರ್ವ ಮತ್ತು ಪಶ್ಚಿಮ ಭಾಗಗಳಲ್ಲಿ ರೇಖೆಗಳಿದ್ದು ಇವು ತ್ರಿಶೂಲವನ್ನು ಬಿಂಬಿಸುವಂತಿವೆ. ಸ್ತಂಭದ ಪೂರ್ವ ಮತ್ತು ಪಶ್ಚಿಮದಲ್ಲಿ ಶಾಸನವಿದ್ದು ಪಶ್ಚಿಮ ಭಾಗದಲ್ಲಿ ಕೆಲವೇ ಅಕ್ಷರಗಳಿದ್ದು ಉಳಿದ ಅಕ್ಷರಗಳು ನಾಶವಾಗಿವೆ. ಈ ಅಕ್ಷರಗಳು ಎರಡು ಇಂಚು ಅಗಲ

ಮತ್ತು ಉದ್ದವನ್ನು ಹೊಂದಿವೆ. ಇದರಲ್ಲಿ 'ಅಶ್ವಯೂಪ' ಎಂಬ ಪದ ಮಾತ್ರ ಸಂಪೂರ್ಣವಾಗಿ ಉಳಿದಿದೆ.[47] ಪ್ರಾಚೀನ ಕಾಲದಿಂದಲೂ ಯಜ್ಞ ಯಾಗಾದಿಗಳನ್ನು ಮಾಡುವ ಪದ್ಧತಿ ಇತ್ತೆಂದು ಇದರಿಂದ ತಿಳಿಯುತ್ತದೆ. ಡಾ.ಎಂ.ಚಿದಾನಂದಮೂರ್ತಿಯವರು ಈ ಬಗ್ಗೆ ಚರ್ಚಿಸುತ್ತ 'ಅಶ್ವಯೂಪ' ಎಂಬ ಪದಕ್ಕೆ ಅರ್ಥವನ್ನು ಹೇಳುವ ಪ್ರಯತ್ನ ಮಾಡಿದ್ದಾರೆ. ಕ್ರಿಸ್ತಪೂರ್ವದಲ್ಲಿಯೇ ಇಲ್ಲಿ ಯಾಗಗಳು, ಅಶ್ವಬಲಿಗಳು ನಡೆಯುತ್ತಿದ್ದುವೆಂಬುದು ಸೂಚಿತವಾಗುತ್ತದೆ.[48] ಪೂರ್ವ ಭಾಗದಲ್ಲಿರುವ ಶಾಸನದಲ್ಲಿ ಅಣ್ಣಯ್ಯ, ಬಲಿ, ಲಕಿಗ ಎಂಬ ಪದಗಳಿವೆ.[49] ಅಣ್ಣಯ್ಯ ಎನ್ನುವವನು ಕೊರೆಯಿಸಿರಬೇಕು. 'ಬಲಿ' ಎನ್ನುವ ಮಾತನ್ನು ಗಮನಿಸಿದರೆ ಅವನು ಯಾವುದೋ ಯಾಗವನ್ನು ಮಾಡಿಸಿ ಬಲಿಯನ್ನು ಕೊಟ್ಟನೆಂದು ಊಹಿಸಬೇಕಾಗುತ್ತದೆ. ಲಕಿಗ ಎಂಬಾತನು ಈ ಶಾಸನವನ್ನು ಕೊರೆಸಿದನು. ಬಹುಶಃ ನೊಳಂಬರಾಜ ಅಣ್ಣಿಗ ಅಥವಾ ವೀರನೊಳಂಬನು ಜೀರ್ಣವಾಗಿ ಹೋಗಿದ್ದ ಆ ಸ್ತಂಭವನ್ನು ಮತ್ತೆ ನಡೆಸಿರಬೇಕು ಎಂದು ವಿದ್ವಾಂಸರು ಊಹಿಸುತ್ತಾರೆ. ಪ್ರಾಚೀನ ಕರ್ನಾಟಕದಲ್ಲಿ ಯಜ್ಞಗಳನ್ನು ಮಾಡುವಾಗ ಬಲಿಯನ್ನು ಕೊಡುತ್ತಿದ್ದರೆಂಬುದು ಇದರಿಂದ ಸೂಚಿತವಾಗುತ್ತದೆ.[50] ಇಲ್ಲಿನ ಲಿಪಿಯ ಸ್ವರೂಪವನ್ನು ಗಮನಿಸಿದರೆ ಕ್ರಿ.ಶ. 2 ಮತ್ತು 3ನೆಯ ಶತಮಾನದ ಕಾಲದ ಅಕ್ಷರಗಳಂತೆ ಕಂಡು ಬರುತ್ತದೆ. ಅಂದರೆ ಈ ಕಲ್ಲನ್ನು ಕ್ರಿ.ಶ. 2–3ನೆಯ ಶತಮಾನದಲ್ಲಿ ಬರವಣಿಗೆಗೆ ಬಳಸಿ ಮತ್ತೆ ಕ್ರಿ.ಶ. 10ನೆಯ ಶತಮಾನದಲ್ಲಿ ಬಳಸಲಾಗಿದೆ.[51] ಆದರೆ ಮೊದಲು ಬರೆದಿರುವ ಅಕ್ಷರಗಳು ಯಾವ ಕಾಲದವು ಎಂಬುದರ ನಿಖರತೆಯ ಬಗ್ಗೆ ವಿದ್ವಾಂಸರಲ್ಲಿ ಒಮ್ಮತಾಭಿಪ್ರಾಯವಿಲ್ಲ. ಪೂರ್ವ ಭಾಗದಲ್ಲಿರುವ ಶಾಸನ ಮಾತ್ರ ಕ್ರಿ.ಶ. 10ನೆಯ ಶತಮಾನದ ಕಾಲದ ಅಕ್ಷರ ಲಿಪಿಯನ್ನು ಹೋಲುತ್ತದೆ.

**ಕೋದಂಡರಾಮ ದೇವಾಲಯ:** ಕರ್ನಾಟಕದಲ್ಲಿ ರಾಮನಿಗಾಗಿ ಪ್ರತ್ಯೇಕವಾಗಿ ದೇವಾಲಯಗಳನ್ನು ಕಟ್ಟಿರುವುದರ ಉಲ್ಲೇಖಗಳು ದೊರೆಯುವುದು ಬಹಳ ಕಡಿಮೆ ವಿಷ್ಣುವಿನ ದಶಾವತಾರಗಳಲ್ಲಿ ರಾಮಾವತಾರವನ್ನು ನಿರ್ದೇಶಿಸುವ ಶಿಲ್ಪ ಸು. ಕ್ರಿ.ಶ. 12ನೆಯ ಶತಮಾನದವರೆಗೆ ದೇವಾಲಯಗಳಲ್ಲಾಗಲೀ ದೇವಾಲಯದ ಸ್ತಂಭಗಳಲ್ಲಾಗಲೀ ಕಂಡುಬಂದಿಲ್ಲ. ರಾಮಾಯಣ ಕ್ರಿ.ಶ. 5–6ನೆಯ ಶತಮಾನದಿಂದಲೇ ಜನಪ್ರಿಯವಾಗಿದ್ದರೂ ನರಸಿಂಹ, ವರಾಹ ಮೊದಲಾದ ದೇವರುಗಳಿದ್ದಂತೆ ಕ್ರಿ.ಶ. 13ನೇಯ ಶತಮಾನದವರೆಗೆ ಶ್ರೀರಾಮನಿಗೆ ಪ್ರತ್ಯೇಕ ದೇವಾಲಯವಿದ್ದ ಗುರುತುಗಳಿಲ್ಲ. ಆದುದರಿಂದ ಕರ್ನಾಟಕದಲ್ಲಿ ಇದು ಅತೀ ಪ್ರಾಚೀನ ಶ್ರೀರಾಮನ ದೇವಾಲಯವಾಗಿದೆ. ಇಲ್ಲಿ ಸೀತಾ ಲಕ್ಷ್ಮಣಸಹಿತ ಕೋದಂಡರಾಮನಿದ್ದಾನೆ(ಚಿತ್ರಸಂಖ್ಯೆ64).[52] ಬಿ.ಷೇಕ್‌ಅಲಿ ಅವರು ಈ ದೇವಾಲಯವನ್ನು ಗಂಗರ ಕಾಲದಲ್ಲಿ ನಿರ್ಮಿತವಾದಂತಹ ವಾಸ್ತುಕೃತಿ

ಎಂದು ಉಲ್ಲೇಖಿಸಿದ್ದಾರೆ.[53] ಆದರೆ ಪ್ರಸ್ತುತ ದೇವಾಲಯದ ವಾಸ್ತು ರಚನೆ ಮತ್ತು ಶಿಲ್ಪದ ಲಕ್ಷಣಗಳನ್ನು ಗಮನಿಸಿದರೆ ಇದು ಹೊಯ್ಸಳ ಕಾಲದ ರಚನೆ ಆದರೆ ನವರಂಗದಲ್ಲಿರುವ ಕಂಬಗಳು ಬಹುಶಃ ಪೂರ್ವ ಹೊಯ್ಸಳ ಕಾಲದ ಲಕ್ಷಣಗಳನ್ನು ಹೊಂದಿವೆ.[54] ಆದುದರಿಂದ ಬಹುಶಃ ಈ ವಿದ್ವಾಂಸರು ಇದನ್ನು ಗಂಗರ ಕಾಲದ ರಚನೆಗೆ ಸೇರಿಸಿರಬಹುದು.

ದೇವಾಲಯವು ಪೂರ್ವಾಭಿಮುಖವಾಗಿದ್ದು ಕೆಂಪು ಮಿಶ್ರಿತ ಸೋಪುಗಲ್ಲಿನಲ್ಲಿ ಕಟ್ಟಲಾಗಿದೆ(ಚಿತ್ರಸಂಖ್ಯೆ65). ಇದು ಗರ್ಭಗೃಹ, ಸುಕನಾಸಿ ನವರಂಗ ಮತ್ತು ಪಾತಾಳಂಕಣವನ್ನು ಹೊಂದಿರುವ ಏಕಕೂಟ ದೇವಾಲಯ ಗರ್ಭಗೃಹ, ಸುಕನಾಸಿ ಮತ್ತು ನವರಂಗದ ಭಾಗಗಳನ್ನು ಕೆಂಪು ಮಿಶ್ರಿತ ಸೋಪುಗಲ್ಲಿನಲ್ಲಿ ಕಟ್ಟಿದ್ದು ಉಳಿದ ಭಾಗವನ್ನು ಗ್ರಾನೈಟ್ ಶಿಲೆಯಿಂದ ಕಟ್ಟಲಾಗಿದೆ. ಗರ್ಭಗೃಹ ಮತ್ತು ಸುಕನಾಸಿಯ ಹೊರಭಾಗ ನಕ್ಷತ್ರಾಕಾರದ ತಳವಿನ್ಯಾಸವನ್ನು ಹೊಂದಿದ್ದು. ನವರಂಗ ಮತ್ತು ಪಾತಳಾಂಕಣ ಭಾಗವು ಚತುರಸ್ರಕಾರವಾಗಿದೆ. ದೇವಾಲಯವು ಸು. 5 ಅಡಿ ಎತ್ತರದ ಅದಿಷ್ಟಾನವನ್ನು ಹೊಂದಿದ್ದು ಇಲ್ಲಿ ಉಪಾನ, ಕಂಪ, ಜಗತಿ, ಪದ್ಮ, ಮಹಾಪದ್ಮ, ತ್ರಿಪಟ್ಟಕುಮುದ ಮತ್ತು ಎರಡು ಹಂತದ ದಂತಪಂಕ್ತಿಯ ರಚನೆಯನ್ನು ಹೊಂದಿದೆ. ಗರ್ಭಗೃಹ, ಸುಕನಾಸಿ, ನವರಂಗವು ಪೂರ್ವಹೊಯ್ಸಳ ಕಾಲದಲ್ಲಿ ನಿರ್ಮಾಣವಾಗಿದ್ದು ಪಾತಾಳಂಕಣ. ಪ್ರಾಕಾರ ಹಾಗೂ ಪ್ರಾಕಾರದಲ್ಲಿರುವ ಗುಡಿಗಳು ಮಾತ್ರ 17–18ನೆಯ ಶತಮಾನದಲ್ಲಿ ನಿರ್ಮಾಣವಾಗಿವೆ.[55]

ಗರ್ಭಗೃಹದಲ್ಲಿ 8 ಅಡಿ ಉದ್ದ 2 ಅಡಿ 5 ಅಂಗುಲ ಎತ್ತರದ ಪೀಠದ ಮೇಲೆ 6 ಅಡಿ ಎತ್ತರದ ಶ್ರೀ ರಾಮದೇವರ ಶಿಲ್ಪವಿದೆ ಪಕ್ಕದಲ್ಲಿ 5 ಅಡಿ 4 ಅಂಗುಲ ಎತ್ತರದ ಸೀತಾದೇವಿ ಮತ್ತು ಲಕ್ಷ್ಮಣನ ವಿಗ್ರಹಗಳಿವೆ. ರಾಮನ ಒಂದು ಕೈಯಲ್ಲಿ ಬಿಲ್ಲು, ಮತ್ತೊಂದು ಕೈಯಲ್ಲಿ ಬಾಣವಿದೆ ಆದರೆ ಬತ್ತಳಿಕೆಯಿಲ್ಲ ಹೀಗೆ ಅಪೂರ್ವ ಮೂರ್ತಿಯಾಗಿದೆ. ಶ್ರೀ ರಾಮನ ಮುಖ ದುಂಡಾಗಿದ್ದು ಸಪ್ರಮಾಣ ಬದ್ಧವಾಗಿದ್ದು ಅಪೂರ್ವ ಕಳೆಯಿಂದ ಕೂಡಿದೆ ರಾಮನ ಹಣೆ. ಮೂಗು ಮತ್ತು ಗಲ್ಲ ಎಲ್ಲವೂ ಒಂದೇ ಅಳತೆಯಲ್ಲಿರುವುದು ಇಲ್ಲಿನ ವಿಶೇಷ ಈ ಮೂರರ ಉದ್ದ ಎರಡೂ ಕಪೋಲಕ್ಕೆ ಸಮವಾಗಿದೆ. ಶ್ರೀ ರಾಮನ ಕೈಯಲ್ಲಿರುವ ಬಿಲ್ಲು ಪಾದದಿಂದ ಶಿರಸ್ಸಿನಷ್ಟು ಉದ್ದವಾಗಿದೆ. ಕಲ್ಯಾಣ ರಾಮನಾದ ಈ ಶಿಲ್ಪವನ್ನು ಶ್ರೀ ಕೋದಂಡರಾಮನೆಂದು ಕರೆಯುವ ಇವನು ತ್ರಿಭಂಗಿಯಲ್ಲಿದ್ದಾನೆ.[56] ಲಕ್ಷ್ಮಣನ ಕೈಯಲ್ಲಿ ಬಿಲ್ಲು ಮತ್ತು ಬಾಣಗಳಿವೆ. ಇವನ ಕೈಯಲ್ಲಿರುವ ಬಿಲ್ಲು ಕೂಡ ಪಾದದಿಂದ ಶಿರಸ್ಸಿನಷ್ಟು ಉದ್ದವಾಗಿದೆ. ಇಲ್ಲಿರುವ ಹನುಮಂತನ ವಿಗ್ರಹ 1.5 ಅಡಿ ಎತ್ತರವಿದೆ. ಈ ಮೂಲ ವಿಗ್ರಹಗಳು ಹೊಯ್ಸಳರ ಕಾಲದ್ದಾಗಿದೆ.[57] ಇಲ್ಲಿನ

ಬಾಗಿಲವಾಡವು ಅಲಂಕರಣ ಪಟ್ಟಿಕೆಗಳನ್ನು ಹೊಂದಿದೆ. ಇದರ ಮೇಲ್ಭಾಗದಲ್ಲಿ ಇಳಿಬಿಟ್ಟ ಗುಬುಟುಗಳ ರಚನೆಯಿದೆ. ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ. ಗರ್ಭಗೃಹದ ಅನಂತರ 2 ಅಂಕಣದಷ್ಟು ವಿಶಾಲವಾದ ತೆರೆದ ಸುಕನಾಸಿಯಿದೆ. ಇಲ್ಲಿಯ ನಾಲ್ಕು ಮೂಲೆಗಳಲ್ಲಿ ಭಿತ್ತಿಗೆ ಹೊಂದಿಕೊಂಡಂತೆ ಹೊಯ್ಸಳ ಮಾದರಿಯ ಅಲಂಕಾರಿಕ ಕಂಬಗಳಿವೆ.

ನವರಂಗ ವಿಶಾಲವಾಗಿದ್ದು ಇದು ಒಂಬತ್ತು ಅಂಕಣಗಳಿಂದ ಕೂಡಿದ್ದು 4 ಕಂಬಗಳಿವೆ. ಇವು ಬಹುಪಾಲು ಪೂರ್ವ ಹೊಯ್ಸಳರ ಕಾಲದ ಲಕ್ಷಣಗಳನ್ನು ಹೊಂದಿವೆ. ಈ ದೇವಾಲಯ ಕೆಲವು ಪೂರ್ವ ಹೊಯ್ಸಳ ವಾಸ್ತುಗಳೊಂದಿಗೆ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿ ತದನಂತರದ ಕಾಲಘಟ್ಟಗಳಲ್ಲಿಯೂ ಜೀರ್ಣೋದ್ಧಾರವಾಗುತ್ತಾ ಬಂದಿದೆ. ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವೈಷ್ಣವ ಶಿಲ್ಪಗಳನ್ನೆ ಕಾಣಬಹುದು. ಈ ದೇವಾಲಯ ಇಂದಿಗೂ ಈ ಜಿಲ್ಲೆಯಲ್ಲಿ ಬಹಳ ಪ್ರಸಿದ್ಧಿ ಪಡೆದಿದೆ. ಇಲ್ಲಿನ ಅರ್ಚಕರಾದ ಕರ್ನಾಟಕದ ಕನ್ನಡ ಪೂಜಾರಿ ಎಂದೇ ಖ್ಯಾತರಾದ ಹಿರೇಮಗಳೂರು ಕಣ್ಣನ್ ಅವರು ದೇವಾಲಯದ ಮುಖ್ಯ ಅರ್ಚಕರಾಗಿ ಇಂದಿಗೂ ಕಾರ್ಯನಿರ್ವಹಿಸುತ್ತಿದ್ದಾರೆ.

**ಖಾಂಡ್ಯದಲ್ಲಿರುವ ಮಾರ್ಕಂಡೇಶ್ವರ ದೇವಾಲಯ:** ಖಾಂಡ್ಯ ಚಿಕ್ಕಮಗಳೂರು ತಾಲೂಕಿನ ಒಂದು ಪ್ರಾಚೀನ ಗ್ರಾಮವಾಗಿದ್ದು ನರಸಿಂಹರಾಜಪುರಕ್ಕೆ 8 ಕಿ.ಮೀ. ದೂರದಲ್ಲಿ ಭದ್ರಾ ನದಿಯ ಬಲದಂಡೆಯ ಮೇಲಿದೆ. ಇದು ದೇವದಾನ ಎಂಬ ಹಳ್ಳಿಗೆ ಸೇರಿದ ಸಣ್ಣಹಳ್ಳಿಯಾಗಿದ್ದು ಇದೊಂದು ಅಗ್ರಹಾರವಾಗಿದ್ದು ಭದ್ರಾನದಿಯ ತೀರದಲ್ಲಿರುವ ಪಂಚಕ್ಷೇತ್ರಗಳಲ್ಲಿ ಇದೂ ಒಂದು.[58] ಇದನ್ನು ಸ್ಥಳೀಯವಾಗಿ ನರಸಿಂಹಕ್ಷೇತ್ರವೆಂತಲೂ ಕರೆಯುತ್ತಾರೆ. ಇಲ್ಲಿ ಮೃಕಂಡು ಎಂಬ ಮುನಿ ತಪಸ್ಸು ಮಾಡಿದ್ದರಿಂದ ಈ ಪ್ರದೇಶಕ್ಕೆ ಖಾಂಡ್ಯ ಎಂಬ ಹೆಸರಾಯಿತೆಂದು ಪ್ರತೀತಿ. ಶಾಸನದಲ್ಲಿ ಅಗಸ್ತ್ಯ ಮುನಿ ಮಾರ್ಕಂಡಯನ ಉಲ್ಲೇಖವಿದೆ.[59] ಕ್ರಿ.ಶ. 1180ರಲ್ಲಿ ಹೊಯ್ಸಳ ರಾಜ ಎರಡನೇ ಬಲ್ಲಾಳನು ಖಾಂಡ್ಯದ ಮಾರ್ಕಂಡೇಶ್ವರ ದೇವರಿಗೆ 50 ಗದ್ಯಾಣವನ್ನು ನಿತ್ಯ ಪೂಜೆಗೆ ದಾನ ನೀಡಿದ ಉಲ್ಲೇಖವಿದೆ.[60] ಹೊಯ್ಸಳರ ರಾಜ ಎರಡನೆಯ ವೀರಬಲ್ಲಾಳ ಈ ಶಾಸನದಲ್ಲಿ ಮಾರ್ಕಂಡೇಶ್ವರ, ಜರ್ನಾಧನ ಹಾಗೂ ಭೀರದೇವ ದೇವಾಲಯಗಳಿಗೆ ದಾನ ನೀಡಿದ ಉಲ್ಲೇಖವಿದೆ. ಅನಂತರದಲ್ಲಿ ಕ್ರಿ.ಶ. 1539ರಲ್ಲಿ ವಿಜಯನಗರದ ರಾಜ ಅಚ್ಯುತರಾಯನು ಬಿದರೆಯಲ್ಲಿರುವ 280 ಖಂಡುಗ ಹಾಗೂ ಹೇರಂಬಿಯಲ್ಲಿರುವ 450 ಖಂಡುಗ ಗದ್ದೆಗಳನ್ನು ಜನಾರ್ಧನ ಮತ್ತು ಮಾರ್ಕಂಡೇಶ್ವರ ದೇವರುಗಳಿಗೆ ದಾನ ನೀಡಿದ್ದಾನೆ.[61] ಈ ಎಲ್ಲಾ ಶಾಸನಗಳನ್ನು ಗಮನಿಸಿದಾಗ ಮಾರ್ಕಂಡೇಶ್ವರ ಮತ್ತು ಜನಾರ್ಧನ ದೇವಾಲಯಗಳು

ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿರಬಹುದೆಂದು ಹೇಳಬಹುದು. ಆದರೆ ಪ್ರಸ್ತುತ ವಾಸ್ತುಕೃತಿಯನ್ನು ಅವಲೋಕಿಸಿದಾಗ ಇವುಗಳು ವಿಜಯನಗರ ಕಾಲದ ವಾಸ್ತುವನ್ನು ಹೊಂದಿವೆ. ಅದುದರಿಂದ ಬಹುಶಃ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದ ಮೂಲ ದೇವಾಲಯವು ಭಗ್ನವಾಗಿ ಅನಂತರದಲ್ಲಿ ವಿಜಯನಗರದ ಕಾಲದಲ್ಲಿ ಸಂಪೂರ್ಣವಾದ ವಾಸ್ತುವನ್ನು ಹೊಂದಿವೆ ಎಂದು ಹೇಳಬಹುದು. ಇಲ್ಲಿರುವ ಮಾರ್ಕಂಡೇಶ್ವರ ಹಾಗೂ ಜನಾರ್ಧನ ದೇವಾಲಯಗಳನ್ನು ಮರಳೆಯ ಸಿದ್ಧೇಶ್ವರ ಹಾಗೂ ಚೆನ್ನಕೇಶವ ದೇವಾಲಯದ ರೀತಿಯಲ್ಲಿ ಒಂದಕ್ಕೊಂದು ಅಕ್ಕಪಕ್ಕದಲ್ಲಿವೆ.

ಈ ದೇವಾಲಯವು ಪೂರ್ವಾಭಿಮುಖವಾಗಿದ್ದು ಗ್ರಾನೈಟ್ ಶಿಲೆಯಿಂದ ನಿರ್ಮಿಸಲಾಗಿದೆ. ಇದು ಗರ್ಭಗೃಹ, ಸುಕನಾಸಿ, ನವರಂಗ ಹಾಗೂ ಮುಖಮಂಟಪವನ್ನು ಹೊಂದಿದೆ. ದೇವಾಲಯವನ್ನು ಮಾರ್ಕಂಡೇಶ್ವರ, ಮೃತ್ಯುಂಜಯ ಮತ್ತು ತ್ರಯಂಬಕೇಶ್ವರ ಎಂದು ಕರೆಯಲಾಗುತ್ತಿದೆ. ಇತ್ತೀಚೆಗೆ ಇದನ್ನು ಸ್ಥಳೀಯರು ಮಲ್ಲಿಕಾರ್ಜುನ ಎಂದೂ ಕರೆಯುತ್ತಾರೆ. ಗರ್ಭಗೃಹದಲ್ಲಿ 1 ಅಡಿ ಎತ್ತರದ ಲಿಂಗವಿದ್ದು ಗರ್ಭಗೃಹದ ಸುತ್ತಲೂ ಶೃಂಗೇರಿಯ ವಿದ್ಯಾಶಂಕರ ದೇವಾಲಯದಲ್ಲಿರುವಂತೆ ಪ್ರದಕ್ಷಿಣಾಪಥವಿದೆ.[62] ಸುಕನಾಸಿಯ ಭುವನೇಶ್ವರಿಯಲ್ಲಿ ಪದ್ಮದ ಅಲಂಕರಣವಿದೆ. ಸುಕನಾಸಿಯಲ್ಲಿ ಮಹಿಷಾಮರ್ಧಿನಿ ಮತ್ತು ಕೇಶವನ ಬಿಡಿ ಶಿಲ್ಪಗಳಿವೆ. ದ್ವಾರದ ಇಕ್ಕಲಗಳಲ್ಲಿ ಶೈವ ದ್ವಾರಪಾಲಕರ ಶಿಲ್ಪಗಳಿವೆ. ನವರಂಗವು 9 ಅಂಕಣವಿದ್ದು ಇಲ್ಲಿ 4 ಕಂಬಗಳಿವೆ. ಕಂಬಗಳಲ್ಲಿ ನಂದಿ, ಗರುಡ, ಭೈರವ, ವೀರಭದ್ರ, ಹನುಮಂತ ಮುಂತಾದ ಶಿಲ್ಪಗಳಿವೆ. ನವರಂಗದ ಮಧ್ಯದಂಕಣ, ಆಗ್ನೇಯ, ಈಶಾನ್ಯ, ವಾಯವ್ಯ ಹಾಗೂ ನೈರುತ್ಯ ದಿಕ್ಕಿನ ಅಂಕಣದ ಭುವನೇಶ್ವರಿಗಳಲ್ಲಿ ಪದ್ಮದ ಅಲಂಕರಣೆಯ ರಚನೆಯಿದ್ದು ಉಳಿದವುಗಳಲ್ಲಿ ಯಾವುದೇ ಅಲಂಕರಣವಿಲ್ಲ. ನವರಂಗದ ಮಧ್ಯದಲ್ಲಿ ನಂದಿ ಶಿಲ್ಪವಿದೆ. ನವರಂಗಕ್ಕೆ ಉತ್ತರ, ದಕ್ಷಿಣ ಮತ್ತು ಪೂರ್ವಭಾಗದಲ್ಲಿ ದ್ವಾರಗಳಿದ್ದು ಪ್ರತಿಯೊಂದು ದ್ವಾರದ ಬದಿಯಲ್ಲೂ ಶೈವ ದ್ವಾರಪಾಲಕರ ಶಿಲ್ಪವಿದ್ದು, ದಕ್ಷಿಣ ಮತ್ತು ಪೂರ್ವ ಭಾಗದ ದ್ವಾರದಲ್ಲಿ ಹಸ್ತಿ ಹಸ್ತ ಸೋಪಾನಗಳಿವೆ.

**ಸಕ್ಕರೆಪಟ್ಟಣದ ದೇವಾಲಯಗಳು**

ಕಡೂರಿನ ವಾಯುವ್ಯಕ್ಕೆ 17 ಕಿ.ಮೀ. ದೂರದಲ್ಲಿರುವ ಇದನ್ನು ಸಕರಾಯಪಟ್ಟಣ ಎಂದೂ ಕರೆಯುತ್ತಾರೆ. ಈ ಪ್ರಾಂತ್ಯವನ್ನು ಪಾಳೆಯಗಾರ ರುಕ್ಮಾಂಗದರಾಯ ಎಂಬುವವನು ಆಳುತ್ತಿದ್ದು ಈ ಗ್ರಾಮವನ್ನು ನಿರ್ಮಿಸಿ ಸುತ್ತಲು ಕೋಟೆಯನ್ನು ಕಟ್ಟಿಸಿದನು.[63] ಪ್ರಸ್ತುತ ಕೋಟೆಯು ಭಗ್ನವಾಗಿದ್ದು ಅಲ್ಲಲ್ಲಿ ಕೋಟೆಯ ವಾಸ್ತುವು ಇನ್ನೂ ಉಳಿದಿದೆ.

**ಏಕಾಂಬರೇಶ್ವರ ಅಥವಾ ಕಲ್ಮಂಡೇಶ್ವರ ಮಠ:** ಸಕ್ಕರೆಪಟ್ಟಣದಲ್ಲಿರುವ ಏಕಾಂಬರೇಶ್ವರ ದೇವಾಲಯ ಪೂರ್ವಮುಖವಾಗಿರುವ ಇದು ಚಿಕ್ಕ ದೇವಾಲಯವಾಗಿದ್ದು(ಚಿತ್ರಸಂಖ್ಯೆ66) ಗರ್ಭಗೃಹದಲ್ಲಿ ಪೀಠದ ಮೇಲೆ 1.5 ಅಡಿ ಎತ್ತರದ ಲಿಂಗವಿದ್ದು ಸುಕನಾಸಿಯಲ್ಲಿ 3 ಅಡಿ ಎತ್ತರದ ನಂದಿ ಇದೆ. ಗೋಡೆಯ ಪಕ್ಕದಲ್ಲಿ 3 ಅಡಿ ಎತ್ತರದ ಗಣಪತಿ, ಅದರ ಪಕ್ಕದಲ್ಲಿ 3 ಅಡಿ ಎತ್ತರದ ಲಕ್ಷ್ಮಿನಾರಾಯಣ ಶಿಲ್ಪಗಳಿದ್ದು ಅವುಗಳನ್ನು ವಾಸ್ತುಶಿಲ್ಪದ ಆಧಾರದಿಂದ ಕ್ರಿ.ಶ. 12 ಮತ್ತು 13ನೆಯ ಶತಮಾನಕ್ಕೆ ಸೇರಿಸಬಹುದಾಗಿದೆ. ದೇವಾಲಯದ ಗರ್ಭಗೃಹದ ಹೊರ ಭಿತ್ತಿಗೆ ಹೊಂದಿಕೊಂಡಂತೆ ದುಂಡನೆಯ ಒಂದು ಕಂಬ ಹಾಗೂ ಸುಕನಾಸಿಯ ಭಿತ್ತಿಯ ಒಳಭಾಗದಲ್ಲಿ ನಾಲ್ಕು ಹೊಯ್ಸಳರ ಕಾಲದ ಕಂಬಗಳಿವೆ. ಈ ದೇವಾಲಯ ಹೊಯ್ಸಳರ ಕಾಲದ ರಚನೆಯಾಗಿದ್ದು[64] ಅನಂತರ ಭಗ್ನಗೊಂಡಿತ್ತು. ಇದನ್ನು ಇತ್ತೀಚೆಗೆ ಜೀರ್ಣೋದ್ಧಾರ ಮಾಡಲಾಗಿದೆ. ಮೂಲ ದೇವಾಲಯಗಳ ಕುರುಹಾಗಿ ಶಿಲ್ಪಗಳು ಹಾಗೂ ಕಂಬಗಳನ್ನು ಬಿಟ್ಟರೆ ಉಳಿದೆಲ್ಲವೂ ಇತ್ತೀಚಿನ ಕಾಲದ್ದಾಗಿವೆ.

1. ಈ ಮಠಕ್ಕೆ ಸ್ಥಳೀಯರು ಹೆಚ್ಚಿನ ಸಂಖ್ಯೆಯಲ್ಲಿ ಆಗಮಿಸುತ್ತಾರೆ.
2. ಪ್ರತಿ ದಿನ ಮಧ್ಯಾಹ್ನ ಮಠದ ವತಿಯಿಂದ ಬರುವ ಪ್ರವಾಸಿಗರಿಗೆ ಭೋಜನದ ವ್ಯವಸ್ಥೆ ಇದೆ.

**ವೀರಭದ್ರ ದೇವಾಲಯ:** ಸಕ್ಕರೆಪಟ್ಟಣದಲ್ಲಿ ಪಶ್ಚಿಮಾಭಿಮುಖವಾಗಿರುವ ಈ ದೇವಾಲಯ ಕೋಟೆಯ ಪಶ್ಚಿಮ ಭಾಗದಲ್ಲಿದೆ. ಮೂಲ ದೇವಾಲಯ ಭಗ್ನವಾಗಿದ್ದು ಗರ್ಭಗೃಹ ಭಾಗ ಮಾತ್ರ ಉಳಿದಿದೆ. ಇದರ ಭಿತ್ತಿಯನ್ನು ಇತ್ತೀಚಿನ ಇಟ್ಟಿಗೆ ಮತ್ತು ಗಾರೆ ಬಳಸಿ ಕಟ್ಟಲಾಗಿದೆ. ಗರ್ಭಗೃಹದ ಅಧಿಷ್ಠಾನ ಸಾಮಾನ್ಯವಾಗಿದ್ದು ಇಲ್ಲಿ ಉಪಾನ, ಕಂಪ, ತ್ರಿಪಟ್ಟಕುಮುದವಿದೆ. ಗರ್ಭಗೃಹದಲ್ಲಿ ಸಿಂಹ ಮತ್ತು ವ್ಯಾಳ ಪೀಠದ ಮೇಲೆ 5 ಅಡಿ ಎತ್ತರದ ವೀರಭದ್ರ ಶಿಲ್ಪವಿದೆ. ಕೈಯಲ್ಲಿ ಬಿಲ್ಲು ಮತ್ತು ಗುರಾಣಿ ಮತ್ತು ಖಡ್ಗವಿದೆ ಇದು ವಿಜಯನಗರ ಕಾಲದ್ದಾಗಿದೆ.[65] ಗರ್ಭಗೃಹದ ಮುಂಭಾಗದ ಅಂಕಣದಲ್ಲಿ 5 ಅಡಿ ಎತ್ತರದ ಗಣಪತಿಯಿದೆ ಇದು ಹೊಯ್ಸಳರ ಕಾಲದ್ದಾಗಿದೆ.[66] ಗಣಪತಿ ಶಿಲ್ಪದ ಪಕ್ಕದಲ್ಲಿ ಪಾಣಿಪೀಠದ ಮೇಲೆ ಒಂದು ಲಿಂಗ, 4 ಅಡಿ ಎತ್ತರದ ನಂದಿ ಶಿಲ್ಪವಿದೆ. ದೇವಾಲಯದ ಗರ್ಭಗೃಹದ ಮುಂಭಾಗದ ಅಂಕಣವನ್ನು ಇತ್ತೀಚೆಗೆ ಕಟ್ಟಿದ್ದು ಮೇಲ್ಛಾವಣಿಯನ್ನು ಹೆಂಚಿನಿಂದ ಹೊದಿಸಲಾಗಿದೆ. ದೇವಾಲಯದ ಮುಂಭಾಗದಲ್ಲಿ ಹಂಸಪೀಠದ ಮೇಲೆ 1.5 ಅಡಿ ಎತ್ತರದ ರತಿ–ಮನ್ಮಥರ ಶಿಲ್ಪಗಳಿಗೆ ಇದರ ಪಕ್ಕದಲ್ಲಿ ಕೈಗಳು ಭಿನ್ನವಾಗಿರುವ ಸರಸ್ವತಿಯ ಶಿಲ್ಪವಿದೆ. ಇಲ್ಲಿ ಸರಸ್ವತಿಯ ಪೀಠವು ಬದಲಾಗಿದೆ.

**ರಂಗನಾಥ ದೇವಾಲಯ:** ಗ್ರಾಮದ ಮಧ್ಯಭಾಗದಲ್ಲಿ ರಂಗನಾಥಸ್ವಾಮಿ ದೇವಾಲಯವಿದೆ (ಚಿತ್ರಸಂಖ್ಯೆ67). ಈ ದೇವಾಲಯವನ್ನು ಶಕುನರಂಗನಾಥ ಎಂದು ಶಾಸನಗಳಲ್ಲಿ ಉಲ್ಲೇಖಿಸಿದೆ.[67] ಪೂರ್ವಾಭಿಮುಖವಾಗಿರುವ ಈ ದ್ವಿಕೂಟಚಲಾ ದೇವಾಲಯ ಗ್ರಾನೈಟ್ ಶಿಲೆಯ ರಚನೆ ಕೆಲವು ಕಡೆ ಇತ್ತೀಚಿನ ಗಾರೆ ಮತ್ತು ಸಿಮೆಂಟ್ ಬಳಸಲಾಗಿದೆ. ಕ್ರಿ.ಶ. 1390ರ ಶಾಸನದಲ್ಲಿ ದೇವಾಲಯಕ್ಕೆ ದಾನ ನೀಡಿರುವ ಉಲ್ಲೇಖವಿರುವುದರಿಂದ[68] ಇದು ಕ್ರಿ.ಶ. 1390ಕ್ಕಿಂತ ಹಿಂದೆಯೇ ಇದರ ನಿರ್ಮಾಣವಾಗಿರಬೇಕು ಇಲ್ಲಿನ ವಾಸ್ತು ಲಕ್ಷಣಗಳು ವಿಜಯನಗರ ಹಾಗೂ ಅನಂತರದ ಕಾಲಕ್ಕೆ ಸೇರುತ್ತವೆ. ಇದು ಗರ್ಭಗೃಹ, ನವರಂಗ, ಮುಖಮಂಟಪ ಮತ್ತು ಒಳ ಹಾಗೂ ಹೊರ ಕೈಸಾಲೆಯನ್ನು ಹೊಂದಿದೆ.

ಪಶ್ಚಿಮ ಭಾಗದ ಗರ್ಭಗೃಹದಲ್ಲಿ ಸು. 5 ಅಡಿ ಎತ್ತರದ ಚೆನ್ನಕೇಶವ ವಿಗ್ರಹವಿದ್ದು ಕೈಯಲ್ಲಿ ಶಂಖ, ಚಕ್ರ, ಗದ ಹಾಗೂ ಪದ್ಮವನ್ನು ಹಿಡಿದಿದೆ ಪ್ರಭಾವಳಿಯಲ್ಲಿ ದಶಾವತಾರದ ಹಾಗೂ ದ್ವಾದಶ ರಾಶಿಗಳ ಕೆತ್ತನೆ ಇದ್ದು ಇದು ಹೊಯ್ಸಳರ ಕಾಲದ ಶಿಲ್ಪವಾಗಿದೆ(ಚಿತ್ರಸಂಖ್ಯೆ68).[69] ಉತ್ತರ ಭಾಗದ ಗರ್ಭಗೃಹದಲ್ಲಿ ರಾಮನ ವಿಗ್ರಹವಿದೆ ಕೈಯಲ್ಲಿ ಶಂಖ, ಚಕ್ರ, ಬಿಲ್ಲು ಮತ್ತು ಬಾಣವನ್ನು ಹಿಡಿದಿದ್ದಾನೆ. ಈ ಶಿಲ್ಪ ವಿಜಯನಗರ ಕಾಲದ್ದು ಇದನ್ನು ಬಾಬಾಬುಡನ್‌ಗಿರಿಯ ಪಕ್ಕದಲ್ಲಿರುವ ಶಕುನಗಿರಿಯಿಂದ ತರಲಾಯಿತ್ತೆಂದು ಪ್ರತೀತಿ[70] ಇರುವುದರಿಂದ ಇದನ್ನು ಶಕುನ ರಂಗನಾಥ ಎಂದು ಕರೆಯುತ್ತಾರೆ. ನವರಂಗ 12 ಅಂಕಣದಿಂದ ಕೂಡಿದ್ದು ಇಲ್ಲಿರುವ ಕಂಬಗಳು ಕೆಳದಿನಾಯಕರ ಕಾಲದವು ಇಲ್ಲಿ 3 ಅಡಿ ಎತ್ತರದ 2 ಗಣಪತಿ ಶಿಲ್ಪಗಳಿವೆ ದೇವಾಲಯದ ಬಲಭಾಗದಲ್ಲಿ ದೇವಿಯ ದೇವಾಲಯವಿದೆ. ದೇವಾಲಯಕ್ಕೆ ತೆರೆದ ಮುಖಮಂಟಪವಿದ್ದು ಇಲ್ಲಿ 2 ಕಂಬಗಳಿವೆ. ಪೂರ್ವ ಭಾಗದಲ್ಲಿ ಒಳ ಮತ್ತು ಹೊರ ಕೈಸಾಲೆಯಿದೆ ಇಲ್ಲಿ ವಿಜಯನಗರ ಕಾಲದ ಕಂಬಗಳಿವೆ. ಈ ಕೈಸಾಲೆ ಸು. 5 ಅಡಿ ಎತ್ತರದ ಅದಿಷ್ಠಾನದ ಮೇಲೆ ಕಟ್ಟಲಾಗಿದೆ ಹೊರ ಕೈಸಾಲೆಯಲ್ಲಿ 16 ಕಂಬಗಳಿದ್ದು ಒಳಕೈಸಾಲೆಯಲ್ಲಿ 6 ಕಂಬಗಳಿವೆ, ಒಳಕೈಸಾಲೆಯ ಕಂಬಗಳಲ್ಲಿ ಗರುಡ, ಹನುಮಂತ, ಗಣಪತಿ, ಕೇಶವ ಮತ್ತು ಬಾಲಕೃಷ್ಣ ಮೊದಲಾದ ಶಿಲ್ಪಗಳಿವೆ. ಎರಡು ಗರ್ಭಗೃಹದ ಮೇಲ್ಭಾಗದಲ್ಲಿ ಇತ್ತೀಚೆಗೆ ನಿರ್ಮಿಸಲ್ಪಟ್ಟ ಶಿಖರಗಳಿದ್ದು ಮುಖ್ಯದ್ವಾರದಲ್ಲಿಯೂ ಇತ್ತೀಚೆಗೆ ನಿರ್ಮಿತವಾದ ಮೂರು ಅಂತಸ್ತಿನ ದ್ರಾವಿಡ ಮಾದರಿಯ ರಾಯಗೋಪುರವಿದೆ. ದೇವಾಲಯದ ಮುಂಭಾಗದಲ್ಲಿ ಗರುಡಗಂಬವಿದ್ದು ಇದನ್ನು ಕ್ರಿ.ಶ. 1812ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು ನಿಲ್ಲಿಸಿದರೆಂದು ತಿಳಿದುಬರುತ್ತದೆ.[71] ದೇವಾಲಯದಲ್ಲಿರುವ ಉತ್ಸವಮೂರ್ತಿಗಳಾದ ಚತುರ್ಭುಜ ರಾಮ, ನವನೀತ ಕೃಷ್ಣ ಮತ್ತು ಭಾಷ್ಯಕಾರರ ಕಂಚುಶಿಲ್ಪಗಳು ಚೆನ್ನಾಗಿವೆ. ಈ ದೇವಾಲಯ ಕ್ರಿ.ಶ.

13ನೆಯ ಶತಮಾನದಿಂದ ಹಿಡಿದು 18ನೆಯ ಶತಮಾನದವರೆಗೂ ಹಲವು ಭಾಗಗಳು ಜೀರ್ಣೋದ್ಧಾರವಾಗುತ್ತ ಬಂದಿರುವುದನ್ನು ಗಮನಿಸಬಹುದಾಗಿದೆ.

1. ಪ್ರತಿ ವರ್ಷ ಸಂಕ್ರಾಂತಿ ಹಬ್ಬವಾದ ಎರಡು ದಿನಕ್ಕೆ ರಂಗನಾಥ ಜಾತ್ರೆಯು ನಡೆಯುತ್ತದೆ. ಆ ಸಮಯದಲ್ಲಿ ಸಾವಿರಾರು ಪ್ರವಾಸಿಗರು ಆಗಮಿಸುತ್ತಾರೆ.
2. ಪ್ರತಿ ದಿನ ಈ ದೇವಾಲಯಕ್ಕೆ ಅಕ್ಕ ಪಕ್ಕದ ಹಳ್ಳಿಯವರು ಹಾಗೂ ಬೇರೆ ಬೇರೆ ಕಡೆಗಳಿಂದಲು ಪ್ರವಾಸಿಗರು ಬರುತ್ತಾರೆ.

**ಕಲ್ಲೇಶ್ವರ ದೇವಾಲಯ, ಯಗಟಿ:** ಯಗಟಿ ಗ್ರಾಮವು ಯಗಟಿಪುರದಿಂದ ಸು. ಅರ್ಧ ಕಿ.ಮೀ. ದೂರದಲ್ಲಿದೆ. ಕಲ್ಲೇಶ್ವರ ದೇವಾಲಯವು ಗ್ರಾಮದ ಈಶಾನ್ಯಭಾಗದ ಕೆರೆ ಏರಿಯ ಪಕ್ಕದಲ್ಲಿದೆ ಈ ದೇವಾಲಯವನ್ನು ಕ್ರಿ.ಶ. 1113ಲ್ಲಿ ಹೊಯ್ಸಳ ರಾಜ ವಿಷ್ಣುವರ್ಧನನು ರಾಜ್ಯಭಾರ ಮಾಡುತ್ತಿದ್ದಾಗ ಗ್ರಾಮದ ಮಹಾಜನಗಳಾದ ಪಚ್ಚಳಿಕೆನಾಯಕ, ಬೀವೆಯನಾಯಕ ಮತ್ತಿತರರು ಈ ದೇವಾಲಯವನ್ನು ಕಟ್ಟಿಸಿ ದೇವರ ನೈವೆದ್ಯಕ್ಕೆ ಭೂಮಿಯನ್ನು ದಾನ ನೀಡಿದರು.[72] ಉತ್ತರಾಭಿಮುಖವಾಗಿರುವ ದೇವಾಲಯ ಸಂಪೂರ್ಣವಾಗಿ ಭಗ್ನವಾಗಿದೆ. ಇದನ್ನು ಇತ್ತೀಚಿಗೆ ಆಧುನಿಕ ಸಾಮಾಗ್ರಿಗಳನ್ನು ಬಳಸಿ ಜೀರ್ಣೋದ್ಧಾರ ಮಾಡಲಾಗಿದೆ. ಗರ್ಭಗೃಹದಲ್ಲಿ ಪೀಠದ ಮೇಲೆ 1 ಅಡಿ ಎತ್ತರದ ಲಿಂಗವಿದ್ದು ಅದರ ಎಡಭಾಗದಲ್ಲಿ ಚರ್ತುಭುಜವನ್ನು ಹೊಂದಿರುವ 3 ಅಡಿ ಎತ್ತರದ ಪಾರ್ವತಿಯ ಶಿಲ್ಪವಿದೆ. ಬಲಭಾಗದಲ್ಲಿ ಎರಡೂವರೆ ಅಡಿ ಎತ್ತರದ ಗಣಪತಿ ಶಿಲ್ಪವಿದೆ. ಲಿಂಗಕ್ಕೆ ಎದುರಾಗಿ ದೇವಾಲಯದ ಹೊರಗಡೆ ನಂದಿ ಶಿಲ್ಪವಿದೆ. ಇಲ್ಲಿಯ ಶಿಲ್ಪಗಳ ಲಕ್ಷಣಗಳನ್ನು ಗಮನಿಸಿದರೆ ಇವುಗಳು ವಿಜಯನಗರ ಕಾಲದ ಶಿಲ್ಪಗಳನ್ನು ಹೋಲುತ್ತದೆ. ಇಲ್ಲಿರುವ ನಂದಿಯು ಯಗಟಿಪುರದ ಮಲ್ಲಿಕಾರ್ಜುನ ದೇವಾಲಯದಲ್ಲಿರುವ ನಂದಿ ಶಿಲ್ಪದ ಲಕ್ಷಣಗಳನ್ನು ಹೊಂದಿದೆ. ದೇವಾಲಯದ ಬಲಭಾಗದಲ್ಲಿ ಸು. 6 ಅಡಿ ಎತ್ತರದ ಮೂರು ಹಂತವುಳ್ಳ ಶಾಸನೋಕ್ತವಾದ (ಅಪ್ರಕಟಿತ) ಸುಂದರ ವೀರಗಲ್ಲಿದೆ.

**ಚನ್ನಕೇಶವ ದೇವಾಲಯ, ಬ್ರಹ್ಮ ಸಮುದ್ರ:** ಪೂರ್ವಾಭಿಮುಖವಾಗಿರುವ ಚನ್ನಕೇಶವ ದೇವಾಲಯ(ಚಿತ್ರಸಂಖ್ಯೆ69) ಏಕಕೂಟವಾಗಿದ್ದು ಇದನ್ನು ಹೊಯ್ಸಳ ದೊರೆ ಒಂದನೆಯ ನರಸಿಂಹನ ಕಾಲದಲ್ಲಿ ಅವನ ಪ್ರಾಂತ್ಯಾಧಿಕಾರಿಯಾಗಿದ್ದ ಹಾಚಿರಾಜ ಎಂಬುವವನು ಕ್ರಿ.ಶ. 1172ರಲ್ಲಿ ಕಟ್ಟಿಸಿದ ಬಗ್ಗೆ ಶಾಸನೋಕ್ತ ದಾಖಲೆಯಿದೆ. ಈ ಹಾಚಿರಾಜನು ವಾಜಿವಂಶದ ಕೇಶವಾರ್ಯ ಮತ್ತು ಚೌಡವ್ವೆ ಎಂಬ ದಂಪತಿಗಳ ಮಗ.[73] ಹೊಯ್ಸಳರ ಆಡಳಿತದುದ್ದಕ್ಕೂ ಈ ದೇವಾಲಯದ ಜೀರ್ಣೋದ್ಧಾರ ಕಾರ್ಯಗಳು ನಡೆದಿದ್ದು ಅನೇಕ ದಾನದತ್ತಿಗಳನ್ನು

ನೀಡಲಾಗಿದೆ. ಇದೊಂದು ಸರಳ ಬಾಹ್ಯವಿನ್ಯಾಸವಿರುವ ದ್ರಾವಿಡ ಶೈಲಿಯ ದೇವಾಲಯವಾಗಿದ್ದು ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪವನ್ನು ಹೊಂದಿದ್ದು ಏರು ವಿನ್ಯಾಸದಲ್ಲಿ ಸು. 5 ಅಡಿ ಎತ್ತರದ ಅಧಿಷ್ಠಾನವನ್ನು ಹೊಂದಿದೆ. ಇದು ಅತ್ಯಂತ ಸರಳವಾದ ಪಟ್ಟಿಕೆಗಳನ್ನು ಹೊಂದಿದ್ದು ಉಪಾನ, ಕಪೋತ ಹಾಗೂ ಚೂಪಾಗಿ ಹೊರಚಾಚಿರುವ ಪದ್ಮಪಟ್ಟಿಕಾ ದಂತಪಂಕ್ತಿಗಳಿರುವ ಪಟ್ಟಿಕೆ ಹಾಗೂ ಪ್ರತಿಗಳನ್ನು ಹೊಂದಿದೆ ಭಿತ್ತಿಯಲ್ಲಿ ಹಾಗೂ ಬಾಹ್ಯ ವಿನ್ಯಾಸದಲ್ಲಿ ಕೆಲವೇ ಕೆಲವು ಹೊರಚಾಚುಗಳಿದ್ದು ಉಬ್ಬುಗಳಿಗೆ ಅನುಗುಣವಾಗಿ ತೆಳುವಾದ ಕಂಬಕೃತಿಗಳು ಹಾಗೂ ಬೋದಿಗೆಗಳು ಕಪೋತದವರೆಗೂ ಅರೆಕಂಬಗಳಿವೆ. ಗರ್ಭಗೃಹದ ಮೇಲಿರುವ ಶಿಖರ ಇತ್ತೀಚಿಗೆ ಇಟ್ಟಿಗೆ ಮತ್ತು ಗಾರೆಯನ್ನು ಬಳಸಿ ಕಟ್ಟಲಾಗಿದೆ. ಮೂಲ ಶಿಖರ ಶಿಲೆಯ ನಿರ್ಮಾಣವಾಗಿತ್ತು ಇದು ಹೊಯ್ಸಳ ದ್ರಾವಿಡ ಶಿಖರದ ವಿನ್ಯಾಸಕ್ಕೆ ಪೂರಕವಾದ ಪರಿಕಲ್ಪನೆಯನ್ನು ನೀಡುತ್ತದೆ.[74]

ಗರ್ಭಗೃಹದಲ್ಲಿ ಸಮಭಂಗಿಯಲ್ಲಿರುವ ಸು. 6 ಅಡಿ ಎತ್ತರದ ನಾರಾಯಣನ ಶಿಲ್ಪವಿದೆ(ಚಿತ್ರಸಂಖ್ಯೆ70). ಕೈಗಳಲ್ಲಿ ಶಂಖ, ಚಕ್ರ, ಗದ, ಪದ್ಮಗಳಿವೆ ಎರಡೂ ಪಾರ್ಶ್ವಗಳಲ್ಲಿ ಶ್ರೀದೇವಿ ಮತ್ತು ಭೂದೇವಿಯರ ಶಿಲ್ಪಗಳಿದ್ದು ಅಕ್ಕಪಕ್ಕದಲ್ಲಿ ಚಾಮರಧಾರಿಣಿಯರ ಶಿಲ್ಪಗಳನ್ನು ಕೆತ್ತಲಾಗಿದೆ ಮತ್ತು ಪ್ರಭಾವಳಿಯಲ್ಲಿ ವಿಷ್ಣುವಿನ ದಶಾವತಾರವನ್ನು ಬಿಡಿಸಿದೆ. ಸುಕನಾಸಿಯು ಗರ್ಭಗೃಹದಷ್ಟೇ ವಿಶಾಲತೆಯನ್ನು ಹೊಂದಿದ್ದು ಇಲ್ಲಿಯ ದ್ವಾರಬಂಧವೂ ಅರೆಕಂಬಗಳು ಹಾಗೂ ಅಲಂಕಾರಿಕ ಪಟ್ಟಿಕೆಗಳಿಂದ ಕೂಡಿದೆ ಮತ್ತು ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದ್ದು ಎರಡು ಬದಿಯಲ್ಲೂ ವ್ಯಾಳದ ಅಲಂಕರಣೆಯಿದೆ. ಮಕರ ತೋರಣದಲ್ಲಿ ಲಕ್ಷ್ಮೀನಾರಾಯಣನ ವಿಗ್ರಹ ಸುಖಾಸನ ಭಂಗಿಯಲ್ಲಿದ್ದು ಇಕ್ಕೆಲಗಳಲ್ಲಿ ಗಂಧರ್ವಯಕ್ಷರು, ಸಂಗೀತಗಾರರ ಶಿಲ್ಪಗಳಿವೆ. ಈ ಎಲ್ಲಾ ಆಕೃತಿಗಳಿಗೆ ಕಮಾನನ್ನು ಒದಗಿಸುವಂತೆ ಮಕರ ತೋರಣವು ವರುಣ ಸಹಿತವಾಗಿ ಆಕರ್ಷಕವಾಗಿ ಕೆತ್ತಲ್ಪಟ್ಟಿದೆ ಹಾಗೂ ಮಕರ ತೋರಣದ ವಿನ್ಯಾಸದಲ್ಲಿ ಮತ್ತು ಕೆತ್ತನೆಯಲ್ಲಿ ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯದ ಸುಕನಾಸಿಯ ದ್ವಾರಬಂಧಕ್ಕೆ ಸರಿಸಾಟಿಯಾಗಿದೆ.[75]

ನವರಂಗದಲ್ಲಿ ನಾಲ್ಕು ಹೊಯ್ಸಳ ಮಾದರಿಯ ಕಂಬಗಳಿದ್ದು ನಯವಾಗಿ ಹೊಳಪಿನಿಂದ ಕೂಡಿವೆ ಮತ್ತು ಇಲ್ಲಿರುವ ವೇಣುಗೋಪಾಲ ಶಿಲ್ಪ ಬಹುಶಃ 14ನೆಯ ಶತಮಾನದ್ದಿರಬಹುದು.

## ವೀರನಾರಾಯಣ ದೇವಾಲಯ, ಬೆಳವಾಡಿ

ಬೆಳವಾಡಿ ಗ್ರಾಮವು ಬಾಣಾವರ ಹಾಗೂ ಚಿಕ್ಕಮಗಳೂರು ರಸ್ತೆಯ ಬದಿಯಲ್ಲಿ ಹಳೇಬೀಡಿನಿಂದ ಉತ್ತರಕ್ಕೆ ಸು. 4 ಕಿ.ಮೀ. ದೂರದಲ್ಲಿದೆ. ಈ ಊರನ್ನು ಮಹಾಭಾರತದ

ಏಕಚಕ್ರನಗರವೆಂದು ಕರೆಯುವ ಪ್ರತೀತಿ ಇದೆ. ಇಲ್ಲಿ ಭೀಮನು ಬಕಾಸುರನನ್ನು ಸಂಹರಿಸಿದನೆಂಬ ಐತಿಹ್ಯವಿದೆ.[76] ಇದರ ಜ್ಞಾಪಕಾರ್ಥವಾಗಿ ಪ್ರತಿವರ್ಷ "ಬಂಡಿ ಬನ" ಎಂಬ ಹಬ್ಬವನ್ನು ಇಲ್ಲಿ ಆಚರಿಸಲಾಗುತ್ತದೆ. ಇಲ್ಲಿ ದೊಡ್ಡ ಧಣಕರಾಯ ಹೆಸರಿನ ಒಂದು ಕೆರೆಯಿದೆ. ಜಣಕರಾಯ ಸ್ಥಳೀಯ ಮುಖಂಡನಾಗಿದ್ದು (ಪಾಳೆಯಗಾರ) ಇವನ ಗೌರವಾರ್ಥವಾಗಿ ಇಲ್ಲೊಂದು ಗುಡಿಯನ್ನು ನಿರ್ಮಿಸಲಾಗಿದೆ.

ಊರಿನ ಮಧ್ಯಭಾಗದಲ್ಲಿ ವೀರನಾರಾಯಣ ದೇವಾಲಯವಿದೆ(ಚಿತ್ರಸಂಖ್ಯೆ71). ಈ ದೇವಾಲಯ ಸೋಪುಗಲ್ಲಿನಿಂದ ಕಟ್ಟಲಾಗಿದ್ದು ತ್ರಿಕೂಟಾಚಲವಾಗಿರುವ ಇದು ಪೂರ್ವಾಭಿಮುಖವಾಗಿದೆ. ಇದು ಬೇಲೂರು, ಹಳೇಬೀಡಿನ ದೇವಾಲಯಗಳಂತೆ ಶಿಲ್ಪ ಸೌಂದರ್ಯದಿಂದ ಕೂಡಿದ್ದು ಮೂರು ಗರ್ಭಗೃಹಗಳ ಮೇಲ್ಭಾಗದಲ್ಲೂ ಶಿಖರವನ್ನು ಹೊಂದಿದೆ.[77] ಈ ದೇವಾಲಯದ ಮೂರು ಗರ್ಭಗೃಹಗಳಲ್ಲಿ ವೈಷ್ಣವ ದೇವರ ಶಿಲ್ಪಗಳನ್ನೇ ಹೊಂದಿದ್ದು ಈ ರೀತಿಯ ದೇವಾಲಯಗಳು ಇರುವುದು ವಿರಳ ಆದರೂ ಈ ಜಿಲ್ಲೆಯಲ್ಲಿ ಇಂತಹ ಒಂದೇ ಪಂಥದ ದೇವರುಗಳನ್ನೇ ಹೊಂದಿರುವ ದೇವಾಲಯಗಳಲ್ಲಿ ಬಗ್ಗವಳ್ಳಿಯ ಯೋಗನರಸಿಂಹ ದೇವಾಲಯವನ್ನು ಬಿಟ್ಟರೆ ಮತ್ತೊಂದು ಈ ದೇವಾಲಯವಾಗಿದೆ. ಹೊಯ್ಸಳ ವಾಸ್ತುಕೃತಿಗಳಲ್ಲೇ ಅತ್ಯಂತ ದೊಡ್ಡದಾದ (ವಿಶಾಲವಾದ) ದೇವಾಲಯವೆಂಬ ಕೀರ್ತಿಯನ್ನು ಹೊಂದಿರುವ ದೇವಾಲಯಗಳಲ್ಲಿ ಇದೂ ಸಹ ಒಂದು[78] ವೇಣುಗೋಪಾಲ ಗರ್ಭಗೃಹದ ಹೊರಭಾಗದ ಬಲಭಾಗದಲ್ಲಿ ಒಂದು ದೊಡ್ಡ ಸೋಪುಗಲ್ಲಿನಲ್ಲಿ ಕೆತ್ತಿರುವ ಕ್ರಿ.ಶ. 1206ರ ಹೊಯ್ಸಳರ ಕಾಲದ ಕನ್ನಡ ಶಾಸನವೊಂದಿದೆ.[79] ಶಾಸನದ ಮೇಲ್ಭಾಗದಲ್ಲಿ ವೀರನಾರಾಯಣ, ವೇಣುಗೋಪಾಲ ಮತ್ತು ಯೋಗನರಸಿಂಹನ ಶಿಲ್ಪಗಳಿವೆ. ಈ ಶಾಸನದಲ್ಲಿ ವೀರನಾರಾಯಣ ದೇವಾಲಯಕ್ಕೆ ಒಂದು ತಟಾಕವನ್ನು ಮತ್ತು ಭೂಮಿಯನ್ನೂ ಕೊಟ್ಟಿರುವುದರ ಉಲ್ಲೇಖವಿದ್ದು ಈ ಅಂಶವನ್ನು ಗಮನಿಸಿದಾಗ ದೇವಾಲಯವನ್ನು ಕ್ರಿ.ಶ. 1206ಕ್ಕಿಂತಲೂ ಪೂರ್ವದಲ್ಲಿಯೇ ಕಟ್ಟಲಾಗಿರಬೇಕೆಂದು ಅಭಿಪ್ರಾಯಪಡಬಹುದು.[80]

ಪಶ್ಚಿಮದ ವೀರನಾರಾಯಣ ಗುಡಿ ಪ್ರಾಯಶಃ ಮೂಲ ಹಾಗೂ ಸಂಪೂರ್ಣ ಗುಡಿಯಾಗಿದ್ದು ಪೂರ್ವದ ಭಾಗದಲ್ಲಿ ಇದಕ್ಕೆ ಲಂಬವಾಗಿ ಉಳಿದೆರಡು ಗುಡಿಗಳನ್ನು ಉತ್ತರ ಹಾಗೂ ದಕ್ಷಿಣದಲ್ಲಿ ಸೇರಿಸಿದಂತೆ ಕಾಣಬರುತ್ತದೆ.[81] ಪಶ್ಚಿಮ ಭಾಗದಲ್ಲಿ ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಚೌಕಟ್ಟಾದ ಮುಖಮಂಟಪವನ್ನು(ಚಿತ್ರಸಂಖ್ಯೆ72) ಹೊಂದಿದ್ದು ಪ್ರಾಂಗಣದ ಮಧ್ಯೆ ಇದ್ದು ಈ ದೇಗುಲಕ್ಕೆ ಸುತ್ತಲೂ ಒಳಗಡೆ ಕಂಬದ ಸಾಲನ್ನು ಹೊಂದಿದ್ದ ಪ್ರಾಕಾರವಿತ್ತು.

ಈಗ ಅದರ ಅವಶೇಷಗಳನ್ನು ಮಾತ್ರ ಕಾಣಬಹುದು. ಪಶ್ಚಿಮದ ಗುಡಿ ಸಂಪೂರ್ಣ ವಾಸ್ತು ಅಲಂಕರಣೆಗಳಿಂದ ಕೂಡಿದೆ ಅಧಿಷ್ಠಾನದ ದಿಂಡುಗಳು ಕೇವಲ ಸ್ತಂಭಿಕೆಗಳನ್ನು ಹೊಂದಿರುವ ಭಿತ್ತಿ ಇಳಿಜಾರು ಕಪೋತ ಹಾಗೂ ಕೈಪಿಡಿ ಇವಿಷ್ಟು ಇನ್ನೂ ಉಳಿದು ಬಂದಿವೆ ಹಾಗೂ ಗುಡಿಯ ಮೇಲ್ಭಾಗದಲ್ಲಿ ದ್ರಾವಿಡ ಮಾದರಿಯ ದ್ವಿತಲ ವಿಮಾನ ಶಿಖರ, ಸ್ತೂಪಿ, ಮುಂಭಾಗದಲ್ಲಿ ಸುಕನಾಸಿಯನ್ನು ನಿರ್ಮಿಸಲಾಗಿದೆ. ಇಲ್ಲಿ ತೆರೆದ ಮುಖಮಂಟಪವಿದ್ದು ಸುತ್ತಲೂ ಕಕ್ಷಾಸನವಿದೆ(ಚಿತ್ರಸಂಖ್ಯೆ73). ಮುಖಮಂಟಪ ಪಶ್ಚಿಮ ಭಾಗದಲ್ಲಿ ಪ್ರಕಾರದ ವರಾಂಡಕ್ಕೆ ಹೊಂದಿಕೊಂಡಂತೆ ಇದ್ದುದರಿಂದ ಆ ಭಾಗದ ಪ್ರಕಾರ ಇನ್ನೂ ಹಾಗೇ ಉಳಿದುಬಂದಿದೆ. ಇದಕ್ಕೆ ಹೊಂದಿಕೊಂಡಂತೆ ಅನಂತರದಲ್ಲಿ ದೇವಾಲಯವನ್ನು ವಿಸ್ತರಿಸಿ ಉತ್ತರ ಹಾಗೂ ದಕ್ಷಿಣದ ಗುಡಿಗಳನ್ನು ನಿರ್ಮಿಸಲಾಗಿದೆ. ಇವೆರಡಕ್ಕೂ ಒಂದೊಂದು ಸುಕನಾಸಿಗಳು ಅವುಗಳ ಮುಂದೆ ಪಶ್ಚಿಮದ ಗುಡಿಯ ಪ್ರಾಕಾರಕ್ಕೆ ಹೊಂದಿಕೊಂಡಂತೆಯೇ ಇರುವ ತೆರೆದ ನವರಂಗವನ್ನು ಕಲ್ಪಿಸಲಾಗಿದೆ. ಹೀಗಾಗಿ ಇಡೀ ದೇವಾಲಯ ಒಂದು ವಾಸ್ತು ಚೌಕಾಟ್ಟಾಗಿ ತ್ರಿಕೂಟಾಚಲವಾಗಿ ನಿಂತಿದೆ. ಪಶ್ಚಿಮ ಭಾಗದಲ್ಲಿರುವ ಗರ್ಭಗೃಹ ಚೌಕಾಕಾರವಾಗಿದ್ದು ಸುಕನಾಸಿ ಮತ್ತು ಒಂಬತ್ತು ಅಂಕಣದ ನವರಂಗವನ್ನು ಹೊಂದಿದೆ. ಅನಂತರದಲ್ಲಿ ಉತ್ತರ ಮತ್ತು ದಕ್ಷಿಣ ದಿಕ್ಕಿನಲ್ಲಿ ಗೋಪಾಲಕೃಷ್ಣ ಮತ್ತು ಯೋಗನರಸಿಂಹಸ್ವಾಮಿಯ ದೇವಾಲಯವಿದ್ದು ಈ ಎರಡು ದೇವಾಲಯಗಳ ಹೊರ ಭಾಗದ ಭಿತ್ತಿಯಲ್ಲಿ ಶಿಲ್ಪಗಳನ್ನು ಕೆತ್ತಲಾಗಿದೆ ಹಾಗೂ ಪೂರ್ವ ಭಾಗದಲ್ಲಿರುವ ಸಭಾಮಂಟಪ ದೇವಾಲಯಕ್ಕೆ ಮುಕುಟವಿದ್ದಂತೆ ಕಾಣುತ್ತದೆ.

**ಪಶ್ಚಿಮದ ಗರ್ಭಗೃಹ:** ಗರ್ಭಗೃಹದಲ್ಲಿ ಗರುಡ ಪೀಠದ ಮೇಲೆ ವೀರನಾರಾಯಣನ ವಿಗ್ರಹವಿದೆ. ಇದರ ಪೀಠವೂ ಸೇರಿದಂತೆ ಈ ವಿಗ್ರಹ 8 ಅಡಿ ಎತ್ತರವಿದ್ದು ಕೈಗಳಲ್ಲಿ ಪದ್ಮ, ಗದ, ಚಕ್ರವಿದೆ ಶಂಖ ಮತ್ತು ಚಕ್ರದ ಸ್ವಲ್ಪ ಭಾಗ ಮುರಿದು ಹೋಗಿದೆ ಹಾಗೂ ಶಿಲ್ಪಕ್ಕೆ ಸುಂದರವಾದ ಪ್ರಭಾವಳಿಯಿದ್ದು ಇದು ವ್ಯಾಳದ ರಚನೆಯೊಂದಿಗೆ ವಿಷ್ಣುವಿನ ದಶಾವತಾರದ ಶಿಲ್ಪಗಳನ್ನು ಕಂಡರಿಸಿದ್ದು ಇಕ್ಕೆಲಗಳಲ್ಲಿ ಶ್ರೀದೇವಿ ಭೂದೇವಿಯರಿದ್ದಾರೆ. ದ್ವಾರಬಂಧವನ್ನು ಅಲಂಕಾರಿಕ ಪಟ್ಟಿಕೆಗಳಿಂದ ಅಲಂಕರಿಸಲಾಗದೆ. ಆದರೆ ಇವುಗಳ ಮೇಲೆ ಇತ್ತೀಚೆಗೆ ಬಣ್ಣವನ್ನು ತುಂಬಿದ್ದು ಅಲ್ಲಿರುವ ಶಿಲ್ಪಗಳನ್ನು ಗುರುತಿಸಲು ಸಾಧ್ಯವಾಗುತ್ತಿಲ್ಲ ದ್ವಾರಬಂಧಕ್ಕೆ ಹೊಂದಿಕೊಂಡಂತೆ ತೆರೆದ ಸುಕನಾಸಿಯಿದೆ. ಇದು ಮೊದಲಿಗೆ ತೆರೆದಿದ್ದು ಈಚೆಗೆ ಗೋಡೆಯನ್ನು ಕಟ್ಟಲಾಗಿದೆ. ಇಲ್ಲಿ ಅದ್ಭುತವಾದ ಭುವನೇಶ್ವರಿಯನ್ನು ರಚಿಸಲಾಗಿದ್ದು ಇದು ಅಷ್ಟಮುಖಾಕೃತಿಯ ತಳಭಾಗವನ್ನು ಹೊಂದಿದ್ದು ಗುಮ್ಮಟಾಕೃತಿಯ ಛಾವಣಿಯನ್ನು ಹೊಂದಿದೆ. ಮೂಲೆಗಳಲ್ಲಿ ಕೀರ್ತಿಮುಖಗಳನ್ನು, ಲತಾಬಳ್ಳಿಗಳನ್ನು ಚಿತ್ರಿಸಿದ್ದು ಮಧ್ಯದಲ್ಲಿ ಕಮಲದ ಮೊಗ್ಗನ್ನು ಇಳಿಬಿಟ್ಟಂತೆ ಕೆತ್ತಲಾಗಿದೆ.

**ದಕ್ಷಿಣದ ಗರ್ಭಗೃಹ:** ಇಲ್ಲಿ ಗರುಡ ಪೀಠದ ಮೇಲೆ ಸು. 7 ಅಡಿ ಎತ್ತರದ ವೇಣುಗೋಪಾಲನ ಶಿಲ್ಪವಿದ್ದು ಇದು ಸೋಮನಾಥಪುರದ ಚೆನ್ನಕೇಶವ ದೇವಾಲಯದಲ್ಲಿರುವ ವೇಣುಗೋಪಾಲಸ್ವಾಮಿಯ ಶಿಲ್ಪದ ಲಕ್ಷಣವನ್ನು ಹೊಂದಿದೆ[82] ಹಾಗೂ ಸುಂದರವಾಗಿರುವ ಈ ಶಿಲ್ಪದ ಪ್ರಭಾವಳಿಯಲ್ಲಿ ಮರ, ಹೂಬಳ್ಳಿ, ಗೋವು, ಮುನಿಗಳ (ಋಷಿ) ಚಿತ್ರವನ್ನು ಕೆತ್ತಲಾಗಿದೆ. ಇದರ ಜೊತೆಗೆ ಶಂಖ, ಪದ್ಮ, ಗದ ಮತ್ತು ಚಕ್ರವನ್ನು ಕೆತ್ತಲಾಗಿದೆ. ವೇಣುಗೋಪಾಲನು ವೃಕ್ಷದ ಕೆಳಗಡೆ ನಿಂತಿದ್ದಾನೆ ಗೋಪಾಲನು ಕೊಳಲನ್ನು ನುಡಿಸುತ್ತಿರುವ ಭಂಗಿಯಲ್ಲಿ ಶಿಲ್ಪಿಸಲಾಗಿರುವ ಈ ವಿಗ್ರಹ ಸುಂದರವಾಗಿದೆ ಗರ್ಭಗೃಹದ ದ್ವಾರ ಸಾಮಾನ್ಯ ಅಲಂಕರಣೆಯನ್ನು ಹೊಂದಿದ್ದು ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರ ರಚನೆಯಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿಯನ್ನು ಬಿಡಿಸಿದೆ. ಇದರ ಅಕ್ಕಪಕ್ಕದಲ್ಲಿ ಸಣ್ಣ ಸಣ್ಣ ಬುರುಜುಗಳ ಅಲಂಕರಣೆಯಿದೆ ಇಲ್ಲಿ ಸುಕನಾಸಿಯಿದ್ದು ಇದರ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದ್ದು ಸಭಾಮಂಟಪಕ್ಕೆ ಹೊಂದಿಕೊಂಡಂತಿದೆ. ಇಲ್ಲಿಯ ಭುವನೇಶ್ವರಿಯನ್ನು ಪದ್ಮಮಂಡಲದಿಂದ ಶಿಲ್ಪಿಸಿದೆ.

**ಉತ್ತರದ ಗರ್ಭಗೃಹ:** ಇಲ್ಲಿ ಗರುಡ ಪೀಠದಲ್ಲಿ ಸು. 7 ಅಡಿ ಎತ್ತರದ ಯೋಗನರಸಿಂಹನ ಶಿಲ್ಪವಿದೆ. ಯೋಗಪಟ್ಟದಲ್ಲಿರುವ ನರಸಿಂಹನ ಕೈಯಲ್ಲಿ ಶಂಖ. ಚಕ್ರವನ್ನು ಹಿಡಿದಿದ್ದು ಮತ್ತೆರಡು ಕೈಗಳು ಮಂಡಿಯ ಮೇಲೆ ಇಳಿಬಿಟ್ಟಿವೆ ಪ್ರಭಾವಳಿಯಲ್ಲಿ ನಾಗಬಂಧದ ತೋರಣವಿದ್ದು ಇಲ್ಲಿ ವಿಷ್ಣುವಿನ ದಶಾವತಾರವನ್ನು ಕೆತ್ತಲಾಗಿದೆ. ಶಿಲ್ಪವು ಸುಂದರವಾಗಿ ಶಿಲ್ಪಿಸಿರುವ ಕಿರೀಟವನ್ನು ಹೊಂದಿದೆ ಗರ್ಭಗೃಹದ ದ್ವಾರ ಸಾಮಾನ್ಯ ಅಲಂಕರಣವನ್ನು ಹೊಂದಿದೆ ಇಲ್ಲಿ ಸಭಾಮಂಟಪಕ್ಕೆ ಹೊಂದಿಕೊಂಡಂತೆ ತೆರೆದ ಸುಕನಾಸಿಯಿದ್ದು ಭುವನೇಶ್ವರಿ ಗುಮ್ಮಟಾಕಾರವಾಗಿದ್ದು ಪದ್ಮದ ಅಲಂಕರಣವನ್ನು ಹೊಂದಿದೆ.

ಈ ದೇವಾಲಯದ ಗರ್ಭಗುಡಿಗಳಲ್ಲಿರುವ ವಿಷ್ಣು. ವೇಣುಗೋಪಾಲ ಮತ್ತು ಯೋಗನರಸಿಂಹನ ಶಿಲ್ಪಗಳು ಅತ್ಯಂತ ಸುಂದರವಾಗಿದೆ. ಇವುಗಳ ಅಲಂಕರಣೆಯಲ್ಲಿ ಹೊಯ್ಸಳ ಶೈಲಿಯ ಸೂಕ್ಷ್ಮ ಕೆತ್ತನೆ ಹಾಗೂ ನವೀನ ಕಲ್ಪನೆ ಪ್ರಧಾನವಾಗಿ ಕಾಣುತ್ತದೆ. ಇಲ್ಲಿ ವೈವಿಧ್ಯಮಯವಾದ ಆಭರಣಗಳು, ಅಲಂಕರಣೆಗಳು, ಆಯುಧ, ವಸ್ತ್ರ, ಕಿರೀಟ, ಪ್ರಭಾವಳಿ, ಸಹಚರರು, ಪತ್ನಿಯರು ಹೀಗೆ ಪ್ರತಿಯೊಂದು ವಿವರಗಳನ್ನು ಅತ್ಯಂತ ಕುಶಲತೆಯಿಂದ ಚಿತ್ರಿಸಲಾಗಿದೆ.

**ನವರಂಗ:** ನವರಂಗದ ದ್ವಾರ ಸಾಮಾನ್ಯವಾಗಿದ್ದು ಅಷ್ಟೇನು ಅಲಂಕರಣದಿಂದ ಕೂಡಿಲ್ಲ. ದ್ವಾರದ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದ್ದು(ಚಿತ್ರಸಂಖ್ಯೆ74) ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರ ಶಿಲ್ಪಗಳಿವೆ. ನವರಂಗ ಒಂಬತ್ತು ಅಂಕಣವನ್ನು ಹೊಂದಿದೆ. ದಕ್ಷಿಣ ಭಾಗದ ಭಿತ್ತಿಯಲ್ಲಿ ಸಣ್ಣ ಜಾಲಂಧ್ರವಿದ್ದು ಇಲ್ಲಿ ಯಾವುದೇ ಗೂಡುಗಳಿಲ್ಲದೆ ಎರಡು ಮೇಲ್ಚಾವಣಿಗಳಿದ್ದವು ಕೆಳಗಿನ ಸ್ಥಂಭಗಳ ಮೇಲೆ ಸಣ್ಣ ಸ್ತಂಭಗಳನ್ನಿಟ್ಟು ಎರಡನೆಯ ಮೇಲ್ಚಾವಣಿಯನ್ನು ಮಾಡಿರುವರು ಎರಡು ಚಾವಣಿಗಳಿಗೂ ಮಧ್ಯದಲ್ಲಿರುವ ಅಂತರದಲ್ಲಿ ಭಂಡಾರವನ್ನು ಇಡುತ್ತಿದ್ದರು.[83] ಇಲ್ಲಿ ಹೊಯ್ಸಳ ಮಾದರಿಯ ನಾಲ್ಕು ಕಂಬಗಳಿದ್ದು ಮೇಲ್ಭಾಗದಲ್ಲಿ ಬೋಧಿಗೆಯಾಕಾರವನ್ನು ಹೊಂದಿವೆ(ಚಿತ್ರಸಂಖ್ಯೆ75). ಇಲ್ಲಿ ಪ್ರತಿ ಅಂಕಣದಲ್ಲೂ ವಿವಿಧ ಲಕ್ಷಣಗಳನ್ನು ಹೊಂದಿರುವ ಭುವನೇಶ್ವರಿಯಿದ್ದು ಇವುಗಳೆಲ್ಲವೂ ಗುಮ್ಮಟಾಕಾರವಾಗಿವೆ. ಇವುಗಳನ್ನು ಕ್ರಮವಾಗಿ ಪೂರ್ವ ದಿಕ್ಕಿನಿಂದ ಗಡಿಯಾರ ಮುಳ್ಳು ತಿರುಗುವ ಮಾದರಿಯಲ್ಲಿ ವಿವರಿಸಲಾಗಿದೆ.

ಮೊದಲ ಭುವನೇಶ್ವರಿಯು ಪದ್ಮಮಂಡಲವಿತಾನವನ್ನು ಅಲಂಕರಿಸಿದ್ದು ಇದನ್ನು ವೃತ್ತಾಕಾರದಲ್ಲಿ ಚಿತ್ರಿಸಲಾಗಿದೆ. ಗುಮ್ಮಟದ ಮಧ್ಯಭಾಗದಿಂದ ಕಮಲದ ಮೊಗ್ಗು ಇಳಿಬಿದ್ದಂತೆ ಕೆತ್ತಲಾಗಿದೆ. ಕೀರ್ತಿಮುಖಗಳು ಮತ್ತು ಬಳ್ಳಿಯ ಅಲಂಕರಣಗಳು ಕಂಡುಬರುತ್ತವೆ. ಎರಡನೆಯ ಭುವನೇಶ್ವರಿ ಹೂವಿನ ಚಿತ್ರಣಗಳನ್ನು ಒಳಗೊಂಡಿದ್ದು ಕೀರ್ತಿಮುಖಗಳನ್ನು ಹೊಂದಿದೆ. ಮೊನಚಾದ ಅಗ್ರಗಳನ್ನು ಹೊಂದಿರುವ ಅಲಂಕರಣಗಳಿಂದ ಕೂಡಿದ್ದು ತಳಭಾಗದಲ್ಲಿ ನಕ್ಷತ್ರಾಕಾರ ವಿನ್ಯಾಸವಿದೆ. ಪ್ರತಿ ದಿಕ್ಕು ಮತ್ತು ಉಪದಿಕ್ಕುಗಳಲ್ಲಿ ನಕ್ಷತ್ರಾಕಾರದ ಮುಂಚಾಚುಗಳನ್ನು ಹೊಂದಿದ್ದು ಸಣ್ಣದಾದ ಸ್ತಂಬಿಕೆಗಳನ್ನು ಹೊಂದಿದೆ ಗುಮ್ಮಟದ ಲಕ್ಷಣ ಹಿಂದಿನ ಭುವನೇಶ್ವರಿಯಂತೆ ಇದೆ. ಮೂರನೆಯ ಭುವನೇಶ್ವರಿಯು ಹಿಂದಿನ ಭುವನೇಶ್ವರಿಯಂತೆ ಇದ್ದು ಬಹಳ ಕಡಿಮೆ ಮುಖಗಳನ್ನು ಹೊಂದಿದೆ. ಕೀರ್ತಿಮುಖ ಮತ್ತು ಬಳ್ಳಿಯ ಅಲಂಕರಣಗಳನ್ನು ಹೊಂದಿದ್ದು ಮಧ್ಯಭಾಗವು ಗುಮ್ಮಟಾಕಾರದಲ್ಲಿದೆ. ಗುಮ್ಮಟವು ಹದಿನಾರು ಕೋನಗಳನ್ನು ಹೊಂದಿದ್ದು ಹದಿನಾರು ಚಿಕ್ಕ ಸ್ತಂಭಿಕೆಗಳನ್ನು ಹೊಂದಿದೆ. ನಾಲ್ಕನೆಯ ಭುವನೇಶ್ವರಿಯ ಕೆಳಭಾಗದಲ್ಲಿ ಅಷ್ಟಮುಖಗಳಿದ್ದು ಇಲ್ಲಿ ಕೀರ್ತಿಮುಖಗಳ ಚಿತ್ರಣವಿದೆ ಮೇಲ್ಭಾಗದಲ್ಲಿ ಗುಮ್ಮಟವಿದೆ ನೇರವಾದ ಪಟ್ಟಿಗಳನ್ನು ಹೊಂದಿದ್ದು ಗುಮ್ಮಟದ ಮಧ್ಯಭಾಗದಲ್ಲಿ ಕಮಲದ ಮೊಗ್ಗಿದ್ದು ತುದಿಯಲ್ಲಿ ವೃತ್ತಾಕಾರದ ಭಾಗದಲ್ಲಿ ಶ್ರೀ ಚಕ್ರವನ್ನು ಕೆತ್ತಲಾಗಿದೆ. ಐದನೆಯ ಭುವನೇಶ್ವರಿಯು ಅಷ್ಟಮುಖಾಕೃತಿಯ ತಳಭಾಗವನ್ನು ಹೊಂದಿದ್ದು ಗುಮ್ಮಟಾಕೃತಿಯ ಛಾವಣಿಯನ್ನು ಹೊಂದಿದೆ. ಪ್ರತಿ ಮೂಲೆಗಳಲ್ಲಿ ಕೀರ್ತಿಮುಖಗಳನ್ನು ಲತಾಬಳ್ಳಿಗಳನ್ನು ಶಿಲ್ಪಿಸಿದೆ. ಆರನೆಯ ಭುವನೇಶ್ವರಿಯ ತಳಭಾಗವು ನಕ್ಷತ್ರಾಕಾರವನ್ನು ಹೊಂದಿದ್ದು ಎಲ್ಲಾ ಭಾಗದಲ್ಲೂ ನಕ್ಷತ್ರಾಕಾರದ ಮುಂಚಾಚುಗಳ

ಜೊತೆಗೆ ಸಣ್ಣದಾದ ಸ್ತಂಭಿಕೆಗಳನ್ನು ಹೊಂದಿದೆ. ಗುಮ್ಮಟವು ಹಿಂದಿನ ಭುವನೇಶ್ವರಿಯಂತೆ ಇದ್ದು ನಕ್ಷತ್ರಾಕಾರದಲ್ಲಿ ಚಿತ್ರಿತವಾಗಿದ್ದು 12 ಬಿಂದುಗಳನ್ನು ಹೊಂದಿದೆ. ಏಳನೆಯ ಭುವನೇಶ್ವರಿಯ ಮೇಲ್ಭಾಗದಲ್ಲಿ ಗುಮ್ಮಟವಿದ್ದು ತಳಭಾಗವು ದುಂಡಾಗಿದೆ. ಗುಮ್ಮಟವು ನೇರವಾದ ಪಟ್ಟಿಗಳನ್ನು ಹೊಂದಿದ್ದು ಗುಮ್ಮಟದ ಮಧ್ಯಭಾಗದಲ್ಲಿ ಇಳಿಬಿಟ್ಟ ಪದ್ಮದ ಮೊಗ್ಗಿದೆ. ಎಂಟನೆಯ ಭುವನೇಶ್ವರಿಯು ಕೀರ್ತಿಮುಖ ಮತ್ತು ಬಳ್ಳಿಯ ಅಲಂಕರಣಗಳನ್ನು ಹೊಂದಿದ್ದು ಮಧ್ಯಭಾಗವು ಗುಮ್ಮಟಾಕಾರದಲ್ಲಿದೆ. ಗುಮ್ಮಟವು ಹದಿನಾರು ಕೋನಗಳನ್ನು ಹೊಂದಿದ್ದು ಮಧ್ಯಭಾಗದಲ್ಲಿ ಪದ್ಮವನ್ನು ಶಿಲ್ಪಿಸಿದ್ದು ಇದರ ಮೇಲ್ಭಾಗದಲ್ಲಿ ಹದಿನಾರು ಬಿಂದುವುಳ್ಳ ರೀತಿಯಲ್ಲಿ ಚಿತ್ರಿಸಲಾಗಿದೆ. ಒಂಬತ್ತನೆಯ ಅಂದರೆ ಮಧ್ಯದ ಭುವನೇಶ್ವರಿ ಉಳಿದ ಭುವನೇಶ್ವರಿಗಳಿಗಿಂತ ಅಲಂಕಾರಿಕವಾಗಿದೆ. ಕೆಳಭಾಗದಲ್ಲಿ ಅಷ್ಟಮುಖಗಳಿದ್ದು ಇಲ್ಲಿ ಕೀರ್ತಿಮುಖಗಳು, ಅಷ್ಟದಿಕ್ಪಾಲಕರು ಮತ್ತು ಸಂಗೀತಕಾರರ ಶಿಲ್ಪಗಳಿವೆ. ಇಲ್ಲಿ ಸಳನು ಎರಡು ಹುಲಿಗಳ ಜೊತೆಗೆ ಹೋರಾಡುತ್ತಿರುವ ದೃಶ್ಯವನ್ನು ಶಿಲ್ಪಿಸಲಾಗಿದೆ. ಮೇಲ್ಭಾಗದಲ್ಲಿ ಗುಮ್ಮಟವಿದ್ದು ಇದು ನೇರವಾದ ಪಟ್ಟಿಗಳನ್ನು ಹೊಂದಿದೆ ಮಧ್ಯಭಾಗದಲ್ಲಿ ಇಳಿಬಿಟ್ಟ ಪದ್ಮದ ಮೊಗ್ಗಿದೆ. ಈ ದೇವಾಲಯದ ಮುಖಮಂಟಪ ಹಾಗೂ ಇನ್ನಿತರ ಭುವನೇಶ್ವರಿಗಳು ವೈವಿಧ್ಯಮಯವಾದ ಕೆತ್ತನೆಗಳನ್ನು ಹೊಂದಿವೆ ಹಾಗೂ ಸಾಕಷ್ಟು ಸೂಕ್ಷ್ಮ ಅಲಂಕರಣೆಗಳಿಂದ ಕೂಡಿದೆ.

ವೀರನಾರಾಯಣ ದೇವಾಲಯ ತ್ರಿಕೂಟಾಚಲವಾಗಿದ್ದರೂ ವೀರನಾರಾಯಣನ ಗರ್ಭಗೃಹ ಮಾತ್ರ ಪ್ರತ್ಯೇಕವಾಗಿರುವ ದೇವಾಲಯದಂತೆ ಕಾಣುತ್ತದೆ. ಇದರ ಅಧಿಷ್ಠಾನ ಆರು ಪಟ್ಟಿಕೆಗಳನ್ನು ಹೊಂದಿದ್ದು ಇಲ್ಲಿ ಉಪಾನ, ಕಂಪ, ಪದ್ಮ, ತ್ರಿಪಟ್ಟಕುಮುದ ಮತ್ತು ಎರಡು ಹಂತದ ದಂತಪಂಕ್ತಿ ಇದೆ ಇದರ ಮೇಲ್ಭಾಗದಲ್ಲಿ ಆರು ಚಿತ್ರ ಪಟ್ಟಿಕೆಗಳಿವೆ ಆದರೆ ಅಷ್ಟಾಗಿ ಅಲಂಕಣೆಯಿಲ್ಲ ಭಿತ್ತಿಯನ್ನು ಅರೆಕಂಬಗಳಿಂದ ಚಿತ್ರಿಸಲಾಗಿದೆ ಮೇಲ್ಭಾಗದಲ್ಲಿ ಉದ್ದನೆಯ ಕಪೋತಬಂಧವಿದ್ದು ಅದರ ಮೇಲ್ಭಾಗದಲ್ಲಿ ಎರಡು ಹಂತದ ದಂತಪಂಕ್ತಿಯಿಂದ ಅಲಂಕರಿಸಲಾಗಿದೆ ಇನ್ನೂ ಮೇಲ್ಭಾಗದಲ್ಲಿ ಮೂರು ಹಂತದ ಭದ್ರಶಾಲವನ್ನು ಹೊಂದಿದ್ದು ಅನಂತರದಲ್ಲಿ ಸ್ತೂಪಿ ಹಾಗೂ ಕಳಸವನ್ನು ಕಾಣಬಹುದು. ಶಿಖರದ ಮುಂಭಾಗದ ಸುಕನಾಸದಲ್ಲಿ ಹೊಯ್ಸಳರ ಲಾಂಛನವನ್ನು ಕೆತ್ತಲಾಗಿದೆ. ಪಶ್ಚಿಮ ಭಾಗದ ಮೊದಲ ಭದ್ರಶಾಲದಲ್ಲಿ ಕೀರ್ತಿಮುಖವನ್ನು ಶಿಲ್ಪಿಸಿದ್ದು ಅಲ್ಲಿ ವಿಷ್ಣುವನ್ನು ಕೆತ್ತಲಾಗಿದೆ. ಇನ್ನುಳಿದಂತೆ ಇಲ್ಲಿ ವೇಣುಗೋಪಾಲ, ಕಾಳಿಂಗಮರ್ಧನ, ವಿಷ್ಣುವಿನ ವಿವಿಧ ಭಂಗಿಯ ಶಿಲ್ಪಗಳು, ಸಿಂಹ ಹಾಗೂ ಯಕ್ಷ ಯಕ್ಷಿಣಿಯರನ್ನು ಕಾಣಬಹುದು.

ಉತ್ತರ ಮತ್ತು ದಕ್ಷಿಣದ ಗುಡಿಗಳು ಅಲಂಕರಣೆಯಲ್ಲಿ ದ್ರಾವಿಡ ಮಾದರಿಯನ್ನು ಹೊಂದಿವೆ. ಅದಿಷ್ಠಾನದ ಅಲಂಕರಣೆಯಲ್ಲಿ ವೀರನಾರಾಯಣನ ಗರ್ಭಗೃಹದ ಅಲಂಕರಣೆಯನ್ನೇ ಹೊಂದಿವೆ. ದೇವಾಲಯದ ಮೂರು ಶಿಖರಗಳು ಸಾಮಾನ್ಯವಾಗಿ ಒಂದೇ ಲಕ್ಷಣಗಳನ್ನು ಹೊಂದಿದೆ ಹಾಗೂ ಮೂರು ಹಂತದ ಭದ್ರಶಾಲಗಳನ್ನು ಹೊಂದಿದ್ದು ಅಲ್ಲಲ್ಲಿ ಸಣ್ಣ ಸಣ್ಣ ಶಿಲ್ಪಗಳಿವೆ. ದಕ್ಷಿಣ ಶಿಖರದ ಭದ್ರಾಶಾಲಾಗಳಲ್ಲಿ ಲಕ್ಷ್ಮೀನರಸಿಂಹ, ಯೋಗನರಸಿಂಹ, ಉಗ್ರನರಸಿಂಹ ಮತ್ತು ಬುದ್ಧ ಮುಂತಾದ ಶಿಲ್ಪಗಳನ್ನು ಕಂಡರಿಸಿದೆ. ದಕ್ಷಿಣ ಶಿಖರದ ಸುಕನಾಸದಲ್ಲಿ ವಿಷ್ಣು ಮತ್ತು ಉತ್ತರ ಶಿಖರದ ಸುಕನಾಸದಲ್ಲಿಯೂ ವಿಷ್ಣು ಶಿಲ್ಪವನ್ನು ಕೆತ್ತಲಾಗಿದೆ ಪಶ್ಚಿಮ ಶಿಖರದ ಸುಕನಾಸದಲ್ಲಿ ಜನಾರ್ಧನ ಶಿಲ್ಪವಿದೆ. ಜಿಲ್ಲೆಯಲ್ಲಿರುವ ತ್ರಿಕೂಟ ದೇವಾಲಯಗಳಲ್ಲಿ ಮೂರು ಶಿಖರಗಳು ಇರುವುದು ಹಿರೇನಲ್ಲೂರಿನ ಮಲ್ಲಿಕಾರ್ಜುನಸ್ವಾಮಿ ದೇವಾಲಯವನ್ನು ಬಿಟ್ಟರೆ ಇದೇ ದೇವಾಲಯ ಮೂರು ಗರ್ಭಗೃಹದ ಮೇಲೂ ಶಿಖರಗಳನ್ನು ಹೊಂದಿದೆ.

ಮಂಟಪಗಳ ಮೇಲೆ ಬಾಗಿರುವ ಕಟಾಂಜನದಲ್ಲಿ ಶಿಲ್ಪಗಳನ್ನು ಕೆತ್ತಲಾಗಿದ್ದು ಅಗ್ನೇಯದಿಂದ ಭೀಮ–ನಾಗರಾಜರ ಯುದ್ಧ, ಸುಭದ್ರೆಯನ್ನು ಅಪಹರಿಸಿದ ಅರ್ಜುನನನ್ನು ಬಲರಾಮನು ಬೆನ್ನಟ್ಟಿರುವುದು, ಪರಶುರಾಮನು ತನ್ನ ತಾಯಿಯ ಶಿರಚ್ಛೇದ ಮಾಡಿರುವುದು. ವೇಣುಗೋಪಾಲ, ಧೇನುಕಾಸುರ ಸಂಹಾರ, ಗಾರ್ಧಭಾಸುರ ಸಂಹಾರ, ಹಯಾಸುರ ಸಂಹಾರ. ಗೋವರ್ಧನಾಧರಿ, ಅರ್ಜುನನು ಜಳಕ ಮಾಡುತ್ತಿದ್ದಾಗ ಕೃಷ್ಣನು ಅಭಿಮನ್ಯು ವಧೆಯ ವೃತ್ತಾಂತವನ್ನು ತಿಳಿಸುವುದು. ಮತ್ತೊಂದು ಮೂಲೆಯಲ್ಲಿ ಕಾಳಿಂಗಮರ್ಧನ ಎರಡೂ ಕೋತಿಗಳು ಮೋಹಿನಿ–ಕಪಿ, ಮೋಹಿನಿ–ಭಸ್ಮಾಸುರ, ಮಿಥುನ ಶಿಲ್ಪ, ನಾಟ್ಯಗಾರ್ತಿಯರು, ವಾದ್ಯವಾದಕರ ಶಿಲ್ಪಗಳಿವೆ, ಉತ್ತರ ಕಟಾಂಜನದಲ್ಲಿ ವಿಗ್ರಹಗಳಿಲ್ಲ.

**ಪ್ರವಾಸಿಗರಿಗಿರುವ ಅನುಕೂಲಗಳು**

1. ಖಾಸಗಿ ಸರ್ಕಾರಿ ಬಸ್, ಟ್ಯಾಕ್ಸಿ, ಆಟೋ ಸೌಲಭ್ಯವಿದೆ.
2. ಹೋಟೆಲ್ ವ್ಯವಸ್ಥೆ ಇದೆ.

**ಪ್ರವಾಸಿಗರಿಗಿರುವ ಅನಾನುಕೂಲಗಳು**

1. ವಸತಿ ವ್ಯವಸ್ಥೆ ಇಲ್ಲ.
2. ದೇವಾಲಯವು ಊರಿನ ಮಧ್ಯಭಾಗದಲ್ಲಿರುವುದರಿಂದ ವಾಹನಗಳನ್ನು ಪಾರ್ಕಿಂಗ್ ಮಾಡಲು ಕಷ್ಟವಾಗುತ್ತದೆ. ಪಾರ್ಕಿಂಗ್ ಸೌಲಭ್ಯವಿಲ್ಲ.

**ನೇಮಿನಾಥ ಬಸದಿ, ಅಂಗಡಿ:** ಇದು ಊರಿನ ದಕ್ಷಿಣ ಭಾಗದಲ್ಲಿದೆ. ಉತ್ತರಾಭಿಮುಖವಾಗಿರುವ ಇದನ್ನು ಕೆಂಪು ಗ್ರಾನೈಟ್ ಶಿಲೆಯಿಂದ ಕಟ್ಟಲಾಗಿದೆ. ಸು. 3 ಅಡಿ ಎತ್ತರದ ಅಧಿಷ್ಠಾನದ ಮೇಲಿರುವ ಈ ಬಸದಿ ಹೊಯ್ಸಳರ ಕಾಲದ ರಚನೆ ಸಾಮಾನ್ಯವಾದ ಅಧಿಷ್ಠಾನವನ್ನು ಹೊಂದಿದ್ದು ಒಂದು ಗರ್ಭಗೃಹ, ಸುಕನಾಸಿ ಮತ್ತು ನವರಂಗವನ್ನು ಹೊಂದಿದೆ. ಆದರೆ ಮೂಲ ಬಸದಿಯಲ್ಲಿ ಗರ್ಭಗೃಹ ಮಾತ್ರ ಉಳಿದಿದ್ದು ಇನ್ನುಳಿದ ಭಾಗಗಳು ಭಗ್ನವಾಗಿದ್ದು ನವರಂಗದ ಭಿತ್ತಿಯನ್ನು ದಿಂಡುಕಲ್ಲು ಮತ್ತು ಸೀಮೆಂಟ್‌ನ್ನು ಬಳಸಿ ಕಟ್ಟಲಾಗಿದೆ. ಮಳೆಯಿಂದ ರಕ್ಷಿಸಲು ಮೇಲ್ಛಾವಣಿಗೆ ಹೆಂಚನ್ನು ಹಾಕಲಾಗಿದೆ. ಮೇಲ್ಭಾಗದಲ್ಲಿ 4 ಅಡಿ ಎತ್ತರದ ಗೋಡೆಯನ್ನು ಕಟ್ಟಿದ್ದು ಕ್ರಿ.ಶ. 1054ರ ಶಾಸನದಲ್ಲಿ ಹೊಯ್ಸಳ ದೊರೆ ವಿನಯಾದಿತ್ಯನ ಕಾಲದಲ್ಲಿ ಜಾಕಿಯಬ್ಬೆಗನ್ತಿಯು ಬಸದಿಗೆ ಭೂಮಿಯನ್ನು ದಾನ ನೀಡಿದ ಉಲ್ಲೇಖವಿದೆ.[84] ಕ್ರಿ.ಶ. 1063ರ ಶಾಸನದಲ್ಲಿ ಪೊಯ್ಸಳಾಚಾರಿಯ ಮಗ ಮಾಣಿಕ್ಯ ಪೊಯ್ಸಳಾಚಾರಿಯು ಮಕರ ಜಿನಾಲಯವನ್ನು ಕಟ್ಟಿಸಿದನೆಂದು ಉಲ್ಲೇಖವಿದೆ.[85] ಆದುದರಿಂದ ಇಲ್ಲಿ ಎರಡು ಜಿನಬಸದಿಗಳಿದ್ದು ಯಾವ ಬಸದಿಯನ್ನು ಯಾವ ಕಾಲದಲ್ಲಿ ಕಟ್ಟಿರಬಹುದೆಂದು ಖಚಿತವಾಗಿ ಹೇಳಲಾಗುವುದಿಲ್ಲವಾದರೂ ಕ್ರಿ.ಶ. 1054ಕ್ಕಿಂತ ಸ್ವಲ್ಪ ಹಿಂದಿನ ವರ್ಷದಲ್ಲಿ ಕಟ್ಟಲಾಗಿದೆ ಎಂದು ಹೇಳಬಹುದು.

ಗರ್ಭಗೃಹದಲ್ಲಿ ಪದ್ಮಪೀಠದ ಮೇಲೆ ಐದು ಸಿಂಹಗಳ ಚಿತ್ರವನ್ನು ಕೆತ್ತಿದೆ. ಒಂದೇ ಪೀಠದ ಮೇಲಿರುವ ಆದಿನಾಥ, ಶಾಂತಿನಾಥ ಮತ್ತು ನೇಮಿನಾಥ ಶಿಲ್ಪಗಳು ಕಾಯೋತ್ಸರ್ಗ ಭಂಗಿಯಲ್ಲಿವೆ. ಇವುಗಳ ತಲೆಯ ಮೇಲ್ಭಾಗದಲ್ಲಿ 3 ಛತ್ರಿಗಳನ್ನು ಕೆತ್ತಲಾಗಿದ್ದು ಸುಂದರ ಪ್ರಭಾವಳಿಯನ್ನು ಹೊಂದಿವೆ. ಈ ಶಿಲ್ಪಗಳು ಹಳೇಬೀಡಿನ ಹತ್ತಿರವಿರುವ ಬಸ್ತಿಹಳ್ಳಿಯಲ್ಲಿರುವ ಆದಿನಾಥ ಬಸದಿಯಲ್ಲಿರುವ ಶಿಲ್ಪಗಳ ಲಕ್ಷಣವನ್ನು ಹೊಂದಿವೆ.[86]

ಇಲ್ಲಿ ತೆರೆದ ಸುಕನಾಸಿಯಿದ್ದು ಅದರಲ್ಲಿ ಯಾವುದೇ ಅಲಂಕರಣವಿಲ್ಲ. ಎಡಭಾಗದಲ್ಲಿ 4 ಅಡಿ ಎತ್ತರದ ಗೋಮುಖ ಸರ್ವಾನ್ನ ಯಕ್ಷನ ಶಿಲ್ಪವಿದ್ದು ಬಲಭಾಗದಲ್ಲಿ 5 ಅಡಿ ಎತ್ತರವಿರುವ ನಿಂತಿರುವ ಕೂಷ್ಮಾಂಡಿನಿಯ (ಅಂಬಿಕಾ ಯಕ್ಷಿ) ಶಿಲ್ಪವಿದೆ.[87] ಈ ಶಿಲ್ಪದಲ್ಲಿ ಅಂಬಿಕೆ ನಿಂತಿದ್ದು ದ್ವಿಭುಜ ಹೊಂದಿದ್ದು ಎಡಮಗ್ಗುಲಲ್ಲಿ ನಿಂತ ನಿರ್ವಾಣದಲ್ಲಿರುವ ಮಗುವಿನ ಶಿಲ್ಪವಿದೆ. ಯಕ್ಷಿಯು ಆಮ್ರವನದ ಕೆಳಗೆ ನಿಂತಿರುವಂತೆ ಶಿಲ್ಪಿ ಶಿಲ್ಪಿಸಿರುತ್ತಾನೆ ಮಗುವಿನ ಎಡಗೈಲಿ ಕಬ್ಬಿನ ಜಲ್ಲೆ ಇದೆ ಮಗುವಿನ ತಲೆಯ ಮೇಲೆ ಅಂಬಿಕೆಯ ಕೈ ಇದೆ ಬಲಗಡೆ ಸಿಂಹದ ಮೇಲೆ ಇನ್ನೊಂದು ಮಗು ಕುಳಿತಿದ್ದು ಈಕೆಯ ಬಲಗೈಲಿ ಮಾವಿನ ಗೊಂಚಲಿದೆ. ಕಾಲಲ್ಲಿ ದಪ್ಪ ಕಡಗಗಳಿವೆ ಸಿಂಹದ

ಎಡಪಾದ ಮೇಲಕ್ಕೆತ್ತಿದೆ. ಇದೇ ರೀತಿ ಶ್ರವಣಬೆಳಗೊಳದ ಚಂದ್ರಪ್ರಭಬಸದಿಯ ಯಕ್ಷಿಯ ಶಿಲ್ಪದ ಕೆಳಗಿರುವ ಸಿಂಹವೂ ಎಡಗಾಲನ್ನು ಮೇಲಕ್ಕೆ ಎತ್ತಿದೆ. ಹೊಯ್ಸಳರ ಕಾಲದ ಅನೇಕ ದೇವಾಲಯಗಳ ಶಿಲ್ಪದಲ್ಲಿ ಈ ಅಂಬಿಕೆಯ ಶಿಲ್ಪವನ್ನು ಅನುಸರಿಸಿದ್ದ ಸಾಲಭಂಜಿಕೆಗಳ ಸ್ಥಾನದಲ್ಲಿ ಬಂದಿರುವುದು ಈ ಶಿಲ್ಪದ ಜನಪ್ರಿಯತೆಗೆ ಸಾಕ್ಷಿಯಾಗಿದೆ.[88] ನವರಂಗದಲ್ಲಿ 4 ಕಂಬಗಳಿದ್ದು ಕೆಳಭಾಗದಲ್ಲಿ ಚೌಕಾಕಾರವಾಗಿದ್ದು ಅನಂತರದಲ್ಲಿ 8 ಮುಖದ ಸಣ್ಣ ಪಟ್ಟಿಕೆಯಿದ್ದು ಉಳಿದ ಭಾಗ ದುಂಡಗಿದ್ದು ಮೇಲ್ಭಾಗದಲ್ಲಿ ದುಂಡನೆಯ ಮುಚ್ಚಾಳಾಕಾರದ ರೀತಿಯಲ್ಲಿದೆ. ಇವು ಕರ್ನಾಟಕದಲ್ಲಿ ಚೋಳರ ದೇವಾಲಯಗಳಲ್ಲಿ ಕಂಡು ಬರುವಂತಹ ಲಕ್ಷಣವನ್ನು ಹೊಂದಿವೆ. ಇದು ಒಂಬತ್ತು ಅಂಕಣವಿದ್ದು ಮಧ್ಯದ ಅಂಕಣದ ಭುವನೇಶ್ವರಿಯಲ್ಲಿ ಪದ್ಮದ ಅಲಂಕರಣೆಯಿದೆ. ಗರ್ಭಗೃಹ ಮತ್ತು ಸುಕನಾಸಿಯ ಹೊರಭಿತ್ತಿಯನ್ನು ಅರೆಕಂಬಗಳಿಂದ ಅಲಂಕರಿಸಲಾಗಿದೆ.

ಇದರ ಪಕ್ಕದಲ್ಲಿ ಶಾಂತಿನಾಥ ಬಸದಿಯಿದೆ ಇದು ಇತ್ತೀಚಿನ ದಿಂಡುಕಲ್ಲು ಮತ್ತು ಸೀಮೆಂಟನ್ನು ಬಳಸಿ ಕಟ್ಟಲಾದ ಕಟ್ಟಡ ಇದರಲ್ಲಿ 8 ಅಡಿ ಎತ್ತರದ ಪದ್ಮಾಸನದಲ್ಲಿ ಕುಳಿತಿರುವ ಮಹಾವೀರನ ಶಿಲ್ಪವಿದೆ. ಇದರ ತಲೆಯ ಮೇಲ್ಭಾಗದಲ್ಲಿ ಮೂರು ಹಂತದ ಛತ್ರಿಯನ್ನು ಕೆತ್ತಲಾಗಿದೆ. ಇದಕ್ಕೆ ಸುಂದರವಾದ ಪ್ರಭಾವಳಿಯಿದ್ದು ಇಕ್ಕೆಲಗಳಲ್ಲಿ 3 ಅಡಿ ಎತ್ತರವಾದ ಚಾಮರಧಾರಿಣಿಯರನ್ನು ಶಿಲ್ಪಿಸಲಾಗಿದೆ. ಸಿಂಹ, ಮಕರವ್ಯಾಳ, ಬಳ್ಳಿ, ಸುರುಳಿ, ಕೀರ್ತಿಮುಖಗಳ ಸೂಕ್ಷ್ಮ ಕೆತ್ತನೆ ಇದ್ದು ಪೀಠದಲ್ಲಿ ಸಿಂಹವನ್ನು ಕೆತ್ತಲಾಗಿದೆ. ಇದರ ಮುಂಭಾಗದಲ್ಲಿ 3 ಅಡಿ ಎತ್ತರದ ಧ್ಯಾನಸಾಕ್ತನಾಗಿ ಕುಳಿತಿರುವ ಮಹಾವೀರನ ಶಿಲ್ಪವಿದೆ. ಆದರೆ ಇವುಗಳನ್ನು ಪ್ರತಿಷ್ಠಾಪನೆ ಮಾಡಿದ ಕಾಲವಾಗಲಿ, ವ್ಯಕ್ತಿಯ ಹೆಸರಾಗಲಿ ತಿಳಿದುಬಂದಿಲ್ಲ. ಆದರೂ ಇವು ಹೊಯ್ಸಳರ ಕಾಲದ ಶಿಲ್ಪಶೈಲಿಯ ಎಲ್ಲ ಲಕ್ಷಣಗಳನ್ನು ಹೊಂದಿವೆ. ಈ ಎರಡು ಬಸದಿಗಳ ಮಧ್ಯಭಾಗದಲ್ಲಿ 8 ನಿಸದಿ ಕಲ್ಲುಗಳಿವೆ ಪ್ರತಿಯೊಂದು ಕಲ್ಲಿನ ಮೇಲ್ಭಾಗದಲ್ಲಿ ಜಿನ ಶಿಲ್ಪವನ್ನು ಕೆತ್ತಲಾಗದೆ.

**ಚಂದ್ರನಾಥ ಬಸದಿ, ಕಳಸ:** ಈ ಮೂಲ ಬಸದಿ ಭಗ್ನವಾಗಿದ್ದು ಈಗಿರುವ ಬಸದಿಯನ್ನು ಉತ್ತೀಚೆಗೆ ನಿರ್ಮಿಸಿದೆ. ಇಲ್ಲಿರುವ ಶಿಲ್ಪ ಮಾತ್ರ ಮೂಲ ಬಸದಿಯದಾಗಿದ್ದು ಉಳಿದ ಕಟ್ಟಡದ ವಾಸ್ತು ಮಾತ್ರ ಇತ್ತೀಚಿನದು ಬಸದಿಯಲ್ಲಿ 3 ಅಡಿ ಎತ್ತರದ ಚಂದ್ರನಾಥ ಶಿಲ್ಪವಿದೆ. ಇದರ ಬದಿಯಲ್ಲಿ ಕ್ರಿ.ಶ. 12ನೆಯ ಶತಮಾನದ ಸಂಸ್ಕೃತ ಶಾಸನವಿದ್ದು ಈ ಬಸದಿಯನ್ನು ದೇವಚಂದ್ರ ಎಂಬುವನು ಮಾಡಿಸಿದನೆಂದು ಈ ಶಾಸನದಿಂದ ತಿಳಿದುಬರುತ್ತದೆ. ಈತ ಜೈನ ಮುನಿ ಲಲಿತಕೀರ್ತಿದೇವನ ಅನುಯಾಯಿಯಾಗಿದ್ದ. ಈ ಬಸದಿಯಲ್ಲಿ ಚತುರ್ವಿಂಶತಿ ತೀರ್ಥಂಕರ

